# ಒಥೆಲ್ಲೋ

ಮತ್ತು ಇತರ

# ಷೇಕ್ಸ್‌ಪಿಯರ್ ನಾಟಕ ಕಥೆಗಳು

ಗೀರ್ವಾಣಿ

ಅಶೋಕ ಸಾಹಿತ್ಯ ಬೆಂಗಳೂರು

ಪ್ರಥಮ ಮುದ್ರಣ: ಡಿಸೆಂಬರ್ ೧೯೫೭

ಮಾರಾಟದ ಪೂರ್ಣಹಕ್ಕುದಾರರು

**ಸ್ಟ್ಯಾಂಡರ್ಡ್ ಬುಕ್ ಡಿಪೋ**

ಅವೆನ್ಯೂರೋಡ್ :: ಬೆಂಗಳೂರು 2

ಮುದ್ರಣ :

ಶ್ರೀ ಸತ್ಯನಾರಾಯಣ ಪ್ರೆಸ್

ಅರಳೇಪೇಟೆ :: ಬೆಂಗಳೂರು ೨.

# ಎರಡು ಮಾತು

ಷೇಕ್ಸ್‌ಪಿಯರನ ಕೃತಿಗಳಲ್ಲಿ ಹಲವನ್ನಾದರೂ ಓದದೆ ಇಂಗ್ಲಿಷ್ ಭಾಷೆಯ ಅಧ್ಯಯನ ಪೂರ್ಣವೆನಿಸದೆಂಬುದು ವಿದ್ಯಾರ್ಥಿಗಳಾಗಿದ್ದವರೆಲ್ಲರಿಗೂ ತಿಳಿದ ವಿಷಯ. ಹೆಚ್ಚಾಗಿ ಆಂಗ್ಲಭಾಷೆಯ ಪರಿಚಯವಿಲ್ಲದ ಹಿರಿಯ-ಕಿರಿಯರೂ ಸಹ ಅರಿತವರಿಂದ ಈ ನಾಟಕಗಳ ಕಥಾಪ್ರಸಂಗವನ್ನು ಕೇಳಿ ಆನಂದಿಸುವುದೂ ವಿರಳವಲ್ಲ. ಇದು ಕೇವಲ ಅಂತಹವರಿಗಾಗಿ, ಷೇಕ್ಸ್‌ಪಿಯರನ ಹಲವು ಹೆಸರಾಂತ ನಾಟಕಗಳ ಕಥಾಭಾಗವನ್ನು ಮಾತ್ರ ಪರಿಚಯ ಮಾಡಿಕೊಡಲೋಸ್ಕರ ನಡೆಸಿರುವ ನನ್ನ ಪ್ರಯತ್ನ. ಕಥೆಯ ಸರಣಿಯಲ್ಲಿ ಮೂಲಗ್ರಂಥದ ಅನುಪಮ ಸೊಗಸನ್ನು ಸಾಧ್ಯವಾದಷ್ಟು ಉಳಿಸಲು ಪ್ರಯತ್ನಿಸಲಾಗಿದೆ. ಮೂಲಗ್ರಂಥವನ್ನೇ ಓದಿ ಆನಂದಿಸಿದವರಿಗೆ ಇದು ರುಚಿಸಲಾರದು. ಆದರೆ ಮೂಲವನ್ನೋದಲು ಸಾಕಷ್ಟು ವಿರಾಮವಾಗಲೀ, ಆಸಕ್ತಿ ಅನುಕೂಲಗಳಾಗಲೀ ಇಲ್ಲದವರಿಗೆ ಇದು ಸ್ವಲ್ಪಮಾತ್ರವಾದರೂ ಷೇಕ್ಸ್‌ಪಿಯರನ ಪರಿಚಯಮಾಡಿಕೊಟ್ಟು ಅವನ ಕೃತಿಗಳಲ್ಲಿ ಆಸಕ್ತಿ ಕೆರಳಿಸುವುದಾದಲ್ಲಿ ಭಾಷಾಂತರದ ಉದ್ದಿಶ್ಯ ಸಫಲಗೊಂಡಂತಾಗುತ್ತದೆ. ಮೂಲ ಆಂಗ್ಲಭಾಷೆಯಲ್ಲಿಯೇ ಓದುಗರ ಆಸಕ್ತಿಯನ್ನು ಷೇಕ್ಸ್‌ಪಿಯರನತ್ತ ಹರಿಸುವ ಸಲುವಾಗಿ ಚಾರ್ಲ್ಸ್ ಮತ್ತು ಮೇರಿ ಲ್ಯಾಂಬ್ ಆತನ ನಾಟಕಗಳ ಕಥಾಭಾಗವನ್ನು ಗದ್ಯರೂಪದಲ್ಲಿ ತಿಳಿಸುವ ಭಾರ ಹೊತ್ತರೆಂದಮೇಲೆ ಕನ್ನಡದಲ್ಲಿ ಇಂತಹ ಒಂದು ಪ್ರಯತ್ನ ಅಗತ್ಯವೆಂಬುದು ವೇದ್ಯವಾಗುತ್ತದೆ.

ಅಶೋಕ ಸಾಹಿತ್ಯ ಮಾಲೆಯ ಒಡೆಯರ ಪ್ರೇರಕಶಕ್ತಿಯಿಂದಲ್ಲದಿದ್ದರೆ ಈ ಪ್ರಯತ್ನವೆಂದೂ ಕಾಗದದಮೇಲೆ ಮೂಡುತ್ತಿರಲಿಲ್ಲ. ಆದ್ದರಿಂದ ಕೇವಲ ಔಪಚಾರಿಕವೆನಿಸಬಹುದಾದರೂ ಅವರಿಗೆ ಕೃತಜ್ಞತೆ ಸಲ್ಲಿಸದಿರಲಾರೆ. ಮುದ್ರಣ ಕಾರ್ಯ ನಿರ್ವಹಿಸಿರುವ ಸತ್ಯನಾರಾಯಣ ಪ್ರೆಸ್ ಮಾಲಿಕರಿಗೂ ನನ್ನ ನೆನಕೆ ಸಲ್ಲುಸುತ್ತದೆ.

೨೫ ನವೆಂಬರ್ ೧೯೫೭
ಮೈಸೂರು

— ಗೀರ್ವಾಣಿ

# ಪರಿವಿಡಿ

# ಒ ಥೆ ಲ್ಲೋ ೯

ಧನಿಕ ಬ್ರಬಾನ್ಸಿಯೋ ಇಟಲಿ ದೇಶದ ವೆನಿಸಿನ ಸೆನೆಟ್ ಸಭಾಸದ. ಸುಂದರಿಯೂ ವಿನಯಶೀಲೆಯೂ ಆದ ಡೆಸ್‌ಡಿಮೋನಾ ಅವನ ಮಗಳು. ಅವಳ ಅನೇಕ ಸದ್ಗುಣಗಳ ಸಲುವಾಗಿಯೂ, ಅವಳ ಐಶ್ವರ್ಯಕ್ಕೆ ಆಸೆ ಪಟ್ಟೊ, ಬಗೆ ಬಗೆಯ ಜನರು ಅವಳನ್ನು ಕುರಿತು ಕನ್ಯಾರ್ಥಿಗಳಾಗಿ ಬರುತ್ತಿದ್ದರು. ಆದರೆ ಅವಳ ಮಾತೃಭೂಮಿಯವರೂ, ಅವಳದೇ ಬಗೆಯ ರೂಪಿನವರೂ ಆದವರಲ್ಲಿ ಯಾರೂ ಅವಳ ಕಟಾಕ್ಷಕ್ಕೆ ಪಾತ್ರರಾಗಲಿಲ್ಲ. ಉದಾತ್ತ ಚರಿತಳಾದ ಈ ರಮಣಿ ಪುರುಷರ ರೂಪಕ್ಕಿಂತ ಅವರ ಚಿತ್ತಶುದ್ಧಿಯನ್ನು ಹೆಚ್ಚಾಗಿ ಗೌರವಿಸುತ್ತಿದ್ದಳು. ಕಪ್ಪುವರ್ಣದ, 'ಮೂರ್' ಬುಡಕಟ್ಟಿಗೆ ಸೇರಿದ ಗಣ್ಯಪುರುಷನೊಬ್ಬನು ಅವಳ ತಂದೆಗೆ ಪ್ರೀತಿಪಾತ್ರನಾಗಿದ್ದು, ಆಗಾಗ್ಗೆ ಆಹ್ವಾನಿತನಾಗಿ ಅವಳ ಮನೆಗೆ ಬರುತ್ತಿದ್ದನು. ಡೆಸ್‌ಡಿಮೋನಾ ಆತನಲ್ಲಿ ಪೂರ್ಣ ಅನುರಕ್ತಳಾಗಿದ್ದಳು. ಅವಳ ಈ ವಿಲಕ್ಷಣ ವೈಶಿಷ್ಟ್ಯವನ್ನು ಅನುಕರಣಾರ್ಹವೆನ್ನುವುದಕ್ಕಿಂತ ಶ್ಲಾಘನೀಯವೆಂದು ಹೇಳಬಹುದು.

ಡೆಸ್‌ಡಿಮೋನಾ ತನ್ನ ಪ್ರೇಮಿಯಾಗಿ ಆರಿಸಿಕೊಂಡಿದ್ದ ಪುರುಷನ ವಿಷಯದಲ್ಲಿ ಅವಳನ್ನು ಪೂರ್ತಿಯಾಗಿ ಹಳಿಯುವಂತಿರಲಿಲ್ಲ. ಒಥೆಲ್ಲೋನ ಕಪ್ಪುವರ್ಣವನ್ನು ಬಿಟ್ಟರೆ, ಈ ಉಚ್ಚ ದರ್ಜೆಯ 'ಮೂರ್' ಎಂತಹ ಶ್ರೇಷ್ಠಳಾದ ರಮಣಿಗಾದರೂ ಪ್ರೇಮಪಾತ್ರನಾಗಬಲ್ಲವನು. ಅವನು ಬಹು ಪರಾಕ್ರಮಿಯಾದ ಸೈನಿಕ; ಟರ್ಕಿಯವರೊಂದಿಗೆ ನಡೆದ ಎಷ್ಟೋ ರಕ್ತಪಾತದ ಯುದ್ಧಗಳಲ್ಲಿ ತನ್ನ ಸಾಹಸವನ್ನು ಪ್ರದರ್ಶಿಸಿ ಆ ಮೂಲಕ ವೆನಿಸ್ ನಾಡಿನ ಸೇವೆಯಲ್ಲಿ ಸೇನಾಪತಿಯ ದರ್ಜೆಗೇರಿದ್ದನು. ಇಡೀ ದೇಶವೇ ಅವನನ್ನು ಗೌರವಿಸುತ್ತಿತ್ತು. ಅವನಲ್ಲಿ ವಿಶ್ವಾಸ ತಳೆದಿದ್ದಿತು.

ಹಿಂದೆ ಅವನು ಉತ್ತಮ ಪ್ರವಾಸಿ ಯಾಗಿದ್ದವನು; ಡೆಸ್‌ಡಿಮೋನಾ, ಸ್ತ್ರೀ ಸಹಜ ಕುತೂಹಲದಿಂದ, ಅವನ ಸಾಹಸದ ಕತೆಗಳನ್ನು ಅವನ ಬಾಯಿಂದಲೇ ಕೇಳಲು ಬಹು ಇಷ್ಟಪಡುತ್ತಿದ್ದಳು. ಬಹು ಹಿಂದಿನ ನೆನಪುಗಳೆಲ್ಲ ಅವನ ಕಥನದಲ್ಲಿ ಹಾದುಹೋಗುತ್ತಿದ್ದವು. ತಾನು ಎದುರಿಸಿದ್ದ ಯುದ್ಧಗಳು, ಮುತ್ತಿಗೆಗಳು, ಧಾಳಿಗಳು, ಭೂಮಿಯ ಮೇಲೂ, ನೀರಿನ ಮೇಲೂ ತಾನೊಳಗಾಗಿದ್ದ ಆಪತ್ತುಗಳು; ಸುರಂಗಗಳನ್ನು ದಾಟಿದಾಗಲೋ, ಫಿರಂಗಿಗಳ ಬಾಯಿಯವರೆಗೆ ನುಗ್ಗಿ ಹೋದಾಗಲೋ, ಕೂದಲೆಳೆಯಷ್ಟರಲ್ಲಿ ತಾನು ತಪ್ಪಿಸಿಕೊಂಡುದು; ಸೊಕ್ಕಿದ ಶತ್ರು ಅವನನ್ನು ಸೆರೆಹಿಡಿದು ಗುಲಾಮನನ್ನಾಗಿ ಮಾರಿದುದು; ಆ ನಾಡಿನಲ್ಲಿ ತಾನು ಪಡಬಾರದ ಕಷ್ಟಪಟ್ಟು, ಕೊನೆಗೆ ತಪ್ಪಿಸಿಕೊಂಡುದು-ಇವೆಲ್ಲವನ್ನೂ ರಸವತ್ತಾಗಿ ವರ್ಣಿಸುತ್ತಿದ್ದನು. ಇದರೊಂದಿಗೆ ವಿದೇಶದ ನಾಡುಗಳಲ್ಲಿ ತಾನು ಕಂಡಿದ್ದ ಇತರ ಅದ್ಭುತಗಳನ್ನು ವಿವರಿಸುತ್ತಿದ್ದನು. ಅಲ್ಲಿನ ವಿಶಾಲ ಅರಣ್ಯ ಪ್ರದೇಶಗಳು, ಚಮತ್ಕಾರಿಕ ಗುಹೆಗಳು, ಕಲ್ಲುಗಣಿಗಳು, ಬಂಡೆಗಳು, ಶಿಖರದಿಂದ ಮೋಡವನ್ನೇ ಮುಟ್ಟಿ ಮೆರೆಯುವುವೋ ಎಂಬಂತಿರುವ ಪರ್ವತಗಳು; ಕ್ರೂರ ಅನಾಗರಿಕ ದೇಶಗಳು, ಅಲ್ಲಿನ ನರಭಕ್ಷಕರು; ಆಫ್ರಿಕಾದಲ್ಲಿನ ತೋಳಕೆಳಗೆ ತಲೆ ಬೆಳೆದಿರುವಂತಹ ಒಂದು ಬಗೆಯ ಜನ-ಇವೆಲ್ಲವೂ ಅವನ ಕಥನದಲ್ಲಿ ವರ್ಣಿತವಾಗುತ್ತಿದ್ದವು. ಈ ಎಲ್ಲ ಪ್ರವಾಸ ಕಥನಗಳಲ್ಲಿ ಡೆಸ್‌ಡಿಮೋನಳ ಆಸಕ್ತಿ ಬಲವಾಗಿ ಸಿಲುಕಿ ಬಿಡುತ್ತಿತ್ತು. ಕಥನದ ಮಧ್ಯೆ ಅವಳು ಯಾವುದಾದರೂ ಮನೆಗೆಲಸದ ಸಲುವಾಗಿ ಎದ್ದು ಹೋಗಬೇಕಾದ ಸಂದರ್ಭ ಬಂದಾಗ, ತ್ವರೆಯಿಂದ ಆ ಕೆಲಸವನ್ನು ಮುಗಿಸಿ ಅವಳು ಓಡಿಬರುತ್ತಿದ್ದಳು. ಆಶೆದುಂಬಿ, ಕಿವಿಗಳನ್ನರಳಿಸಿ ಒಥೆಲ್ಲೋನ ಪ್ರತಿ ಮಾತನ್ನೂ ಭಕ್ಷಿಸುತ್ತಿದ್ದಳು. ಹೀಗಿದ್ದಾಗ ಒಮ್ಮೆ ಅವನು ಉಚಿತ ಅವಕಾಶವೊಂದನ್ನು ಉಪಯೋಗಿಸಿಕೊಂಡು, ತನ್ನ ಜೀವನದ ಪೂರ್ಣಕತೆಯನ್ನು ಅವನ ಬಾಯಿಂದಲೇ ಹೇಳಬೇಕೆಂಬ ಕೋರಿಕೆಯನ್ನು ಅವಳಿಂದ ಹೊರಡಿಸಿದನು. ನಂತರ ಆ ಕೋರಿಕೆಯನ್ನು ಮನ್ನಿಸಿದ್ದಲ್ಲದೆ, ತನ್ನ ತಾರುಣ್ಯದಲ್ಲುಂಟಾಗಿದ್ದ ಯಾವುದೋ ಆಪತ್ತಿನ ಆಘಾತದ ವಿಷಯವನ್ನು ಹೇಳಿದಾಗ ಅವಳು ಪರವಶಳಾಗಿ ಕಣ್ಣೀರು ಹರಿಸುವಂತೆಯೂ ಮಾಡಿದ್ದನು.

ಹೀಗೆ ಅವನು ಕಥೆ ಹೇಳಿ ಮುಗಿಸಿದ್ದಾದ ಮೇಲೆ, ಅವನ ಕಷ್ಟ-ಶ್ರಮಕ್ಕಾಗಿ ಡೆಸ್‌ಡಿಮೋನಾಳಿಂದ ಅದೆಷ್ಟೋ ದೀರ್ಘ ನಿಶ್ವಾಸಗಳು ಹೊರ

ಬಿದ್ದವು. ಅವೆಲ್ಲ ಬಹು ಅದ್ಭುತವಾದವೆಂದೂ, ಅಷ್ಟೇ ಮಟ್ಟಿಗೆ ಕರುಣಾಜನಕವೆಂದೂ ಅವಳು ತನ್ನ ಮಧುರವಾಕ್ಕುಗಳಲ್ಲಿ ತಿಳಿಸಿದಳು. ತಾನದನ್ನು ಕೇಳದಿದ್ದರೇ ಒಳ್ಳೆಯದಾಗುತ್ತಿದೆಂದು ಭಾವಿಸುವುದಾದರೂ ಸಹ, ವಿಧಿ ತನ್ನನ್ನು ಅಂತಹ ಪುರುಷನನ್ನಾಗಿ ಮಾಡಬಾರದಿತ್ತೇ ಎಂದು ಆಶಿಸುವುದಾಗಿಯೂ ಹೇಳಿದಳು. ನಂತರ ಅವಳು ಅವನಿಗೆ ಧನ್ಯವಾದಗಳನ್ನರ್ಪಿಸುತ್ತಾ, ಒಂದು ವೇಳೆ ಅವಳನ್ನು ಪ್ರೇಮಿಸುವಂತಹ ಮಿತ್ರ ಒಥೆಲ್ಲೋಗಿದ್ದಲ್ಲಿ, ಅಂತಹವನಿಗೆ ಕೇವಲ ಈ ಬಗೆಯಲ್ಲಿ ತನ್ನ ಕಥೆ ಹೇಳುವುದನ್ನು ಒಥೆಲ್ಲೋ ಬೋಧಿಸಿದಲ್ಲಿ, ಅಷ್ಟರಿಂದಲೇ ಆ ಮಿತ್ರ ಅವಳ ಅನುರಾಗವನ್ನು ಗಳಿಸಬಹುದೆಂದು ನುಡಿದಳು. ಇಷ್ಟು ಅರ್ಥಗರ್ಭಿತವಾಗಿ ಅವಳು ಸುಳಿವನ್ನು ಕೊಟ್ಟ ಮೇಲೆ, ಸರಳವಾಗಿ ಹೇಳುವ ಬದಲು ಲಜ್ಜಾಸಮ್ಮಿಶ್ರವಾಗಿ ಹೇಳಿದ ಈ ಮಾತನ್ನೂ ಅದರೊಂದಿಗೇ ವ್ಯಕ್ತಪಟ್ಟ ಅದೊಂದು ಬಗೆಯ ಮೋಹಕ ಚಲುವನ್ನೂ, ಕೆಂಪೇರಿದ ಕೆನ್ನೆಗಳನ್ನೂ ಒಥೆಲ್ಲೋ ಅರ್ಥಮಾಡಿಕೊಳ್ಳದಿರಲಾರದೆ ಹೋದನು. ಆಗವನು ತನ್ನ ಅಂತರಂಗವನ್ನು ಬಿಚ್ಚಿ ತನ್ನ ಅನುರಾಗವನ್ನು ಪ್ರಕಾಶಪಡಿಸಿದನು. ಅಲ್ಲದೆ ಈ ಸುಸಂಧಿಯಲ್ಲೇ ಉದಾರ ಚರಿತೆಯಾದ ಡೆಸ್‌ಡಿಮೋನಳಿಂದ ತನ್ನನ್ನು ರಹಸ್ಯದಲ್ಲಿ ವಿವಾಹವಾಗಲು ಅನುಮತಿಯನ್ನೂ ಪಡೆದುಕೊಂಡನು.

ಒಥೆಲ್ಲೋನ ವರ್ಣವಾಗಲೀ, ಸಂಪತ್ತಾಗಲೀ, ಬ್ರಬಾನ್ಷಿಯೋ ಅವನನ್ನು ಅಳಿಯನನ್ನಾಗಿ ಅಂಗೀಕರಿಸಬಹುದೆಂಬ ಆಶ್ವಾಸನೆಯನ್ನು ಕೊಡುವಂತಿರಲಿಲ್ಲ. ಬ್ರಬಾನ್ಷಿಯೋ ಮಗಳಿಗೆ ಸಾಕಷ್ಟು ಸ್ವಾತಂತ್ರ್ಯ ಕೊಟ್ಟಿದ್ದನು. ಆದರೂ ಅವನು, ಇತರ ಉಚ್ಚ ಶ್ರೇಣಿಯ ವೆನಿಸ್ ರಮಣಿಯರಂತೆ ಅವಳೂ ಶೀಘ್ರದಲ್ಲೇ ಸೆನೆಟ್ ಸಭಾಸದರ ದರ್ಜೆಯ ಅಥವಾ ಅಷ್ಟೇ ಸಂಪತ್ತಿನ ಒಬ್ಬ ಪುರುಷನನ್ನೇ ವರಿಸಬಹುದೆಂದೂ ನಿರೀಕ್ಷಿಸಿದ್ದನು. ಆದರೆ ಈ ವಿಷಯದಲ್ಲಿ ಅವನು ಮೋಸಹೋಗಲೇಬೇಕಾಯಿತು. ಡೆಸ್‌ಡಿಮೋನಾ ಒಬ್ಬ ಮೂರ್‌ನನ್ನು ಪ್ರೇಮಿಸಿದ್ದಳು. ಅವನು ಕಪ್ಪುವರ್ಣದವನಾಗಿದ್ದರೂ ಸಹ, ಅವನ ಧೀರ ಗುಣಶೀಲಗಳಿಗೆ ತನ್ನ ಹೃದಯವನ್ನೂ ಸಂಪತ್ತನ್ನೂ ಅರ್ಪಿಸಿಬಿಟ್ಟಿದ್ದಳು. ಉಳಿದೆಲ್ಲರ ಕಣ್ಣಿಗೆ ಅಪರಿಹಾರ್ಯ ನ್ಯೂನತೆಯಾಗಿ ಕಂಡು ಬರುತ್ತಿದ್ದ ಅವನ ವರ್ಣವನ್ನೇ, ಈ ವಿವೇಚನಾಶಾಲಿನಿಯಾದ ರಮಣಿ ತನ್ನನ್ನು ವರಿಸಲು ಬಯಸುತ್ತಿದ್ದ ಉಳಿದೆಲ್ಲ ವೆನಿಸ್ ತರುಣರ ಬಿಳಿಯ ಚರ್ಮ, ಶುದ್ಧವರ್ಣಗಳಿಗಿಂತ ಮಿಗಿಲಾಗಿ ಮೆಚ್ಚಿಕೊಂಡಿದ್ದಳು. ತಾನು

ಆತ್ಮಾರ್ಪಣೆ ಮಾಡಿದ್ದ ಪುರುಷನಲ್ಲಿ ಅವಳಿಗಿದ್ದ ನಂಬಿಕೆ ಅಷ್ಟು ಅಚಲ ವಾಗಿದ್ದಿತು.

ಅವರ ವಿವಾಹ ರಹಸ್ಯದಲ್ಲಿ ನಡೆದಿದ್ದರೂ ಸಹ ಬಹುದಿನ ಗುಪ್ತವಾಗಿ ಉಳಿಯಲಾರದೆ ಹೋಯಿತು. ವೃದ್ಧ ಬ್ರಬಾನ್ಷಿಯೋನ ಕಿವಿಯನ್ನೂ ಅದು ಮುಟ್ಟಿತು. ಅವನು ಗಹನವಾದೊಂದು ಸೆನೆಟ್ ಸಭೆಯನ್ನೇ ಕೂಡಿಸಿ, ಮೂರ್ ಒಥೆಲ್ಲೋನ ಆರೋಪಿಯಾಗಿ ಅಲ್ಲಿ ಮಂಡಿಸಿದನು: ಒಥೆಲ್ಲೋ ಮಂತ್ರಮಾಟಗಳ ಪ್ರಯೋಗಮಾಡಿ, ಅತಿಥಿ ಧರ್ಮದ ಶಿಷ್ಟಾಚಾರವನ್ನೂ ಮರೆತು, ತಂದೆಯ ಸಮ್ಮತಿ ಇಲ್ಲದೆಯೇ ಚೆಲುವೆ ಡೆಸ್‌ಡಿಮೋನಾ ತನ್ನನ್ನು ಮದುವೆಯಾಗುವಂತೆ ಮರುಳುಗೊಳಿಸಿದ್ದ ನೆಂಬುದೇ ಅವನ ಆರೋಪವಾಗಿದ್ದಿತು.

ಈ ಸಂಧಿಕಾಲದಲ್ಲಿ, ವೆನಿಸ್ ರಾಜ್ಯಕ್ಕೆ ಹಠಾತ್ತಾಗಿ ಒಥೆಲ್ಲೋನ ಸೇವೆಯ ತ್ವರಿತ ಅಗತ್ಯ ಉಂಟಾಯಿತು. ಟರ್ಕಿಯವರು, ಆಗ ವೆನಿಸ್ಸಿನವರ ಕೈಯಲ್ಲಿದ್ದ ಸುಭದ್ರವಾದ ಸೈಪ್ರಸ್ ದ್ವೀಪವನ್ನು ಪುನಃ ಪಡೆಯುವ ಉದ್ದೇಶ ದಿಂದ ಮಹಾ ಸಿದ್ಧತೆಗಳೊಂದಿಗೆ ಆ ಎಡೆಗೇ ಬರುತ್ತಿರುವರೆಂಬ ಸುದ್ದಿ ಬಂದಿತು. ಈ ಅನುಪಕ್ವ ಸಮಯದಲ್ಲಿ ಇಡೀ ರಾಜ್ಯವೇ ಒಥೆಲ್ಲೋನೆಡೆಗೆ ದೃಷ್ಟಿ ತಿರುಗಿಸಿತು. ಟರ್ಕಿಯವರೆದುರಾಗಿ ನಿಂತು ಸೈಪ್ರಸನ್ನು ರಕ್ಷಿಸುವ ಕಾರ್ಯಕ್ಕೆ ಅವನೊಬ್ಬನೇ ಅರ್ಹನೆಂದು ಪರಿಗಣಿತವಾಗಿದ್ದಿತು. ಹೀಗಾಗಿ, ಸೆನೆಟ್‌ನ ಮುಂದೆ ಈಗ ಕರೆಯಲ್ಪಟ್ಟಿದ್ದ ಒಥೆಲ್ಲೋ, ಒಂದೆಡೆ ಮಹತ್ತಾದ ದೇಶಸೇವೆಯೊಂದಕ್ಕೆ ಸತ್ಪಾತ್ರನಾದ ಸ್ಪರ್ಧಿಯಾಗಿಯೂ, ಇನ್ನೊಂದೆಡೆ ವೆನಿಸ್‌ನ ಕಾನೂನು ಮೇರೆಗೆ ಮರಣದಂಡನಾಯೋಗ್ಯವಾದಂತಹ ಅಪಚಾರ ಗಳ ಆರೋಪವನ್ನು ಹೊತ್ತ ಅಪರಾಧಿಯಾಗಿಯೂ ಅವರೆಲ್ಲರೆದುರು ನಿಂತನು

ವೃದ್ಧ ಬ್ರಬಾನ್ಷಿಯೋನ, ವಯೋಮಾನ, ಅವನ ಸೆನೆಟ್ ಸಭಾಸದತ್ವ ಗಳ ಸಲುವಾಗಿಯಾದರೂ ಆ ಗಹನ ಸಭೆ ಅತಿ ಸಹನೆಯಿಂದ ಅವನಿಗೆ ಕಿವಿ ಗೊಡಲೇಬೇಕಾಯಿತು. ಕ್ರೋಧದಿಂದ ಉರಿಯುತ್ತಿದ್ದ ಆ ತಂದೆಯಾದರೋ, ಮೈ ಮೇಲಿನ ಪರಿವೆಯೇ ಇಲ್ಲದೆ, ತನ್ನ ಆರೋಪಗಳೊಂದಿಗೆ ಸಾಕ್ಷಿರೂಪದಲ್ಲಿ ಅದೆಷ್ಟೋ ಸಂಭಾವ್ಯಗಳನ್ನೂ, ನೆಪಗಳನ್ನೂ ಮುಂದಿಟ್ಟನು. ಇದೆಲ್ಲದರಿಂದ, ತನ್ನ ಹೇಳಿಕೆಯ ಸರದಿ ಬಂದಾಗ ಒಥೆಲ್ಲೋಗೆ, ಪ್ರೇಮ ಗಳಿಸಲು ತಾನು ಹಿಡಿದ ದಾರಿಯನ್ನು ಮುಚ್ಚುಮರೆಯಿಲ್ಲದೆ ನೇರವಾದ ರೀತಿಯಲ್ಲಿ ಹೇಳಿದ

ಹೊರತು ಬೇರೆ ಮಾರ್ಗವಿಲ್ಲದಂತಾಯಿತು. ಅವನು, ನಾವು ಈ ಹಿಂದೆ ಹೇಳಿರುವಂತೆ, ತನ್ನ ಪ್ರೇಮಯಾಚನೆಯ ಪೂರ್ಣ ಕಥೆಯನ್ನು ಯಾವ ತಂತ್ರವಿಧಾನವೂ ಇಲ್ಲದ ವಾಕ್ಸರಣಿಯಲ್ಲಿ ತಿಳಿಸಿದನು. ಅವನ ಭಾಷಣದ ಸರಳತೆ, ಬಹುಶಃ ಸತ್ಯಪ್ರೇರಿತವಾದುದರಿಂದಲೋ ಏನೋ, ಎಷ್ಟು ದೈವಿಕ ವಾಗಿದ್ದಿತೆಂದರೆ, ಎಲ್ಲವನ್ನೂ ಕೇಳಿದಮೇಲೆ, ಪ್ರಧಾನ ನ್ಯಾಯಮೂರ್ತಿ ಯಾಗಿ ಅಲ್ಲಿ ಮಂಡಿಸಿದ್ದ ಡ್ಯೂಕ್, ಅಂತಹ ಕತೆಯನ್ನು ಹೇಳಿದ್ದರೆ ತನ್ನ ಮಗಳೂ ಸಹ ವಶಳಾಗುತ್ತಿದ್ದಳೆಂದೇ ಒಪ್ಪಿಕೊಳ್ಳುವಂತಾಯಿತು. ಪ್ರೇಮಾರ್ಥಿಯಾಗಿ ಒಥೆಲ್ಲೋ ಪ್ರಯೋಗಿಸಿದ್ದ ಮಂತ್ರ ಮಾಟಗಳು ಬೇರೇನೂ ಆಗಿರದೆ ಪ್ರಣಯಿಗಳಾದ ಎಲ್ಲ ಪುರುಷರೂ ಕೈಗೊಳ್ಳುವಂತಹ ಪ್ರಾಮಾಣಿಕ ಸಂವಿಧಾನ ಕೌಶಲವೇ ಆಗಿದ್ದಿತು. ಅವನು ಉಪಯೋಗಿಸಿದ್ದ ಏಕಮಾತ್ರ ಮಂತ್ರಶಕ್ತಿಯೆಂದರೆ, ರಮಣಿಯೊಬ್ಬಳಿಗೆ ಕರ್ಣಾನಂದವನ್ನು ಉಂಟು ಮಾಡುವಂತಹ ಮನೋಹರ ರೀತಿಯಲ್ಲಿ ಕಥೆಯನ್ನು ಹೇಳಬಲ್ಲ ಅವನ ಕಥಾ ನೈಪುಣ್ಯವೊಂದೇ ಎಂಬುದು ದೃಢಪಟ್ಟಿತು.

ಒಥೆಲ್ಲೋನ ಈ ಹೇಳಿಕೆಯನ್ನು ನ್ಯಾಯಸ್ಥಾನದಲ್ಲಿ ಬಂದು ನಿಂತ ಡೆಸ್‌ಡಿಮೋನಳೇ ಸ್ವತಃ ಅನುಮೋದಿಸಿದಳು. ತನ್ನ ಜನನ ಮತ್ತು ಶಿಕ್ಷಣ ಗಳ ಸಲುವಾಗಿ ತಂದೆಗೆ ತಾನು ಕರ್ತವ್ಯಬದ್ಧಳಾಗಿರುವುದು ಸತ್ಯ ; ಆದರೆ ತನ್ನ ಸ್ವಾಮಿಯೂ, ಪತಿಯೂ ಆದವನಲ್ಲಿ ತನ್ನ ಕರ್ತವ್ಯಬಾಧ್ಯತೆ ಇನ್ನೂ ಮಿಗಿಲೆಂಬುದನ್ನು ಸ್ಪಷ್ಟಪಡಿಸುವ ಸಲುವಾಗಿ ತಂದೆ ತನ್ನನ್ನು ಬಿಟ್ಟುಕೊಡ ಬೇಕು ಎಂದು ಕೇಳಿದಳು. ತನ್ನ ತಾಯಿಯಾದರೂ ಸಹ ಇದೇ ಬಗೆಯಲ್ಲಿ ಬ್ರಬಾನ್ಷಿಯೋನನ್ನು ತನ್ನ ತಂದೆಗಿಂತ ಮಿಗಿಲೆಂದು ಪುರಸ್ಕರಿಸಿ ಇದನ್ನು ಸ್ಪಷ್ಟಪಡಿಸಿರಲಿಲ್ಲವೆ ? ಎಂದಳು.

ಕೊನೆಗೆ ಆ ವೃದ್ಧ ಸಭಾಸದನು ತನ್ನ ಆರೋಪವನ್ನು ಸಾಧಿಸಲಾರದೆ, ಮೂರ್ ಒಥೆಲ್ಲೋನನ್ನು ಹತ್ತಿರ ಕರೆದು, ತನ್ನ ಅನುತಾಪವನ್ನು ವ್ಯಕ್ತ ಪಡಿಸಿದನು. ನಂತರ, ಅಪರಿಹಾರ್ಯ ಕಾರ್ಯವೊಂದೆಂಬಂತೆ, ಇವನಿಗೆ ತನ್ನ ಮಗಳನ್ನು ಅರ್ಪಿಸಿಕೊಟ್ಟನು. ಆದರೆ, ಅವಳನ್ನು ತಡೆದು ಹಿಡಿ ಯಲು ತನ್ನಿಂದ ಸಾಧ್ಯವಿದ್ದಿದ್ದಲ್ಲಿ, ನಿಸ್ಸಂದೇಹವಾಗಿ ಅವರಿಬ್ಬರನ್ನೂ ಬೇರ್ಪ ಡಿಸುತ್ತಿದ್ದನೆಂದು ಹೇಳದಿರಲಿಲ್ಲ. ಅಲ್ಲದೆ, ಅಂತಃಕರಣದಲ್ಲಿ, ತನಗೆ ಬೇರೆ ಮಕ್ಕಳಿಲ್ಲದಿದ್ದುದಕ್ಕಾಗಿ ಸಂತೋಷಪಡುವುದಾಗಿಯೂ, ಇಲ್ಲದಿದ್ದರೆ, ಡೆಸ್‌ಡಿಮೋನಳ ಈ ನಡೆವಳಿಕೆ ಅವನನ್ನು ಹಿಂಸಕನನ್ನಾಗಿಸಿ ಅವಳು

ತನ್ನನ್ನು ತೊರೆದುದಕ್ಕಾಗಿ ಉಳಿದ ಮಕ್ಕಳಮೇಲೆ, ಅಡ್ಡಿ ಆತಂಕಗಳನ್ನೊಡ್ಡಲು ಪ್ರೇರಿಸುತ್ತಿದ್ದಿತೆಂದೂ ಭಾವಿಸಿಕೊಂಡನು.

ಈ ರೀತಿಯಲ್ಲಿ ಆಪತ್ಪರಿಹಾರವಾದಮೇಲೆ ಒಥೆಲ್ಲೋ ಸೈಪ್ರಸ್ ಕದನದ ನಾಯಕತ್ವವನ್ನು ತಾನೇ ವಹಿಸಿಕೊಂಡನು. ರೂಢಿಯ ಬಲದಿಂದ ಅವನಿಗೆ ಸೈನಿಕ ಜೀವನದ ಸಂಕಷ್ಟಗಳೆಲ್ಲ, ಉಳಿದ ಜನರಿಗೆ ಆಹಾರ ವಿಶ್ರಾಂತಿಗಳು ಹೇಗೋ ಹಾಗೆ ಸಾಧಾರಣವೆನಿಸಿಬಿಟ್ಟಿದ್ದವು. ಡೆಸ್‌ಡಿಮೋನಾ ಸಹ ತನ್ನ ಸ್ವಾಮಿ ಅಪಾಯವನ್ನೂ ಲೆಕ್ಕಿಸದೆ ಗೌರವವನ್ನು ಸ್ಥಿರವಾಗಿ ಕಾಯ್ದುಕೊಳ್ಳಬೇಕೆಂದು ಬಯಸುವಾಕೆ. ಆದ್ದರಿಂದಲೇ, ನವದಂಪತಿಗಳನೇಕರು ಸಾಧಾರಣವಾಗಿ ಇಷ್ಟಪಡುವಂತಹ ನಿರರ್ಥಕವಾದ ವಿನೋದ ಸುಖಗಳಲ್ಲಿ ಕಾಲ ಕಳೆಯುವುದನ್ನು ತಿರಸ್ಕರಿಸಿ ಅವನು ಹೊರಡುವುದಕ್ಕೆ ಆಕೆ ಒಪ್ಪಿಗೆಯಿತ್ತಳು.

ಒಥೆಲ್ಲೋ ಮತ್ತು ಅವನ ಪತ್ನಿ ಸೈಪ್ರೆಸ್‌ನಲ್ಲಿ ಬಂದಿಳಿದ ಕೂಡಲೇ ಸದ್ಯದಲ್ಲಿ ದ್ವೀಪಕ್ಕೆ ಯಾವ ಆಕ್ರಮಣದ ಭಯವೂ ಇಲ್ಲವೆಂಬ ಸುದ್ದಿಬಂದಿತು. ಏಕೆಂದರೆ ಟರ್ಕಿಯವರ ದಂಡನ್ನೆಲ್ಲ ಭಯಂಕರ ಬಿರುಗಾಳಿಯೊಂದು ಚದುರಿಸಿಬಿಟ್ಟಿತ್ತು. ಆದರೆ, ಒಥೆಲ್ಲೋ ಇನ್ನುಮುಂದೆ ಅನುಭವಿಸಬೇಕಿದ್ದ ಬೇರೆಯೊಂದು ಯುದ್ಧ ಅದೇ ತಾನೇ ಪ್ರಾರಂಭವಾಗಲಿತ್ತು. ಮಾತ್ಸರ್ಯವು ನಿಷ್ಕಳಂಕನೆಯುವಾದ ಅವನ ಪತ್ನಿಯಮೇಲೆ ಎಬ್ಬಿಸಿದ್ದ ಶತ್ರುಗಣ ಅಪರಿಚಿತರಿಗಿಂತ, ಧರ್ಮದ್ರೋಹಿಗಳಾದವರಿಗಿಂತ ಭಯಂಕರವಾಗಿ ಪರಿಣಮಿಸಿತು.

ಈ ನಮ್ಮ ಸೇನಾಪತಿಯ ಮಿತ್ರರಲ್ಲೆಲ್ಲಾ, ಒಥೆಲ್ಲೋನ ಸಂಪೂರ್ಣ ವಿಶ್ವಾಸವನ್ನು ಗಳಿಸಿಕೊಂಡಿದ್ದವನು ಮೈಕೆಲ್ ಕ್ಯಾಸಿಯೋ. ಕ್ಯಾಸಿಯೋ ತರುಣ ಸೈನಿಕ. ಸದಾ ಉಲ್ಲಾಸಪ್ರವೃತ್ತಿ, ರಸಿಕತೆ, ಅಲ್ಲದೆ ಮೋಹಕ ಮಾತುಗಾರಿಕೆ—ಈ ಎಲ್ಲಸ್ತ್ರೀ ಮನೋರಂಜಕವಾದ ಗುಣಗಳೂ ಅವನಲ್ಲಿದ್ದವು. ಸುಂದರನೂ ವಾಕ್ಚತುರನೂ ಆಗಿದ್ದ ಅವನು, ಚೆಲುವೆಯಾದ ತರುಣಪ್ರಾಯದ ಪತ್ನಿಯನ್ನುಳ್ಳ, ವಯಸ್ಸುಮಿರಿದ (ಹೆಚ್ಚುಕಡಿಮೆ ಒಥೆಲ್ಲೋನಂತಹ)ಪುರುಷನಲ್ಲಿ ಅಸೂಯೆ ಕೆರಳಿಸಬಹುದಾದ ವ್ಯಕ್ತಿಯೇ ಆಗಿದ್ದನು. ಆದರೆ ಒಥೆಲ್ಲೋ ಉದಾತ್ತ ಚರಿತನಾಗಿದ್ದಂತೆಯೇ ಅಸೂಯಾರಹಿತನೂ ಆಗಿದ್ದನು. ಹೀನಕೃತ್ಯಗಳನ್ನುಮಾಡಲಾರದವನಷ್ಟೇ ಅಲ್ಲ, ಅವನ್ನು ಯೋಚಿಸುವುದೂ ಸಹ ಅವನಿಗೆ ಅಶಕ್ಯವಾಗಿದ್ದಿತು. ಡೆಸ್‌ಡಿಮೋನಾಳಲ್ಲಿ ಅವನು ಅನುರಕ್ತನಾಗಿದ್ದಾಗ ಈ ಕ್ಯಾಸಿಯೋನನ್ನೇ ತನ್ನ ಪಕ್ಷದಲ್ಲಿರಲು ನಿಯೋಜಿಸಿಕೊಂಡಿದ್ದನು. ಅವನ

ಪ್ರಣಯಸಂದರ್ಭದಲ್ಲಿ ಕ್ಯಾಸಿಯೋ ಒಂದು ಬಗೆಯ ಮಧ್ಯಸ್ಥಗಾರನೇ ಆಗಿದ್ದನು. ಏಕೆಂದರೆ ಒಥೆಲ್ಲೋ ಸ್ತ್ರೀಜನರನ್ನು ರಂಜಿಸುವಂತಹ ಸಂಭಾಷಣಾ ಚಾತುರ್ಯ ತನ್ನಲ್ಲಿಲ್ಲವೆಂಬ ಶಂಕೆಯಿಂದ, ಆ ಗುಣಗಳನ್ನು ಹೊಂದಿದ್ದ ಈ ಮಿತ್ರನನ್ನೇ ತನ್ನ ಪರವಾಗಿ ಪ್ರೇಮಾರ್ಥಿಭೂಮಿಕೆಯಲ್ಲಿ ಪ್ರತಿನಿಧಿಯಾಗಿ ಕಳುಹಿಸುತ್ತಿದ್ದನು. ಇಂತಹ ನಿಷ್ಕಳಂಕ ಸಾರಳ್ಯ ಈ ಪರಾಕ್ರಮಿಯ ಸ್ವಭಾವಕ್ಕೆ ಒಂದು ಗೌರವವಾಗಿತ್ತೇ ವಿನಃ ಕುಂದಾಗಿರಲಿಲ್ಲ. ಹೀಗಾಗಿ, ವಿನೀತೆ ಡೆಸ್‌ಡಿಮೋನಾ, ಒಥೆಲ್ಲೋನನ್ನು ಬಿಟ್ಟರೆ, ಕ್ಯಾಸಿಯೋ ನಲ್ಲಿ–ಸುಚ್ಚರಿತ್ರಳಾದ ಪತ್ನಿಗೆ ಯುಕ್ತವಾದ ಅಂತರದಿಂದ–ಅಪಾರ ಪ್ರೇಮ, ವಿಶ್ವಾಸಗಳನ್ನಿಟ್ಟಿದ್ದಳೆಂದರೆ ಆಶ್ಚರ್ಯವೇನಲ್ಲ. ವಿವಾಹದ ನಂತರವೂ ಮೈಕೇಲ್ ಕ್ಯಾಸಿಯೋನ ಬಗ್ಗೆ ಅವರ ವರ್ತನೆಯೇನೂ ಬದಲಾಗಿರಲಿಲ್ಲ. ಆತ ಪದೇ ಪದೇ ಅವರ ಮನೆಗೆ ಬಂದುಹೋಗುತ್ತಿದ್ದನು. ಸ್ವಲ್ಪಮಟ್ಟಿಗೆ ಗಂಭೀರ ಪ್ರಕೃತಿಯವನಾದ ಒಥೆಲ್ಲೋಗೆ ಕ್ಯಾಸಿಯೋನ ತಡೆಯಿಲ್ಲದ ನಿರರ್ಗಳ ಮಾತುಗಾರಿಕೆ ಅಪ್ರಿಯವೇನೂ ಆಗಿರಲಿಲ್ಲ. ಏಕೆಂದರೆ ಗಂಭೀರ ಪ್ರಕೃತಿಯವ ರೆಲ್ಲ ತಮ್ಮ ಸ್ವಭಾವದ ತ್ರಾಸದಾಯಕ ಹೊರೆಯಿಂದ ಪಾರಾಗಲು ವಿರುದ್ಧ ಪ್ರಕೃತಿಯವರ ಬಳಿ ಉಪಶಾಂತಿಯನ್ನು ಅರಸುವರಷ್ಟೆ? ಹೀಗಾಗಿ, ಡೆಸ್‌ಡಿಮೋನಾ ಮತ್ತು ಕ್ಯಾಸಿಯೋ, ಹಿಂದೆ ಮಿತ್ರನ ಪರವಾಗಿ ಪ್ರಣಯ ಭಿಕ್ಷೆ ಬೇಡಲು ಕ್ಯಾಸಿಯೋ ಬರುತಿದ್ದಾಗ ಹೇಗೆಯೋ ಹಾಗೇ ಈಗಲೂ ಕೂಡಿ ಸಂಭಾಷಿಸುತ್ತಿದ್ದರು. ನಕ್ಕು ನಲಿದಾಡುತ್ತಿದ್ದರು.

ಇತ್ತೀಚಿಗೆ ಒಥೆಲ್ಲೋ, ಕ್ಯಾಸಿಯೋನನ್ನು, ಸೇನಾಪತಿಗೆ ಬಹು ವಿಶ್ವಾಸ ಪಾತ್ರಸ್ಥಾನವೂ, ಸಮಿಾಪವರ್ತಿಯೂ ಆದ 'ಲೆಫ್ಟಿನೆಂಟ್' ಪದವಿಗೆ ಏರಿ ಸಿದ್ದನು. ಇದು ಇಯಾಗೋ ಎಂಬ ಹಳೆಯ ಅಧಿಕಾರಿಯೊಬ್ಬನಿಗೆ ಬಹು ಅಸಮಾಧಾನವನ್ನುಂಟುಮಾಡಿತು. ಇವನು ಕ್ಯಾಸಿಯೋಗಿಂತ ತನಗೇ ಆ ಸ್ಥಾನದ ಮೇಲೆ ಹೆಚ್ಚು ಬಾಧ್ಯತೆ ಇರುವುದೆಂದು ಭಾವಿಸಿದ್ದವನು. ಆಗಾಗ ಅವನು ಕ್ಯಾಸಿಯೋನನ್ನು ಕೇವಲ ಸ್ತ್ರೀ ಸಹವಾಸಕ್ಕೇ ಯೋಗ್ಯನೆಂದೂ, ಯುದ್ಧ ಕೌಶಲಗಳ ಬಗ್ಗೆ ಹುಡುಗಿಯೊಬ್ಬಳಿಗಿಂತ ಹೆಚ್ಚಾಗಿ ಏನನ್ನೂ ಅರಿಯ ದವನೆಂದೂ ಪರಿಹಾಸ ಮಾಡುತ್ತಿದ್ದನು. ಇಯಾಗೋ ಕ್ಯಾಸಿಯೋನ ಬದ್ಧದ್ವೇಷಿಯಾಗಿದ್ದನು. ಒಥೆಲ್ಲೋನನ್ನೂ ಸಹ, ಆತ ಕ್ಯಾಸಿಯೋನನ್ನು ಆದರಿಸುತ್ತಿದ್ದುದಕ್ಕೆ ಮಾತ್ರವಲ್ಲದೆ, ತನ್ನ ಪತ್ನಿ ಎಮಿಲಿಯಾಳಲ್ಲಿ ಅವನು ಬಹು ಸಲಿಗೆಯಾಗಿದ್ದನೆಂಬ ಹುಸಿ ಸಂಶಯದಿಂದ ದ್ವೇಷಿಸುತ್ತಿದ್ದನು. ಕೇವಲ

ಈ ಕಲ್ಪಿತ ಕಾರಣಗಳ ಆಧಾರದಿಂದ ಸಂಚುಗಾರ ಇಯಾಗೋನ ದುರುಳ ಮನಸ್ಸು ಕಾರ್ಯಪ್ರವೃತ್ತವಾಯಿತು; ಕ್ಯಾಸಿಯೋ, ಒಥೆಲ್ಲೋ, ಡೆಸ್ ಡಿಮೋನಾ ಮೂವರನ್ನೂ ಒಂದೇ ಬಾರಿಗೆ ಸರ್ವನಾಶಕ್ಕೀಡುಮಾಡುವಂತಹು ದಾದ, ಸೇಡಿನ ಭೀಕರ ಹಂಚಿಕೆಯೊಂದನ್ನು ರೂಪಿಸಿಕೊಂಡಿತು.

ಇಯಾಗೋ ಕಪಟ ತಂತ್ರಗಳನ್ನು ಹೂಡುವುದರಲ್ಲಿ ನಿಸ್ಸೀಮ; ಮಾನವ ಸ್ವಭಾವವನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿದ್ದವನು. ಅಂತೆಯೇ, ಅವನು ಮಾನವನ ಮನಸ್ಸನ್ನು ಆಕ್ರಮಿಸುವ ವೇದನೆಗಳಲ್ಲಿ, ದೈಹಿಕ ಯಾತನೆಗಳೆಲ್ಲಕ್ಕಿಂತಲೂ ಮಿಗಿಲಾಗಿ ದುಸ್ಸಹವೂ, ಕಟುವಾಗಿ ಕೊರೆಯುವಂತಹದೂ ಆದ ವೇದನೆಯೆಂದರೆ ಅಸೂಯೆಯೆಂಬುದನ್ನು ಚೆನ್ನಾಗಿ ಅರಿತಿದ್ದನು. ಒಥೆಲ್ಲೋ ಕ್ಯಾಸಿಯೋನ ಬಗ್ಗೆ ಅಸೂಯೆ ತಳೆಯು ವಂತೆ ತಾನು ಹೇಗಾದರೂ ಮಾಡಬೇಕು. ಆಗ ಅದು ಸೇಡಿನ ಉತ್ಕೃಷ್ಟ ಯೋಜನೆಯಾಗುವುದು. ಕ್ಯಾಸಿಯೋ ಮತ್ತು ಒಥೆಲ್ಲೋ ಇಬ್ಬರಲ್ಲೊಬ್ಬರ— ಅಥವಾ ಇಬ್ಬರದಾದರೂ ಸರಿಯೆ, ಅವನಿಗೆರಡೂ ಒಂದೇ.—ಮರಣದಲ್ಲಿ ಕೊನೆಗೊಳ್ಳುವುದು ಎಂಬುದವನ ಯೋಚನೆ. ಸೈಪ್ರಸ್‌ನಲ್ಲಿ ಸೇನಾನಿ ಮತ್ತು ಅವನ ಪತ್ನಿ ಬಂದಿಳಿದುದೂ, ಅದರ ಜೊತೆಗೆ ಶತ್ರುಗಳ ದಂಡು ಚದುರಿ ಹೋದ ಸುದ್ದಿ ಬಂದು ಸೇರಿದುದೂ ಎರಡೂ ಸೇರಿದ ಸಂದರ್ಭ ಆ ದ್ವೀಪದಲ್ಲಿ ವಿಶ್ರಾಂತಿ ದಿನಗಳೆಂಬಂತೆ ಆಚರಿಸಲ್ಪಟ್ಟಿತು. ಎಲ್ಲರೂ ಉತ್ಸವಗಳಲ್ಲೂ, ಆಮೋದಪ್ರಮೋದಗಳಲ್ಲೂ ನಿರತರಾದರು. ಸುರೆ ಎಲ್ಲೆಲ್ಲೂ ಉಕ್ಕಿ ಹರಿಯಿತು. ಕಪ್ಪು ಒಥೆಲ್ಲೋ ಮತ್ತು ಅವನ ಚೆಲುವೆಯಾದ ಪತ್ನಿ ಡೆಸ್‌ಡಿಮೋನಾ ಇಬ್ಬರ ಆರೋಗ್ಯಕ್ಕೂ ಶುಭಾಶಯಗಳನ್ನು ಕೋರುತ್ತಾ ಮಧುಪಾನ ಮುಂದುವರಿಯಿತು.

ಅಂದಿನ ರಾತ್ರಿ ಕ್ಯಾಸಿಯೋ ಪಹರೆಯ ಕಾರ್ಯಕ್ಕೆ ನಿಯಮಿತನಾಗಿ ದ್ದನು. ಹೊಸದಾಗಿ ಬಂದಿಳಿದಿದ್ದ ಈ ಸೈನಿಕರ ತಂಡ ಏನಾದರೂ ಗಲಭೆ ಯೆಬ್ಬಿಸಿ ಅಲ್ಲಿನ ನಿವಾಸಿಗಳಲ್ಲಿ ಭೀತಿ, ತಿರಸ್ಕಾರಗಳನ್ನು ಉಂಟು ಮಾಡದಿರ ಲೆಂಬ ಉದ್ದಿಶ್ಯದಿಂದ ಒಥೆಲ್ಲೋ, ಸೈನಿಕರು ಹೆಚ್ಚಾಗಿ ಸುರಾಪಾನ ಮಾಡ ದಂತೆ ತಡೆಗಟ್ಟಬೇಕೆಂದು ಆಜ್ಞೆ ವಿಧಿಸಿದ್ದನು. ಈ ರಾತ್ರಿಯಲ್ಲೇ ಇಯಾಗೋ ಗಭೀರವಾದ ತನ್ನ ಕಪಟ ಹಂಚಿಕೆಗಳನ್ನು ಪ್ರಾರಂಭಿಸಿದನು. ಸೇನಾನಿಯ ಮೇಲಿನ ನಿಷ್ಠೆ, ಪ್ರೇಮಗಳ ಸೋಗಿನಲ್ಲಿ ಅವನು, ಕ್ಯಾಸಿಯೋನನ್ನು ಸ್ವಲ್ಪ ಹೆಚ್ಚಾಗಿಯೇ ಸುರಾಪಾನ ಮಾಡಿ ಮತ್ತನಾಗುವಂತೆ ಪ್ರೇರಿಸಿದನು. ಕಾವಲಿನ

ಕಾರ್ಯವಹಿಸಿದ್ದ ಅಧಿಕಾರಿಯಲ್ಲಿ ಪಾನಮತ್ತತೆ ಮಹಾಪರಾಧವಾಗಿ ಪರಿಗಣಿತವಾಗುತ್ತದೆ. ಸ್ವಲ್ಪ ಹೊತ್ತೇನೋ ಕ್ಯಾಸಿಯೋ ಪ್ರಲೋಭನೆಗೆ ಒಳಗಾಗದಿರಲು ಪ್ರಯತ್ನಿಸಿದನು. ಆದರೆ, ಸರಳ ಸ್ವತಂತ್ರ ಭಾವದ ಸೋಗು ಧರಿಸಲು ಚೆನ್ನಾಗಿ ಅರಿತಿದ್ದ ಇಯಾಗೋನ ಇದಿರಾಗಿ ಅವನು ಬಹುಕಾಲ ಪ್ರತಿಭಟಿಸಲಾರದೆ ಹೋದನು. ಇಯಾಗೋ ಮೇಲಿಂದ ಮೇಲೆ ಮಧುವನ್ನೂ, ಪ್ರಮತ್ತಕ ಗೀತಗಳನ್ನೂ ಒದಗಿಸಿದಂತೆಲ್ಲಾ ಕ್ಯಾಸಿಯೋ ಹೆಚ್ಚು ಹೆಚ್ಚಾಗಿ ಪಾನಮಾಡತೊಡಗಿದನು. ಅವನ ನಾಲಿಗೆ ಡೆಸ್‌ಡಿಮೋನಳ ಶ್ಲಾಘನೆಯಲ್ಲಿ ಸ್ವೇಚ್ಛೆಯಾಗಿ ಹರಿದಾಡಿತು. ಮೇಲಿಂದ ಮೇಲೆ ಅವನು, ಅವಳು ಅತ್ಯುತ್ಕೃಷ್ಟ ರಮಣಿಯೆಂದು ಸ್ತುತಿಸುತ್ತಾ, ಅವಳ ಸೌಂದರ್ಯ-ಆರೋಗ್ಯಗಳಿಗೆ ಶುಭವನ್ನು ಕೋರುತ್ತಾ ಮದ್ಯಪಾನ ಮಾಡಿದನು. ಕೊನೆಗೆ, ಅವನು ತನ್ನ ಬಾಯಿಯೊಳಗೆ ಸೇರಿಸಿಕೊಳ್ಳುತ್ತಿದ್ದ ಈ ವೈರಿ ಅವನ ಬುದ್ಧಿಯನ್ನು ವಿಕಲ್ಪಗೊಳಿಸಿತು. ಇಯಾಗೋನಿಂದಲೇ ನಿಯೋಜಿತನಾಗಿದ್ದವನೊಬ್ಬನು ಕ್ಯಾಸಿಯೋನನ್ನು ಕೆಣಕಿದ್ದರ ಸಲುವಾಗಿ ಖಡ್ಗಗಳೇ ಒರೆಯಿಂದ ಹೊರಗೆ ಬಂದವು. ಗಲಭೆಯನ್ನು ಅಡಗಿಸಲು ಬಂದ ಮಾಂಟನೋ ಎಂಬ ಶ್ರೇಷ್ಠ ಅಧಿಕಾರಿ ಹೊಡೆದಾಟದಲ್ಲಿ ಗಾಯಗೊಳ್ಳಬೇಕಾಯಿತು. ಗಲಭೆ ಎಲ್ಲೆಡೆಯಲ್ಲೂ ಹಬ್ಬಿತು. ದುರುಳ ಕುಮಂತ್ರವನ್ನು ಪ್ರಾರಂಭಿಸಿದ್ದ ಕರ್ತೃ ಇಯಾಗೋನೇ ಈಗ ಗದ್ದಲವನ್ನೆಬ್ಬಿಸುವುದರಲ್ಲೂ ಮೊದಲಾದನು. ಕ್ಷುಲ್ಲಕ, ಮದ್ಯಪಾನಮತ್ತರ ಕಲಹವೊಂದರ ಬದಲು ಯಾವುದೋ ದೊಡ್ಡ ದಂಗೆ ಎದ್ದಿದೆಯೋ ಎನ್ನಿಸುವಂತೆ ಅವನು ರಾಜಗೃಹದ ಗಂಟೆ ದೊಡ್ಡದಾಗಿ ಬಾಜಿಸುವಂತೆ ಮಾಡಿದ್ದ. ಆ ಅಪಾಯದ ಕರೆಯನ್ನು ಕೇಳಿ ಒಥೆಲ್ಲೋ ಎಚ್ಚರಗೊಂಡನು. ಭರದಿಂದ ಉಡುಪು ಧರಿಸಿಕೊಂಡು, ಗಲಭೆಯ ಸ್ಥಾನಕ್ಕೆ ಧಾವಿಸಿ ಬಂದು, ಗಲಭೆಯ ಕಾರಣವೇನೆಂದು ಅವನು ಕ್ಯಾಸಿಯೋನನ್ನು ವಿಚಾರಿಸಿದನು. ಈ ಹೊತ್ತಿಗೆ ಸುರೆಯ ಪ್ರಭಾವ ಸ್ವಲ್ಪ ಕಡಮೆಯಾಗಿ, ಕ್ಯಾಸಿಯೋನ ಬುದ್ಧಿ ತಿಳಿಯಾಗಿತ್ತು. ಆದರೆ ಉತ್ತರ ಕೊಡಲಾರದಷ್ಟು ಮಟ್ಟಿಗೆ ಅವನು ಅಪಮಾನದಿಂದ ಭಂಗಿತನಾಗಿದ್ದನು. ಆಗ ಇಯಾಗೋ, ಕ್ಯಾಸಿಯೋ ಮೇಲೆ ಆರೋಪ ಹೊರಿಸಲು ಬಹುವಾಗಿ ಹಿಂಜರಿಯುವಂತೆ ನಟಿಸುತ್ತಾ, ನಿಜಸ್ಥಿತಿಯನ್ನು ತಿಳಿಯಲೇ ಬೇಕೆಂದ ಒಥೆಲ್ಲೋನ ಒತ್ತಾಯದಿಂದಲೋ ಎಂಬಂತೆ ನಡೆದ ವಿಷಯಗಳನ್ನು ತಿಳಿಸಿದನು. ಹೀಗೆ ತಿಳಿಸುವಾಗ, ಅದರಲ್ಲಿನ ತನ್ನ ಪಾತ್ರವನ್ನು ಸಂಪೂರ್ಣವಾಗಿ ಮರೆಮಾಚಿಬಿಟ್ಟನು.

ಆ ಸಂದರ್ಭದಲ್ಲಿ ಬಹು ಮತ್ತನಾಗಿದ್ದ ಕ್ಯಾಸಿಯೋಗಾದರೂ ಆ ಸಂಗತಿ ನೆನಪಿನಲ್ಲಿ ಉಳಿದಿರಲಿಲ್ಲ. ಇಯಾಗೋ ಹೇಳಿದ ರೀತಿಯಿಂದ ಅವನು ಕ್ಯಾಸಿಯೋನ ಅಪರಾಧವನ್ನು ಆದಷ್ಟು ಕಡಿಮೆ ಮಾಡಿ ಹೇಳುತ್ತಿರುವನೋ ಎಂಬಂತೆ ತೋರುತ್ತಿತ್ತು. ಆದರೆ ಪರಿಣಾಮದಲ್ಲಿ ಕ್ಯಾಸಿಯೋನ ಅಪರಾಧ ಅವನು ವಾಸ್ತವವಾಗಿ ಮಾಡಿದ್ದಕ್ಕಿಂತ ಹಿರಿದೆಂಬ ಭಾವನೆಯನ್ನೇ ಉಂಟು ಮಾಡಿತು. ಇದೆಲ್ಲದರ ಫಲವಾಗಿ, ಶಿಸ್ತಿನ ಸಂರಕ್ಷಣೆಯಲ್ಲಿ ಸದಾ ಬಿಗಿಯಾಗಿದ್ದ ಒಥೆಲ್ಲೋ, ಕ್ಯಾಸಿಯೋನಿಂದ ಅವನ ಲೆಫ್ಟಿನೆಂಟ್ ಪದವಿಯನ್ನು ಕಿತ್ತುಕೊಳ್ಳಬೇಕಾಯಿತು.

ಹೀಗೆ, ಇಯಾಗೋನ ಪ್ರಥಮ ಕಪಟತಂತ್ರ ಪೂರ್ಣವಾಗಿ ಸಫಲತೆ ಪಡೆದಿತು. ತನ್ನ ದ್ವೇಷಕ್ಕೆ ಪಾತ್ರನಾದ ಪ್ರತಿಸ್ಪರ್ಧಿಯನ್ನು ಅವನತಿಗೊಳಿಸಿದ್ದಾಯಿತು, ಪದವಿಯಿಂದ ಅವನನ್ನು ಉರುಳಿಸಿದ್ದಾಯಿತು. ಆದರೆ ಈ ಅಪರಾತ್ರಿಯ ಘಟನೆಗಳನ್ನು ಇನ್ನುಮುಂದೂ ಉಪಯೋಗಿಸಿಕೊಳ್ಳುವ ಕಾರ್ಯ ಉಳಿದಿತ್ತು.

ಈ ದುರ್ಘಟನೆಯಿಂದ ಪೂರ್ಣವಾಗಿ ಬುದ್ಧಿ ತಿಳಿದ ಕ್ಯಾಸಿಯೋ ಈಗ ಕಪಟ ಮಿತ್ರನಾದ ಇಯಾಗೋ ಬಳಿ ಅನುತಾಪಪಡಲು ತೊಡಗಿದನು. ಪಾಶವೀ ವೃತ್ತಿಯನ್ನು ತೋರುವ ಮಟ್ಟಿಗೆ ತಾನು ಮೂರ್ಖನಾದೆನೆಂದು ಅವನು ಆತ್ಮನಿಂದನೆ ಮಾಡಿಕೊಂಡನು. ತನ್ನ ಕತೆಯೆಲ್ಲ ಇನ್ನು ಮುಗಿದಂತೆಯೇ; ಇನ್ನು ಹೇಗೆ ತಾನೇ ಸೇನಾನಿಯ ಬಳಿ ತನ್ನ ಪದವಿಯನ್ನು ಹಿಂದೆ ಪಡೆಯಲು ಕೇಳಲಾದೀತು? 'ನೀನು ಮದ್ಯಪಾಯಿ'ಯೆಂದು ಅವನು ಹೇಳಿಬಿಡುವನಲ್ಲವೆ? ಕ್ಯಾಸಿಯೋಗೆ ತನ್ನ ಮೇಲೆಯೇ ದ್ವೇಷ ಹುಟ್ಟಿತ್ತು. ಇಯಾಗೋ ಇದೊಂದು ಬಹುಸಣ್ಣ ವಿಚಾರವೆಂದು ಹೇಳುವಂತೆ ನಟಿಸುತ್ತಾ, ಅಂತಹ ಸಂದರ್ಭದಲ್ಲಿ, ಅವನಾಗಲೀ ಮತ್ತಾರೇ ಆಗಲಿ ಪಾನಮತ್ತರಾಗುತ್ತಿದ್ದುದರಲ್ಲಿ ಸಂಶಯವಿಲ್ಲವೆಂದು ನುಡಿದನು. ಈಗ ಕಳೆದುಹೋದುದನ್ನು ಸರಿಪಡಿಸಲು ಆದಷ್ಟು ಮಟ್ಟಿಗೆ ಪ್ರಯತ್ನ ಪಡಬೇಕೆಂದನು. ಆಗ ಸೇನಾನಿಯ ಪತ್ನಿಯೇ ವಾಸ್ತವವಾದ ಅಧಿಕಾರಿ, ಒಥೆಲ್ಲೋ ಬಳಿ ಅವಳು ಏನನ್ನಾದರೂ ಮಾಡಬಲ್ಲವಳು. ಡೆಸ್‌ಡಿಮೋನಾ ತನ್ನ ಪತಿಯೊಂದಿಗೆ ಕ್ಯಾಸಿಯೋ ವಿಚಾರವಾಗಿ ಮಾತುಕತೆ ನಡೆಸಬೇಕೆಂದು ಅವಳನ್ನೇ ಕೋರುವುದು ಉತ್ತಮ. ಅವಳಾದರೋ ಬಹು ಸರಳ, ಉದಾರ ಪ್ರಕೃತಿಯವಳು. ಇಂತಹ ಸತ್ಕಾರ್ಯವನ್ನು ಮಾಡಲು ಕೂಡಲೇ ಒಪ್ಪಿ, ಕ್ಯಾಸಿಯೋ ಮೊದಲಿನಂತೆಯೇ ಸೇನಾ

ನಿಯ ಆದರ ಪಾತ್ರನಾಗುವಂತೆ ಮಾಡಬಹುದು. ಇದರಿಂದ ಅವರಿಬ್ಬರಲ್ಲುಂಟಾಗಿದ್ದ ವಿರಸ ಅಳಿದು ಮೊದಲಿಗಿಂತಲೂ ನಿಕಟವಾದ ಬಾಂಧವ್ಯ ಬೆಳೆಯಬಹುದು ಎಂದೆಲ್ಲ ಹೇಳಿದನು ಇಯಾಗೋ. ಇದೇನೋ ಒಳ್ಳೆಯ ಸಲಹೆಯೇ ಸರಿ, ಆದರೆ ನಾವು ಮುಂದೆ ಕಾಣಲಿರುವಂತೆ, ಇದು ದುರುದ್ದೇಶ ಪ್ರೇರಿತವಾದುದಾಗಿತ್ತು.

ಇಯಾಗೋನ ಸಲಹೆಯಂತೆಯೇ ನಡೆದುಕೊಂಡನು ಕ್ಯಾಸಿಯೋ; ಇಂತಹ ಖುಜುಕೋರಿಕೆಯನ್ನು ನಡೆಸಲು ಸುಲಭವಾಗಿ ಒಪ್ಪಿಕೊಳ್ಳುತ್ತಿದ್ದ ಡೆಸ್‌ಡಿಮೋನಾಳ ಬಳಿ ತೆರಳಿ ಅವನು ಮನವಿ ಮಾಡಿಕೊಂಡನು. ಅವಳು ಕ್ಯಾಸಿಯೋ ಸಲುವಾಗಿ ತನ್ನ ಸ್ವಾಮಿಯ ಬಳಿ ಅರಿಕೆ ಮಾಡುವುದಾಗಿಯೂ, ತನ್ನ ಜೀವವನ್ನೇ ಪಣವಾಗಿಟ್ಟು ಉದ್ದಿಶ್ಯವನ್ನು ಸಾಧಿಸುವುದಾಗಿಯೂ ವಚನವಿತ್ತಳು. ಈ ಕಾರ್ಯವನ್ನವಳು, ಆ ಕೂಡಲೇ, ಅದೆಷ್ಟು ಆಸ್ಥೆಯಿಂದ, ಎಷ್ಟು ಮನೋಹರ ವೈಖರಿಯಿಂದ ಮೊದಲುಮಾಡಿದಳೆಂದರೆ, ಕ್ಯಾಸಿಯೋನ ಬಗ್ಗೆ ಅತೀವ ಕ್ರೋಧಾವಿಷ್ಟನಾಗಿದ್ದ ಒಥೆಲ್ಲೋಗೆ ಅವಳ ಮಾತನ್ನು ಕಡೆಗಣಿಸುವುದು ಅಸಾಧ್ಯವೇ ಆಯಿತು. ಅವನು ಕಾಲಾವಕಾಶ ಅಗತ್ಯವೆಂದೂ, ಅಂತಹ ಅಪರಾಧಿಯನ್ನು ಅಷ್ಟು ಬೇಗ ಕ್ಷಮಿಸಬಾರದೆಂದೂ ಹೇಳಿದನು. ಆಗವಳು ಹಿಮ್ಮೆಟ್ಟದೆ, ಮರು ರಾತ್ರಿಯೋ ಇಲ್ಲವೇ ಆ ಮರುಬೆಳಿಗ್ಗೆಯೋ ಅಥವಾ ಹೆಚ್ಚೆಂದರೆ ಅದಕ್ಕೂ ಮುಂದಿನ ಬೆಳಿಗ್ಗೆಯೋ ಆ ಕೆಲಸ ಆಗಬಹುದೆಂದಳು. ಅದೆಲ್ಲ ಬಡಪಾಯಿ ಕ್ಯಾಸಿಯೋ ಈಗ ಎಷ್ಟು ಪರಿತಪ್ತನಾಗಿರುವನೆಂಬುದನ್ನು, ವಿನೀತನಾಗಿರುವನೆಂಬುದನ್ನು ತಿಳಿಯಪಡಿಸುತ್ತಾ, ಅವನ ಅಪಚಾರಕ್ಕೆ ಅಂತಹ ಉಗ್ರಶಿಕ್ಷೆಯನ್ನು ವಿಧಿಸುವುದು ಉಚಿತವಲ್ಲವೆಂದಳು. ಒಥೆಲ್ಲೋ, ಇನ್ನೂ ಮೊದಲಿನಂತೆಯೇ ಅನುಮಾನಿಸಿದಾಗ, ಅವಳು—"ಏನಿದು, ಸ್ವಾಮಿ, ಕ್ಯಾಸಿಯೋಗಾಗಿ, ನಿಮ್ಮ ಸಲುವಾಗಿ ಪ್ರಣಯಭಿಕ್ಷೆ ಯಾಚಿಸಲು ಬರುತ್ತಿದ್ದ ಮೈಕೇಲ್ ಕ್ಯಾಸಿಯೋಗಾಗಿ, ಎಷ್ಟೋ ವೇಳೆಯಲ್ಲಿ ನಾನು ನಿಮ್ಮನ್ನು ತೆಗಳಿದಾಗ ನಿಮ್ಮ ಪಕ್ಷವಹಿಸಿ ಮಾತನಾಡುತ್ತಿದ್ದ ಕ್ಯಾಸಿಯೋಗಾಗಿ ನಾನಿಷ್ಟೊಂದು ಪರಿಯಲ್ಲಿ ನಿಮ್ಮನ್ನು ಬೇಡಬೇಕೇ ಪ್ರಭು? ನಿಮ್ಮಲ್ಲಿ ಬೇಡಲು ಇದು ಸಣ್ಣ ವಿಷಯವೆಂದೇ ನನ್ನ ಭಾವನೆ. ನಿಮ್ಮ ಪ್ರೇಮವನ್ನು ಪರೀಕ್ಷಿಸಲು ನಾನು ಇಚ್ಛಿಸುವಾಗ, ನಿಜಕ್ಕೂ, ಇದಕ್ಕಿಂತ ಹಿರಿದಾದುದನ್ನು ಬೇಡುತ್ತೇನೆ" ಎಂದಳು. ಇಂತಹ ವಾದಿಯೆದುರು ಏನನ್ನೂ ನಿರಾಕರಿಸುವುದು ಒಥೆಲ್ಲೋಗೆ ಸಾಧ್ಯವಾಗದೆ ಹೋಯಿತು. ಅವನು, ಕೇವಲ

ಕಾಲಾವಕಾಶದ ವಿಷಯುವನ್ನು ಡೆಸ್‌ಡಿಮೋನಾ ತನಗೆ ವಹಿಸಿದಲ್ಲಿ, ಮೈಕೇಲ್ ಕ್ಯಾಸಿಯೋನನ್ನು ಪುನಃ ತನ್ನ ಆದರ ಪಾತ್ರನನ್ನಾಗಿ ಮಾಡಿ ಕೊಳ್ಳುವೆನೆಂದು ಆಶ್ವಾಸನೆಯಿತ್ತನು.

ಒಥೆಲ್ಲೋ ಮತ್ತು ಇಯಾಗೋ ಡೆಸ್‌ಡಿಮೋನಾಳಿದ್ದ ಕೊಠಡಿಗೆ ಪ್ರವೇಶ ಮಾಡುವುದಕ್ಕೂ, ಅವಳನ್ನು ತನ್ನ ಪರವಾಗಿ ವಾದಿಸುವಂತೆ ಬೇಡು ತ್ತಿದ್ದ ಕ್ಯಾಸಿಯೋ ಎದುರು ಬಾಗಿಲಿನಿಂದ ಹೊರಗೆ ಹೋಗುವುದಕ್ಕೂ ತಾಳೆ ಯಾಯತು. ಇಯಾಗೋ ಆಗ ತನಗೆ ತಾನೇ ಮಾತನಾಡಿಕೊಳ್ಳುವಂತೆ ಮೆಲುದನಿಯಲ್ಲಿ. "ಇದೇನೂ ನನಗೆ ಸರಿಬೀಳಲಿಲ್ಲ" ಎಂದನು. ಅವನು ಹೇಳಿದ್ದಕ್ಕೆ ಒಥೆಲ್ಲೋ ಹೆಚ್ಚು ಗಮನ ಕೊಡಲಿಲ್ಲ. ಅಷ್ಟೇ ಅಲ್ಲ, ಆ ನಂತರ ಅವನ ಪ್ರಿಯೆಯೊಂದಿಗೆ ನಡೆದ ಸಂಭಾಷಣೆ ಇದನ್ನು ಸಂಪೂರ್ಣವಾಗಿ ಅವನ ನೆನಪಿನಿಂದ ಅಳಿಸಿಬಿಟ್ಟಿತು. ಆದರೆ ಆ ಬಳಿಕ ಅವನಿಗದು ಪುನಃ ನೆನಪಾಗ ಬೇಕಾಯಿತು. ಏಕೆಂದರೆ ಡೆಸ್‌ಡಿಮೋನಾ ಅಲ್ಲಿಂದ ಹೋದ ಮೇಲೆ ಇಯಾಗೋ ಒಥೆಲೋ ಮೇಲೆ ತನ್ನ ಬಲೆಯನ್ನು ಬೀಸತೊಡಗಿದನು. ಮೊದಲು ಅವನು, ತನ್ನ ಯೋಚನೆಯನ್ನು ಸಮರ್ಥಿಸಿಕೊಳ್ಳಲೋ ಎಂಬಂತೆ, ಒಥೆಲ್ಲೋ ಡೆಸ್‌ಡಿಮೋನಾಳ ಪ್ರಣಯಿಯಾಗಿದ್ದಾಗ ಅವನ ಪ್ರಣಯ ವೃತ್ತಾಂತವನ್ನು ಕ್ಯಾಸಿಯೋ ಅರಿತಿದ್ದನೇ ಎಂದು ಪ್ರಶ್ನಿಸಿದನು. ಒಥೆಲ್ಲೋ ಹೌದೆಂದು ಉತ್ತರಿಸಿ, ತಮ್ಮಿಬ್ಬರ ನಡುವೆ ಅವನು ಎಷ್ಟೋ ಮಧ್ಯಸ್ಥಿಕೆ ವಹಿಸಿದ್ದನೆಂದನು. ಘೋರ ವೃತ್ತಾಂತದ ಹೊಸ ಮುಖವೊಂದು ತನಗೆ ಗೋಚರಿಸಿತೋ ಎಂಬಂತೆ ಭ್ರುಕುಟಿ ರಚನೆ ಮಾಡುತ್ತಾ ಉಚ್ಚಕಂಠದಲ್ಲಿ. "ನಿಜವಾಗಿ!" ಎಂದನು. ಇದರಿಂದ ತಾವು ಪ್ರವೇಶಿಸಿದ ಕೂಡಲೇ ಕ್ಯಾಸಿಯೋ ಡೆಸ್‌ಡಿಮೋನಿಳೊಂದಿಗಿರುವುದನ್ನು ನೋಡಿದಾಗ ಇಯಾಗೋ ಆಡಿದ್ದ ಮಾತು ಥಟ್ಟನೆ ಒಥೆಲ್ಲೋನ ಸ್ಮೃತಿಪಥದಲ್ಲಿ ಸುಳಿಯಿತು. ಇವೆಲ್ಲಕ್ಕೂ ಏನೋ ಅರ್ಥವಿರಬೇಕೆಂದು ಅವನು ಯೋಚಿಸತೊಡಗಿದನು. ಅವನಾದರೋ ಇಯಾಗೋ ನಂಬಿಕಸ್ಥನೆಂದೂ, ಮಮತೆ, ಪ್ರಾಮಾಣಿ ಕತೆಗಳ ಗಣಿಯೆಂದೂ ಭಾವಿಸಿದ್ದನು. ಯಾವುದು ಕಪಟಿಯಾದ ನೀಚ ನೊಬ್ಬನಲ್ಲಿ ತಂತ್ರಗಳೆಂದು ಕಂಡುಬರಬಹುದಾಗಿದ್ದಿತೋ ಅವೆಲ್ಲ ಇವನಲ್ಲಿ, ಅನಿರ್ವಚನೀಯವೆನಿಸುವಷ್ಟು ಉತ್ಕೃಷ್ಟವಾದ ಭಾವಗಳಿಂದ ಕೂಡಿ ಮಹ ತ್ಪೂರ್ಣವಾಗಿರುವ ಮನಸ್ಸಿನ ಸಹಜ ಆಲೋಚನಾ ಸರಣಿಯೆಂದೇ ತೋರಿ ತವನಿಗೆ! ತನಗೆ ತಿಳಿದಿದ್ದುದನ್ನು ಇಯಾಗೋ ಹೇಳಬೇಕೆಂದೂ, ಎಂತಹ

ಕೆಟ್ಟ ಭಾವನೆಗಳುಂಟಾಗಿದ್ದರೂ ಅವನ್ನು ನುಡಿಗಳಲ್ಲಿ ಮೂಡಿಸಬೇಕೆಂದೂ ಒಥೆಲ್ಲೋ ಕೋರಿದನು.

ಇಯಾಗೋ "ಒಂದುವೇಳೆ ನನ್ನೆದೆಯಲ್ಲಿ ಬಹು ಅಧಮ ಭಾವನೆಗಳು ಸುಳಿದಿದ್ದರೆ ? ಏಕೆಂದರೆ, ಹೊಲಸು ವಸ್ತುಗಳು ಪ್ರವೇಶಿಸದೆಯೇ ಇರುವಂತಹ ನಿವಾಸ ಯಾವುದು ತಾನೇ ಇದೆ ?" ಎಂದನು. ಇನ್ನೂ ಮುಂದುವರಿಯುತ್ತಾ ಅವನು ಒಥೆಲ್ಲೋನ ವೀಕ್ಷಣಾಶಕ್ತಿಯ ನ್ಯೂನತೆಯಿಂದ ಏನಾದರೂ ಕೆಡಕು ಸಂಭವಿಸಿರುವುದೆಂದರೆ ಅದು ದುರ್ದೈವವೆಂದೇ ಹೇಳಬೇಕೆಂದನು. ಒಥೆಲ್ಲೋ ಮನಶ್ಶಾಂತಿಯನ್ನು ಬಯಸುವುದಾದಲ್ಲಿ ತನ್ನ ಭಾವನೆಗಳನ್ನು ತಿಳಿಯದಿರುವುದೇ ಒಳ್ಳೆಯದೆಂದನು. ಜನರ ಸತ್ಕೀರ್ತಿಯನ್ನು ಕೇವಲ ಕ್ಷುಲ್ಲಕವಾದ ಸಂಶಯದೃಷ್ಟಿಯಿಂದ ಕೀಳುಮಾಡಬಾರದೆಂದನು. ಹೀಗೆ, ಇಂತಹ ಗೂಢ ಮಾತುಗಾರಿಕೆಯಿಂದಲೂ ಅಪೂರ್ಣ ನುಡಿಗಳಿಂದಲೂ ಒಥೆಲ್ಲೋನ ಕುತೂಹಲವನ್ನು ಪರಮಾವಧಿಗೇರಿಸಿದನು. ನಂತರ ಒಥೆಲ್ಲೋನ ಮನಶ್ಶಾಂತಿಯ ಸಲುವಾಗಿ ತಾನು ಬಹು ಕಾತರನಾಗಿರುವೆನೆಂದು ತೋರ್ಪಡಿಸಿಕೊಳ್ಳುತ್ತಾ, ಒಥೆಲ್ಲೋ ಸದಾ ಅಸೂಯೆಯಿಂದ ದೂರವಾಗಿರಬೇಕೆಂದು ಬೇಡಿದನು. ಈ ರೀತಿಯ ಕಪಟ ತಂತ್ರಗಳಿಂದ ನೀಚನು ಅಜಾಗರೂಕನಾಗಿದ್ದ ಒಥೆಲ್ಲೋನ ಮನದಲ್ಲಿ, ಸಂಶಯ ಭಾವಕ್ಕೆ ಎಡೆಕೊಡಕೂಡದೆಂಬ ಎಚ್ಚರಿಕೆಯ ಮಾತನ್ನು ಹೇಳುತ್ತ ಹೇಳುತ್ತಲೇ, ಅದೇ ಮಾತಿನ ಮೂಲಕವಾಗಿಯೇ ಸಂಶಯದ ಬೀಜವನ್ನು ಬಿತ್ತಿದನು. ಒಥೆಲ್ಲೋ "ನಾನು ಬಲ್ಲೆ; ನನ್ನ ಪತ್ನಿ ಚೆಲುವೆ, ಸಹವಾಸ ಪ್ರಿಯೆ, ಆನಂದ ಕೂಟಗಳನ್ನು ಬಯಸುವಳು. ಸ್ವಚ್ಛಂದವಾಗಿ ಮಾತನಾಡುತ್ತಾಳೆ, ಚೆನ್ನಾಗಿ ಹಾಡುತ್ತಾಳೆ, ಕ್ರೀಡಿಸುತ್ತಾಳೆ, ನರ್ತಿಸುತ್ತಾಳೆ. ಆದರೆ ಇಲ್ಲಿ ಸುಚ್ಚಾರಿತ್ರ್ಯವಿರುವುದೋ ಅಲ್ಲಿ ಇವೆಲ್ಲ ಸದ್ಗುಣಗಳೆಂದೇ ಎನಿಸುವುವು. ಅವಳು ವಿಶ್ವಾಸಾರ್ಹಳಲ್ಲವೆಂದು ತೀರ್ಮಾನಿಸುವ ಮುನ್ನ ನನಗೆ ನಿದರ್ಶನ ಬೇಕು" ಎಂದನು. ಆಗ ಇಯಾಗೋ, ಪತ್ನಿಯ ಬಗ್ಗೆ ದುರ್ಭಾವನೆ ತಳೆಯಲು ಒಥೆಲ್ಲೋ ನಿಧಾನಿಸಿದ್ದಕ್ಕಾಗಿ ತಾನು ಬಹು ಸಂತೋಷಪಟ್ಟವನಂತೆ, ಮುಕ್ತಕಂಠದಿಂದ ತನಗೆ ಯಾವ ನಿದರ್ಶನವೂ ದೊರೆತಿಲ್ಲವೆಂದು ಹೇಳಿದನು. ಆದರೆ ಕ್ಯಾಸಿಯೋ ಬಳಿಯಲ್ಲಿರುವಾಗ ಅವಳು ಹೇಗೆ ವರ್ತಿಸುವಳೆಂಬುದನ್ನು ಒಥೆಲ್ಲೋ ಗಮನಿಸಬೇಕೆಂದು ಕೋರಿದನು ಅಸೂಯಾಗ್ರಸ್ತನಾಗದೆ, ಅತಿ ವಿಶ್ವಾಸವನ್ನೂ ತಳೆಯದಂತಿರಬೇಕೆಂದೂ, ಏಕೆಂದರೆ ಒಥೆಲ್ಲೋಗೆ ಶಕ್ಯವಿದ್ದುದಕ್ಕಿಂತ ಮಿಗಿಲಾಗಿ, ಇಟಾಲಿಯನ್.

ಸ್ತ್ರೀಯರ ಪ್ರಕೃತಿಯನ್ನು ತಾನು ಚೆನ್ನಾಗಿ ಅರಿತಿರುವೆನೆಂದೂ ಹೇಳಿದನು. ವೆನಿಸಿನಲ್ಲಿ ಪತ್ನಿಯರು ತಮ್ಮ ಪತಿಯರೆದುರಿನಲ್ಲಿ ತೋರ್ಪಡಿಸಲಾಗದಂತಹ ಎಷ್ಟೋ ಸರಸಲೀಲೆಗಳನ್ನು ವಿಧಿಯೆದುರಿನಲ್ಲಿ ನಡೆಸುವರು. ನಂತರ, ಡೆಸ್‌ಡಿಮೋನಾ ಒಥೆಲ್ಲೋನನ್ನು ಮದುವೆಯಾಗುವಾಗ ತಂದೆಯನ್ನು ಹೇಗೆ ಮೋಸಗೊಳಿಸಿ, ಆ ಬಡಪಾಯಿ ವೃದ್ಧ ಈ ಘಟನೆಯಲ್ಲಿ ಯಾವುದೋ ಮಂತ್ರ ಪ್ರಯೋಗವಾಗಿದ್ದಿತೆಂದು ನಂಬುವಂತೆ ಮಾಡಿದ್ದಳೆಂಬುದನ್ನು ಉಪಾಯವಾಗಿ ಸೂಚಿಸಿದನು. ಈ ಪ್ರತಿಪಾದನೆ ಒಥೆಲ್ಲೋ ಮೇಲೆ ಬಹುಮಟ್ಟಿಗೆ ಪರಿಣಾಮ ಮಾಡಿತು. ನಿಜವಾದ ವಿಷಯ ತನ್ನ ತಲೆಗೆ ಹೊಕ್ಕಂತೆಯೇ ಅವನಿಗೆನಿಸಿತು. ಏಕೆಂದರೆ, ತಂದೆಯನ್ನು ಅವಳು ಮೋಸಗೊಳಿಸಿದ್ದಲ್ಲಿ ಪತಿಯನ್ನು ತಾನೇ ಮೋಸಗೊಳಿಸಬಾರದೇಕೆ ?!

ಇಯಾಗೋ, ಅವನ ಮೇಲೆ ಈ ಪರಿಣಾಮ ಉಂಟುಮಾಡಿದ್ದಕ್ಕೆ ಕ್ಷಮೆ ಬೇಡಿದನು. ಆದರೆ, ಅಂತರಾಳದಲ್ಲಿ ಅವನ ನುಡಿಗಳ ದೆಸೆಯಿಂದ ವೇದನೆಯುಂಟಾಗಿ ಕಳವಳಿಗೊಂಡಿದ್ದರೂ ಸಹ ಒಥೆಲ್ಲೊ ಉದಾಸೀನ ಭಾವವನ್ನು ನಟಿಸಿ, ಮಾತನ್ನು ಮುಂದುವರಿಸುವಂತೆ ಇಯಾಗೋನನ್ನು ಕೋರಿದನು. ಇಯಾಗೋ ಅಡಿಗಡಿಗೆ ಕ್ಷಮಾಯಾಚನೆ ಮಾಡುತ್ತಾ, ತನ್ನ 'ಮಿತ್ರ' ಕ್ಯಾಸಿಯೋ ವಿರುದ್ಧವಾಗಿ ಏನನ್ನು ಹೇಳಲೂ ಹಿಂಜರಿಯುವಂತೆ ತೋರ್ಪಡಿಸಿಕೊಳ್ಳುತ್ತಾ ಮುಂದುವರಿಸಿದನು. ಕೊನೆಯ ಘಟ್ಟದಲ್ಲಿ ಉದ್ದಿಷ್ಟ ಅಂಶಕ್ಕೆ ಬಂದು ಅದನ್ನು ದೃಢಪಡಿಸಿದನು. ಡೆಸ್‌ಡಿಮೋನಾ ತನ್ನ ನಾಡಿನವರಲ್ಲಿ, ತನ್ನ ವಂಶದವರಲ್ಲಿ, ಸತ್ಪಾತ್ರರಾದ ಎಷ್ಟೋ ಕನ್ಯಾರ್ಥಿಗಳನ್ನು ತಿರಸ್ಕರಿಸಿ ಒಥೆಲ್ಲೋನನ್ನು ಮದುವೆಯಾದಳೆಂಬುದನ್ನು ಜ್ಞಾಪಿಸಿಕೊಡುತ್ತಾ, ಇದು ಬಹು ಅಸಹಜವೆಂದೂ, ಅವಳೆಂತಹ ದೃಢಮನಸ್ಕಳಾದ ಸ್ತ್ರೀಯೆಂಬುದನ್ನು ಅದು ನಿದರ್ಶಿಸುವುದೆಂದೂ ಅಭಿಪ್ರಾಯಪಟ್ಟನು. ಮುಂದೆ ಅವಳು ಕೂಲಂಕುಷವಾಗಿ ವಿವೇಚನೆ ಮಾಡಿದಾಗ, ಒಥೆಲ್ಲೋನನ್ನು ಅವಳು ತನ್ನ ನಾಡಿನ ತರುಣರ ಸುಂದರಾಕೃತಿ, ಶುಭ್ರ ಬಿಳಿ ವರ್ಣದೊಂದಿಗೆ ಹೋಲಿಸತೊಡಗುವುದು ಬಹುಮಟ್ಟಿಗೆ ಸಂಭವನೀಯವೆಂದು ನುಡಿದನು. ತನ್ನ ಮಾತನ್ನು ಮುಗಿಸುವುದಕ್ಕೆ ಮುಂಚೆ ಒಥೆಲ್ಲೋ ಕ್ಯಾಸಿಯೋನೊಂದಿಗೆ ಮೈತ್ರಿ ಬೆಳೆಸುವುದನ್ನು ಇನ್ನೂ ಸ್ವಲ್ಪ ಕಾಲದವರೆಗೂ ಮುಂದೆ ಹಾಕಬೇಕೆಂದೂ, ಆ ವೇಳೆಯಲ್ಲಿ ಡೆಸ್‌ಡಿಮೋನಾ ಅವನ ಪರವಾಗಿ ಎಷ್ಟು ದೃಢತೆ

ಯಿಂದ ಬಿನ್ನಹ ಮಾಡಿಕೊಳ್ಳುವಳೆಂಬುದನ್ನು ಗಮನಿಸಿ ನೋಡಬೇಕೆಂದೂ ಸಲಹೆ ಕೊಟ್ಟನು. ಹೀಗೆ' ಇಷ್ಟು ತಂತ್ರದಿಂದ, ಕಪಟಿಯಾದೀ ನೀಚನು' ಆ ನಿಷ್ಕಳಂಕಿನಿಯ ವಿನೀತ ಗುಣಗಳೇ ಅವಳಿಗೆ ಮುಳುವಾಗುವಂತೆ, ಅವಳ ಒಳ್ಳೆಯತನವನ್ನೇ ಬಲೆಯಾಗಿ ಬೀಸಿ ಅದರಿಂದ ಅವಳು ಬಂಧಿತಳಾಗುವಂತೆ ಹಂಚಿಕೆ ಮಾಡಿದನು. ಮೊದಲು ಕ್ಯಾಸಿಯೋನಿಗೆ ಅವಳ ಮಧ್ಯಸ್ಥಿಕೆಯನ್ನು ಕೋರುವಂತೆ ತಾನೇ ಹೇಳಿಕೊಟ್ಟು, ಅದೇ ಮಧ್ಯಸ್ಥಿಕೆಯಿಂದ ಅವಳ ಸರ್ವ ನಾಶವಾಗುವಂತಹ ಕೌಶಲವನ್ನು ಸಿದ್ಧಗೊಳಿಸಿದನು.

ಸಂವಾದ ಮುಗಿಯುವ ಮೊದಲು ಇಯಾಗೋ ಒಥೆಲ್ಲೋನನ್ನು, ಇನ್ನೂ ಪ್ರಬಲ ನಿದರ್ಶನ ದೊರೆಯುವವರೆಗೂ ಹೆಂಡತಿಯನ್ನು ನಿರಪರಾಧಿನಿ ಎಂದೇ ಗಣಿಸಬೇಕೆಂದು ಬೇಡಿದನು. ಒಥೆಲ್ಲೋ ತಾಳ್ಮೆಯಿಂದಿರುವುದಾಗಿ ಮಾತು ಕೊಟ್ಟನು. ಆದರಾಕ್ಷಣದಿಂದ ವಂಚನೆಗೊಳಗಾದ ಒಥೆಲ್ಲೋಗೆ ಮನಶ್ಶಾಂತಿಯೆಂಬುದು ಕೇವಲ ಹೆಸರಾಗಿ ಮಾತ್ರ ಉಳಿಯಿತು. ಆಫೀಮ್ಮಾಗಲಿ, ಮಾಂಡ್ರಗೋರದ ರಸವಾಗಲೀ, ಪ್ರಪಂಚದ ಯಾವುದೇ ಸಮ್ಮೋಹಕ ದ್ರಾವಕವಾಗಲೀ ಅವನಿಗೀಗ ಶಾಂತಿಯನ್ನು ಕೊಡಲಾರದೆ ಹೋದವು. ಕೇವಲ ಹಿಂದಿನ ದಿನದ ವರೆಗೂ ಅವನು ಅನುಭವಿಸುತ್ತಿದ್ದಂತಹ ಮಧುರ ವಿಶ್ರಾಂತಿ ಅವನಿಗಿನ್ನಿಲ್ಲದಂತಾಯಿತು. ಅಧಿಕಾರ-ಉದ್ಯಮಗಳಲ್ಲಿ ಅವನಿಗೆ ಜಿಗುಪ್ಸೆಯುಂಟಾಯಿತು. ಆಯುಧ ಪ್ರಯೋಗದಲ್ಲಿ ಹಿಂದಿನಂತೆ ಉತ್ಸಾಹ ಸಂತೋಷಗಳೇ ಇಲ್ಲದಾಯಿತು. ಸೈನ್ಯದ ದಂಡನ್ನಾಗಲೀ ಪತಾಕೆಗಳನ್ನಾಗಲೀ, ಯುದ್ಧವ್ಯೂಹವನ್ನಾಗಲೀ ನೋಡಿದಾಗ ಸ್ಫೂರ್ತಿಗೊಳಿಸುತ್ತಿದ್ದ ಅವನ ಹೃದಯ, ಕೊಂಬು ಕಹಳೆಗಳ, ನಗಾರಿಗಳ ಶಬ್ದದಿಂದ ಇಲ್ಲವೇ ಕುದುರೆಯ ಹೇಷಾರವದಿಂದ ಪುಟಿದೇಳುತ್ತಿದ್ದ ಅವನ ಹೃದಯ ಈಗ ಸೈನಿಕನಲ್ಲಿ ಅಗತ್ಯವಾದ ಸದ್ಗುಣಗಳೆನಿಸುವ ಹೆಮ್ಮೆ, ಆಶೋತ್ತರಗಳನ್ನು ಕಳೆದುಕೊಂಡಂತಿತ್ತು, ಅವನ ಯೋದ್ಧ ಸಹಜ ಹುಮ್ಮಸ್ಸು, ಹಿಂದಿನ ಆನಂದಭಾವ, ಅವನನ್ನು ತೊರೆದು ಹೋದವು. ಕೆಲವೊಮ್ಮೆ ಅವನಿಗೆ ಹೆಂಡತಿ ಶೀಲನಿಷ್ಠಳೆಂದೆನಿಸುತ್ತಿತ್ತು. ಮತ್ತೊಮ್ಮೆ ಅಲ್ಲವೆಂದೆನಿಸುತ್ತಿತ್ತು. ಕೆಲವೊಮ್ಮೆ ಇಯಾಗೋ ನ್ಯಾಯಪರನೆಂದನಿಸುತ್ತಿತ್ತು, ಮತ್ತೊಮ್ಮೆ ಅಲ್ಲವೆಂದೆನಿಸುತ್ತಿತ್ತು. ಆಗ ತನಗಿದೆಲ್ಲದರ ಅರಿವೇ ಇಲ್ಲದಿದ್ದರೆ ಎಂದವನು ಹಂಬಲಿಸುತ್ತಿದ್ದನು. ಅವಳು ಕ್ಯಾಸಿಯೋನನ್ನು ಪ್ರೇಮಿಸಿದ್ದರೂ, ತನಗಾ ವಿಷಯ ತಿಳಿಯದಿರುವವರೆಗೆ, ಏನೂ ಬಾಧಕವಿರಲಿಲ್ಲವೆಂದೆನಿಸುತ್ತಿತ್ತು. ಇಂತಹ ದ್ವಂದ್ವ ಭಾವನೆಗಳಿಂದ

ಜರ್ಝರಿತನಾಗಿ ಅವನೊಮ್ಮೆ ಇಯಾಗೋನ ಕತ್ತು ಹಿಡಿದು, ಡೆಸ್‌ಡಿಮೋನಾಳ ಕಳಂಕದ ಬಗ್ಗೆ ನಿದರ್ಶನವನ್ನು ತೋರಿಸಲೇಬೇಕೆಂದೂ, ಇಲ್ಲದಿದ್ದರೆ ಆ ಕ್ಷಣದಲ್ಲೇ ಅವಳಮೇಲೆ ಮಿಥ್ಯಾರೋಪ ಹೊರಿಸಿದ್ದಕ್ಕೆ ಅವನನ್ನು ಮರಣದಂಡನೆಗೆ ಗುರಿಮಾಡುವುದಾಗಿಯೂ ಬೆದರಿಸಿದನು. ಇಯಾಗೋ ತನ್ನ ನಿಷ್ಠೆ ದುರ್ಗುಣವೆಂದು ಪರಿಗಣಿತವಾದುದಕ್ಕೆ ಬಹು ಕೋಪಗೊಂಡವನಂತೆ ತೋರ್ಪಡಿಸಿಕೊಂಡನು. ಒಥೆಲ್ಲೋ ಆಗಾಗ ಪತ್ನಿಯ ಕೈಯಲ್ಲಿ ಕೆಂಪು ಹಣ್ಣುಗಳ ಚಿತ್ರವನ್ನುಳ್ಳ ಕರವಸ್ತ್ರವೊಂದನ್ನು ನೋಡುತ್ತಿರಲಿಲ್ಲವೇ ಎಂದು ಕೇಳಿದನು. ಒಥೆಲ್ಲೋ ಅಂತಹುದನ್ನು ತಾನವಳಿಗೆ ಪ್ರಥಮ ಕಾಣಿಕೆಯಾಗಿ ಕೊಟ್ಟಿದ್ದುಂಟೆಂದು ಉತ್ತರಿಸಿದನು. ಇಯಾಗೋ "ಅದೇ ಕರವಸ್ತ್ರದಿಂದಲೇ ಮೈಕೇಲ್ ಕ್ಯಾಸಿಯೋ ಮುಖ ಒರಿಸಿಕೊಂಡಿದ್ದನ್ನು ನಾನಿಂದು ನೋಡಿದೆ" ಎಂದನು. ಒಥೆಲ್ಲೋ "ನೀನು ಹೇಳುವುದು ನಿಜವಾಗಿದ್ದರೆ, ಅವರಿಬ್ಬರಿಗೂ ಪ್ರತೀಕಾರಮಾಡಿ ತೀರಿಸುವವರೆಗೂ ನಾನು ವಿರಮಿಸುವುದಿಲ್ಲ. ಮೊದಲು, ನಿನ್ನ ನಿಷ್ಠೆಯ ಕುರುಹಾಗಿ, ಇನ್ನು ಮೂರುದಿನಗಳೊಳಗೆ ಕ್ಯಾಸಿಯೋನನ್ನು ಮರಣದಂಡನೆಗೆ ಗುರಿ ಮಾಡಲಿಚ್ಛಿಸುತ್ತೇನೆ, ಇನ್ನಾ ಸುಂದರ ಪಿಶಾಚಿಗೆ (ಇದು ಪತ್ನಿಯನ್ನುದ್ದೇಶಿಸಿದ್ದು) ಈಗಲೇ ಹೋಗಿ, ಇನ್ನಾವುದಾದರೂ ಶೀಘ್ರ ಮರಣಕಾರಿಯಾದ ಮಾರ್ಗವನ್ನು ಹುಡುಕುತ್ತೇನೆ" ಎಂದನು.

ತೃಣಸಮಾನವಾದ ಕ್ಷುಲ್ಲಕ ವಿಷಯಗಳು, ಅಸೂಯಾಗ್ರಸ್ತರಿಗೆ ದೇವಲಿಪಿಯಷ್ಟೇ ಪ್ರಬಲ ನಿದರ್ಶನಗಳೆನಿಸಿಬಿಡುತ್ತವೆ. ಭ್ರಾಂತ ಒಥೆಲ್ಲೋಗೆ, ಪತ್ನಿಯ ಕರವಸ್ತ್ರವೊಂದನ್ನು ಕ್ಯಾಸಿಯೋ ಕೈಯಲ್ಲಿ ಕಾಣುವುದೇ, ಅವರಿಬ್ಬರಿಗೂ ಮರಣದಂಡನೆ ವಿಧಿಸಲು ಸಾಕಷ್ಟು ಪ್ರಬಲ ನಿದರ್ಶನವೆಂದು ತೋರಿತು. ಕ್ಯಾಸಿಯೋ ಬಳಿ ಕರವಸ್ತ್ರ ಹೇಗೆ ಬಂದಿತೆಂಬುದನ್ನು ಒಮ್ಮೆಯಾದರೂ ವಿಚಾರಿಸಬೇಕೆಂದು ಅವನಿಗೆನಿಸಲಿಲ್ಲ. ವಾಸ್ತವವಾಗಿ ಡೆಸ್‌ಡಿಮೋನಾ ಅಂತಹ ಯಾವುದೇ ಕಾಣಿಕೆಯನ್ನು ಕ್ಯಾಸಿಯೋಗೆ ಕೊಟ್ಟಿರಲಿಲ್ಲ. ಆ ಸಾಧ್ವಿ ಪತಿಯ ಉಡುಗೊರೆಗಳನ್ನು ಇನ್ನೊಬ್ಬ ಪುರುಷನಿಗೆ ಕೊಡುವಂತಹ ಉದ್ಧಟತನಕ್ಕೆ ಕೈ ಹಾಕಿ ಎಂದೂ ಅಪಚಾರ ಎಸಗುವಂತಹವಳಲ್ಲ. ಕ್ಯಾಸಿಯೋನಾಗಲೀ, ಡೆಸ್‌ಡಿಮೋನಾಳಾಗಲೀ ಒಥೆಲ್ಲೋಗೆ ಯಾವ ಬಗೆಯಲ್ಲೂ ಅನ್ಯಾಯವೆಸಗಿರಲಿಲ್ಲ. ಆದರೆ ದುಷ್ಟ ಇಯಾಗೋ, ದ್ರೋಹದ ಹಂಚಿಕೆಗಳನ್ನು ಹೂಡುವುದರಲ್ಲಿ ಎಂದೂ ಬೇಸರಿಸದಿದ್ದ ಈ ನೀಚ ಇಯಾಗೋ ಪುನಃ ತಂತ್ರ ಹೂಡಿದ್ದನು. ಒಳ್ಳೆಯವಳಾದರೂ ದುರ್ಬಲ

ಸ್ತ್ರೀಯಾಗಿದ್ದ ತನ್ನ ಪತ್ನಿ, ಡೆಸ್‌ಡಿಮೋನಾಳಿಂದ ಆ ಕರವಸ್ತ್ರವನ್ನು ನಕಲು ಮಾಡಿಕೊಳ್ಳುವ ಸೋಗಿನಲ್ಲಿ ಕದಿಯುವಂತೆ ಮಾಡಿದ್ದನು. ಅವಳು ಅದನ್ನು ಕದ್ದುತಂದು, ಕ್ಯಾಸಿಯೋನ ಹಾದಿಯಲ್ಲಿ ಅವನಿಗೆ ಸಿಕ್ಕುವಂತೆಯೇ ಬೀಳಿಸಿದ್ದು, ಡೆಸ್‌ಡಿಮೋನಳೇ ಅದನ್ನು ಕಾಣಿಕೆಯಾಗಿತ್ತಿದ್ದಳೆಂಬ ಇಯಾಗೋನ ಸೂಚನೆಗೆ ದೃಢ ಬೆಂಬಲ ಸಿಕ್ಕುವಂತೆ ಮಾಡಿದ್ದಳು.

ಒಥೆಲ್ಲೋ ಹೆಂಡತಿಯನ್ನು ಸಂಧಿಸಿದ ಕೂಡಲೇ, ತನಗೆ ತಲೆನೋವು ಉಂಟಾಗಿರುವುದೆಂದು ನೆಪವೊಡ್ಡಿ—ನಿಜವಾಗಿ ಅವನಿಗೆ ತಲೆನೋವು ಉಂಟಾಗಿದ್ದರೂ ಆಶ್ಚರ್ಯವಿಲ್ಲ—ನೆತ್ತಿಯ ಮೇಲೆ ಒತ್ತಿ ಹಿಡಿಯುವುದಕ್ಕಾಗಿ ಕರವಸ್ತ್ರ ಬೇಕೆಂದು ಕೇಳಿದನು. ಅವಳದನ್ನು ಕೊಟ್ಟಾಗ "ಇದಲ್ಲ; ನಾನು ನಿನಗಿತ್ತ ಆ ಕರವಸ್ತ್ರವನ್ನು ಕೊಡು" ಎಂದನು. ನಾವು ಹಿಂದೆಯೇ ತಿಳಿಸಿರುವಂತೆ ಅದು ಅಪಹೃತವಾಗಿದ್ದುದರಿಂದ, ಡೆಸ್‌ಡಿಮೋನಳಿಗೆ ಅದೆಲ್ಲೂ ದೊರೆಯದಾಯಿತು. ಒಥೆಲ್ಲೋ "ಏನು ಏನು ? ಇದು ನಿಜವಾಗಿಯೂ ದೊಡ್ಡ ತಪ್ಪು. ಆ ಕರವಸ್ತ್ರವನ್ನು ಈಜಿಪ್ಟಿನ ಹೆಂಗಸೊಬ್ಬಳು ನನ್ನ ತಾಯಿಗೆ ಕೊಟ್ಟಿದ್ದಳು. ಆ ಹೆಂಗಸು ಮಂತ್ರವಾದಿನಿ; ಇತರರ ಮನೋಭಾವಗಳೆಲ್ಲಾ ಅವಳಿಗೆ ತಿಳಿಯುತ್ತಿದ್ದಿತು. ಅವಳು ಆ ಕರವಸ್ತ್ರ ಬಳಿಯಲ್ಲಿರುವವರೆಗೂ ನನ್ನ ತಾಯಿ ಮನಃಪ್ರಿಯಳಾಗಿದ್ದು ತಂದೆಗೆ ಬಹು ಪ್ರೀತಿ ಪಾತ್ರಳಾಗಿರುವಳೆಂದೂ, ಹಾಗಲ್ಲದೆ ಅವಳದನ್ನು ಯಾರಿಗಾದರೂ ಕೊಟ್ಟಲ್ಲಿ ಅಥವಾ ಕಳೆದುಕೊಂಡಲ್ಲಿ ತಂದೆಯ ಒಲವು ಬೇರೆಡೆಗೆ ಹರಿದು, ಅವಳನ್ನು ಬಹುವಾಗಿ ದ್ವೇಷಿಸುವನೆಂದೂ ಹೇಳಿದ್ದಳು. ಸಾಯುವಾಗ ನನ್ನ ತಾಯಿ ಅದನ್ನು ನನ್ನ ವಿವಾಹಾನಂತರ ಹೆಂಡತಿಗೆ ಕೊಡಬೇಕೆಂದೂ ಹೇಳಿ ನನಗಿತ್ತಳು. ಅದಕ್ಕೆಂದೇ ನಿನಗದನ್ನು ನಾನು ಕೊಟ್ಟಿದ್ದುದು. ಅದರ ಬಗ್ಗೆ ಎಚ್ಚರ ವಹಿಸು. ನಿನ್ನ ಕಣ್ಣುಬೊಂಬೆಯಂತೆಯೇ ಅದನ್ನು ಕಾಪಾಡು" ಎಂದನು. ಭಯಭೀತಳಾಗಿ ಅವಳು "ಇದು ನಿಜವೆ ?" ಎಂದಳು. ಒಥೆಲ್ಲೋ 'ಸತ್ಯ' ಎಂದು ಹೇಳಿ ಮುಂದುವರಿಸುತ್ತಾ "ಅದು ಮಂತ್ರ ಪ್ರಭಾವವುಳ್ಳ ಕರವಸ್ತ್ರ. ಈ ಭೂಮಿಯ ಮೇಲೆ ಇನ್ನೂರು ವರ್ಷಗಳ ಕಾಲ ಬದುಕಿದ್ದ ಭವಿಷ್ಯವಾದಿನೀ ಮುದುಕಿಯೊಬ್ಬಳು ಯಾವುದೋ ಉತ್ಸಾಹದ ಭರದಲ್ಲಿ ಅದನ್ನು ತಯಾರಿಸಿದಳಂತೆ. ಅದರಲ್ಲಿರುವ ರೇಷ್ಮೆ, ರೇಷ್ಮೆಹುಳುಗಳನ್ನೇ ಕೊರೆದು ತೆಗೆದಿದ್ದು; ಮೃತ ತರುಣಿಯರ ಹೃದಯದ ರಕ್ತದಿಂದ ಅದಕ್ಕೆ ಬಣ್ಣ ಕೊಡಲಾಗಿದೆ"

ಎಂದನು, ಕರವಸ್ತ್ರದ ಈ ಅದ್ಭುತ ಗುಣ ಸಾಮರ್ಥ್ಯಗಳನ್ನು ಕೇಳಿದಾಗ ಡೆಸ್‌ಡಿಮೋನಾ ಭಯದಿಂದ ತತ್ತರಿಸಿಹೋದಳು. ಅದಂತೂ ಕಳೆದು ಹೋಗಿರುವುದು ಸ್ಪಷ್ಟವಾಗಿತ್ತು. ಅದರೊಂದಿಗೇ ಪತಿಯ ಪ್ರೇಮವನ್ನೂ ತಾನು ಕಳೆದುಕೊಳ್ಳಬಹುದೆಂಬ ಭೀತಿ ಅವಳನ್ನಾವರಿಸಿತು. ಆಗ ಒಥೆಲ್ಲೋ ಇದ್ದಕಿದ್ದಂತೆ ಬೆಚ್ಚಿಬಿದ್ದು, ಯಾವುದೋ ಕ್ರೂರಕೃತ್ಯವನ್ನೆಸಗಲಿರುವಂತೆ ತೋರಿಬಂದನು. ಪುನಃ ಪುನಃ ಅವನು ಕರವಸ್ತ್ರವನ್ನು ಕೇಳಿದಾಗ, ತಾನದನ್ನು ಕೊಡಲಾರದಿದ್ದುದರಿಂದ ಅವಳು ಪತಿಯನ್ನು ಈ ಗಾಢ ಚಿಂತನೆಯಿಂದ ಬೇರೆಡೆಗೆ ತಿರುಗಿಸಲು ಪ್ರಯತ್ನ ಮಾಡಿದಳು. ಸಮ್ಮಾನದಿಂದಲೇ ಅವಳು ಒಥೆಲ್ಲೋನ ಈ ಮಾತೆಲ್ಲಾ ಕೇವಲ ಮೈಕೋಲ್ ಕ್ಯಾಸಿಯೋ ಬಗ್ಗೆ ತಾನು ಮಾಡಿಕೊಂಡ ಬಿನ್ನಹವನ್ನು ಮರೆಸುವ ಉದ್ದೇಶದಿಂದ ನುಡಿದವೆಂಬುದು ತನಗೆ ತಿಳಿದುಬಂದಿರುವುದಾಗಿ ಹೇಳಿದಳು. ನಂತರ ಅವಳು, ಇಯಾಗೋ ಮುನ್ಸೂಚನೆ ಕೊಟ್ಟಿದ್ದಂತೆಯೇ, ಕ್ಯಾಸಿಯೋನನ್ನು ಶ್ಲಾಘಿಸಲು ಮೊದಲು ಮಾಡಿದಳು. ಕೊನೆಗೆ ಇನ್ನು ಸಹಿಸಲಾಗದೆ ಒಥೆಲ್ಲೋ ಪೂರ್ಣ ಪ್ರಕ್ಷುಬ್ಧನಾಗಿ ಹೊರಗೆ ಧಾವಿಸಬೇಕಾಯಿತು. ಆಗ ದಿಗ್ಭ್ರಾಂತಳಾದ ಡೆಸ್‌ಡಿಮೋನಾ ಕಣ್ಣು ತೆರೆದಳು ; ಪತಿ ಅಸೂಯಾಗ್ರಸ್ತನಾಗಿರುವನೆಂದು ಅವಳು ಮನಸ್ಸಿಲ್ಲದ ಮನಸ್ಸಿನಿಂದ ಶಂಕಿಸಲೇಬೇಕಾಯಿತು.

ತಾನವನಿಗೆ ಯಾವ ಸಂಶಯಾಸ್ಪದ ಕಾರಣವನ್ನು ಒದಗಿಸಿರಬಹುದೆಂಬುದೇ ಅವಳಿಗೆ ಹೊಳೆಯದಾಯಿತು. ಪುನಃ ಅವಳು ಉದಾತ್ತ ಒಥೆಲ್ಲೋನನ್ನು ಆರೋಪಿಸಿದ್ದಕ್ಕಾಗಿ ತನ್ನನ್ನೇ ನಿಂದಿಸಿಕೊಂಡಳು. ವೆನಿಸ್‌ನಿಂದ ಬಂದ ಯಾವುದೋ ದುಷ್ಟವಾರ್ತೆಯೋ ಇಲ್ಲವೇ ಬೇರೆ ಯಾವುವೋ ರಾಜ್ಯಕಾರ್ಯಗಳೋ ಅವನ ಮನಸ್ಸನ್ನು ಕದಡಿ, ಹಿಂದಿನಷ್ಟೇ ಅವನು ಮಧುರ ಪ್ರಕೃತಿಯವನಾಗಲು ಅಸಾಧ್ಯವೆನಿಸುವಂತೆ ಮಾಡಿರಬೇಕೆಂದು ಚಿಂತನೆಮಾಡಿದಳು. ಆಗವಳು "ಪುರುಷರೇನೂ ದೇವತೆಗಳಲ್ಲ. ಅವರು ಮದುವೆಯಾದ ಮೇಲೆ ವಿವಾಹದ ದಿನ ತೋರಿಸುವ ಆಸಕ್ತಿಯನ್ನೇ ಯಾವಾಗಲೂ ತೋರ್ಪಡಿಸುವರೆಂದು ನಾವು ಅಪೇಕ್ಷಿಸಲಾಗದು" ಎಂದುಕೊಂಡಳು. ಅವನ ನಿರ್ದಯತ್ವವನ್ನು ತಾನಷ್ಟು ನಿರ್ದಯಳಾಗಿ ವಿವೇಚಿಸಿದ್ದು ತಪ್ಪೆಂದು ತನ್ನನ್ನೇ ಹಳಿದುಕೊಂಡಳು.

ಮತ್ತೊಮ್ಮೆ ಒಥೆಲ್ಲೋ ಮತ್ತು ಡೆಸ್‌ಡಿಮೋನಾ ಸಂಧಿಸಿದರು. ಆಗ ಒಥೆಲೋ ಮನಬಿಚ್ಚಿ, ಅವಳು ಪರಪುರುಷನೊಬ್ಬನಲ್ಲಿ ಅನುರಕ್ತಳಾಗಿ ತನಗೆ

ದ್ರೋಹವೆಸಗಿರುವಳೆಂದು ಆರೋಪಿಸಿದನು. ಆದರೆ ಆ ಪುರುಷ ಯಾರೆಂಬು ದನ್ನವನು ಹೇಳಲಿಲ್ಲ. ಧೀರ ಒಥೆಲ್ಲೋ ಆಗ ಹೆಂಗಸಿನಂತೆ ಅತ್ತನು. ಡೆಸ್‌ಡಿಮೋನಾ "ಅಯ್ಯೋ, ದುರ್ದಿನವೇ, ನೀವಳುವುದೇಕೆ ?" ಎಂದಳು. ಒಥೆಲ್ಲೋ ಬಡತನ, ರೋಗ, ಅಪಮಾನ ಮುಂತಾದ ಎಲ್ಲ ಕೆಡಕುಗಳನ್ನಾ ದರೂ ತಾನು ಧೃತಿಗೆಡದೆ ಸಹಿಸುತ್ತಿದ್ದನೆಂದೂ ಆದರೆ ಅವಳ ಈ ದ್ರೋಹ ತನ್ನೆದೆಯನ್ನು ಭೇದಿಸಿಬಿಟ್ಟಿರುವುದೆಂದೂ ಹೇಳಿದನು. ಇಂದ್ರಿಯಬಾಧೆ ಯನ್ನುಂಟುಮಾಡುವಷ್ಟು ನೋಟಕ್ಕೆ ಚೆಲುವಾಗಿಯೂ, ಘ್ರಾಣಕ್ಕೆ ಪರಿಮಳ ಯುಕ್ತವಾಗಿಯೂ ತೋರುವ ಕ್ಷುಲ್ಲಕ ಸಸ್ಯದಂತಹವಳು ಅವಳೆಂದು ಹಳಿದನು. ಅವಳೆಂದೂ ಹುಟ್ಟದೆಯೇ ಇದ್ದಿದ್ದರೆ ಎಂದು ಹಂಬಲಿಸಿದನು. ಕೊನೆಗೆ ಅವನು ಅಲ್ಲಿಂದ ತೆರಳಿದಾಗ, ಆ ನಿರ್ದೋಷಿಯಾದ ರಮಣಿ ಅವನ ಹುರುಳಿಲ್ಲದ ಸಂಶಯಗಳಿಂದ ದಿಗ್ಭ್ರಾಂತಳಾಗಿದ್ದಳು. ಅದರಿಂದಲೇ ಅನಂತರ ಬಹು ಭಾರವಾದ ನಿದ್ರೆ ಅವಳನ್ನಾವರಿಸಿಬಿಟ್ಟಿತು. ಅವಳು ಹಾಸಿಗೆ ಯನ್ನು ಸಿದ್ಧಪಡಿಸಿ ತನ್ನ ವಿವಾಹ ವಸ್ತ್ರಗಳನ್ನು ಅಲ್ಲಿಡುವಂತೆ ದಾಸಿಗೆ ಆಜ್ಞೆ ವಿಧಿಸಿದಳು. ಜನರು ಚಿಕ್ಕ ಮಕ್ಕಳಿಗೆ ಬೋಧಿಸುವಾಗ ಕಠಿಣವಲ್ಲದ ಕ್ರಮ ಗಳನ್ನು, ಸುಲಭ ಮಾರ್ಗವನ್ನು ಕೈಗೊಳ್ಳುವರೆಂದೂ, ಅಂತೆಯೇ ಒಥೆಲ್ಲೋ ತನ್ನನ್ನು–ಗದರಿಸಿದಾಗ ಮಗುವಿನಂತೆಯೇ ಆಗುತ್ತಿದ್ದ ತನ್ನನ್ನು–ಗದರಿಸಿರ ಬಹುದೆಂದೂ ಹೇಳಿಕೊಂಡಳು. ಇದಲ್ಲದೆ ಬೇರೆ ದೂರಿನ ಮಾತನ್ನು ಆ ಸಾಧ್ವಿ ನುಡಿಯಲಿಲ್ಲ, ಯೋಚಿಸಲೂ ಇಲ್ಲ.

ಡೆಸ್‌ಡಿಮೋನಾ, ಪತಿ ಶೀಘ್ರದಲ್ಲೇ ಬರಬಹುದೆಂದು ಆಲೋಚಿಸಿ, ವಿಶ್ರಾಂತಿಗಾಗಿ ಹಾಸಿಗೆಯಲ್ಲಿ ಒರಗಿದಳು. ಕದಡಿದ ಮನಸ್ಸಿನ ಪರಿಣಾಮ ವಾಗಿ ಸ್ವಲ್ಪ ಹೊತ್ತಿನಲ್ಲೇ ಅವಳನ್ನು ಗಾಢನಿದ್ರೆ ಆವರಿಸಿತು. ಆಗ ಒಥೆಲ್ಲೋ ಪತ್ನಿಯನ್ನು ಮರಣಕ್ಕೆ ಗುರಿಮಾಡುವ ಕರಾಳ ಉದ್ದೇಶದೊಡನೆ ಅಲ್ಲಿ ಪ್ರವೇಶಿಸಿದನು. ಅವಳು ನಿದ್ರಾಸಕ್ತಳಾಗಿದ್ದುದನ್ನು ನೋಡಿದಾಗ, ಅವಳ ರಕ್ತವನ್ನು ಹರಿಸುವುದಿಲ್ಲವೆಂದೂ, ಚಂದ್ರಕಾಂತಶಿಲೆಗಿಂತ ಬಿಳುಪಾದ ಅವಳ ಶುಭ್ರ ದೇಹವನ್ನು ಗಾಯಗೊಳಿಸುವುದಿಲ್ಲವೆಂದೂ ಸಂಕಲ್ಪಿಸಿದನು. ಆದರೆ, ಅವಳು ಬದುಕಿದ್ದರೆ ತನ್ನಂತೆಯೇ ಇನ್ನೂ ಹೆಚ್ಚು ಜನರಿಗೆ ದ್ರೋಹ ಬಗೆಯ ಬಹುದಾದ್ದರಿಂದ ಅವಳು ಸಾಯುವುದೇ ಸರಿಯೆಂದು ನಿರ್ಧಾರ ಧ್ವನಿಯಲ್ಲಿ ಹೇಳಿಕೊಂಡನು. ನಂತರ ಅವನು ಅವಳನ್ನು ಕೊನೆಯ ಬಾರಿಗೆಂದು ಚುಂಬಿಸಿದನು. ಆದರಾಚುಂಬನದ ಮಾಧುರ್ಯ ಅವನು ಪುನಃ ಅವಳನ್ನು

ಚುಂಬಿಸಲು ಅಪೇಕ್ಷಿಸುವಂತೆ ಮಾಡಿತು. ಆಗವನು ಅತ್ತನು; ಆದರಾ ಕಂಬನಿಗಳೆಲ್ಲ ಕ್ರೂರ ಬಾಷ್ಪವೆಂದು ತಾನೇ ಹೇಳಿಕೊಂಡನು.

ಡೆಸ್‌ಡಿಮೋನಾ ಅವನ ಸ್ಪರ್ಶದಿಂದ ಎಚ್ಚರಗೊಂಡು, ಒಥೆಲ್ಲೋನ ಮುಖವನ್ನು ಕಣ್ಣುಬಿಟ್ಟು ನೋಡಿದಳು. ಅವನು ಕೆಳಗಿನ ತುಟಿಯನ್ನು ಕಡಿಯುತ್ತಿರುವುದನ್ನೂ, ಕಣ್ಣುಗುಡ್ಡೆಗಳನ್ನು ತಿರುಗಿಸುತ್ತಿರುವುದನ್ನೂ ನೋಡಿದಳು. ಅವನಾ ಭಯಂಕರಾಕೃತಿಯಲ್ಲಿ ಕಾಣಿಸಿಕೊಂಡಾಗಲೆಲ್ಲ ಯಮಸ್ವರೂಪನಾಗಿರುತ್ತಿದ್ದನೆಂಬುದು ಅವಳಿಗೆ ಚೆನ್ನಾಗಿ ತಿಳಿದಿದ್ದಿತು. ಆಗವನು ಮೃತ್ಯುವಿಗೆ ಸಿದ್ಧಳಾಗುವಂತೆ ಆಜ್ಞೆ ವಿಧಿಸಿದನು; ಅವಳ ಆತ್ಮ ವನ್ನು ತಾನು ಕೊಲ್ಲದಿರುವುದರಿಂದ, ಕೊನೆಯ ಪ್ರಾರ್ಥನೆ ಸಲ್ಲಿಸುವಂತೆ ಅವಳಿಗೆ ಹೇಳಿದನು. ಆಗ, ಅವನ ಕಾಲಡಿಯಲ್ಲಿ ಬಿದ್ದು, ಸಂಪೂರ್ಣವಾಗಿ ಅವನ ಹಿಡಿತದಲ್ಲಿ ಸಿಕ್ಕಿಬಿದ್ದ ಆ ನಿಷ್ಕಳಂಕಿನಿ ಅವನಲ್ಲಿ ಕರುಣೆಯನ್ನು ಯಾಚಿಸಿದಳು; ತನ್ನ ಅಪರಾಧವೇನೆಂಬುದನ್ನು ತಿಳಿಸುವಂತೆ ಬೇಡಿದಳು. ಒಥೆಲ್ಲೋ ಆಗ ಕ್ಯಾಸಿಯೋನ ಹೆಸರು ಹೇಳಿ, ಕರವಸ್ತ್ರದ ಬಗ್ಗೆಯೂ ಪ್ರಸ್ತಾಪಿಸಿದನು. ನಿರ್ದೋಷಿಯಾದ ಅವಳು ತನ್ನ ಪರಿಶುದ್ಧತೆಯನ್ನು ತೋರ್ಪಡಿಸಲು ಮುಂದುವರಿಯುವುದರಲ್ಲಿಯೇ, ಅವನಿಗೆ ಮುಂದೆ ಕೇಳುವ ಇಚ್ಛೆಯೇ ಇಲ್ಲದಾಯಿತು. ಅವನು ಅಲ್ಲಿದ್ದ ವಸ್ತ್ರಗಳಿಂದ ಅವಳನ್ನು ಮುಚ್ಚಿ, ಕೊರಳನ್ನು ಹಿಸುಕಿ ಸಾಯಿಸಿಬಿಟ್ಟನು!

ಈ ಹೊತ್ತಿಗೆ ಸರಿಯಾಗಿ ಗಾಯಗೊಂಡು ರಕ್ತಸುರಿಸುತ್ತಿದ್ದ ಕ್ಯಾಸಿಯೋ ಮನೆಯೊಳಗೆ ಬಂದನು. ಇಯಾಗೋನಿಂದ ನಿಯೋಜಿತ ನಾಗಿದ್ದ ಕೊಲೆಗಾರನೊಬ್ಬನು ಕ್ಯಾಸಿಯೋನನ್ನು ಕೊಲ್ಲಲೆಳಸಿ, ಸಫಲನಾಗದೆ ಅವನನ್ನು ಕೇವಲ ಗಾಯಗೊಳಿಸಿದ್ದನು. ಆದರೆ ವಿಷಯ ಪ್ರಚಾರವಾಗುವು ದನ್ನು ತಪ್ಪಿಸಲೋಸ್ಕರ ಸ್ವತಃ ಇಯಾಗೋ ಆ ಕೊಲೆಗಡುಕನನ್ನು ಕೊಂದು ಹಾಕಿದ್ದನು. ಕೊಲೆಗಡುಕನ ಜೇಬುಗಳಲ್ಲಿ ದೊರೆತ ಕೆಲವು ಪತ್ರಗಳಿಂದ ಇಯಾಗೋನ ದ್ರೋಹ ಹೊರಬಿದ್ದು, ಕ್ಯಾಸಿಯೋನ ನಿರ್ದೋಷಿತ್ವ ಸಂಶಯವಿಲ್ಲದೆ ದೃಢಪಟ್ಟಿತು. ಈಗ ಕ್ಯಾಸಿಯೋ ಒಥೆಲ್ಲೋನ ಬಳಿ ಕ್ಷಮೆ ಯಾಚಿಸುವುದಕ್ಕೂ, ಅಲ್ಲದೆ ತನ್ನ ಕೊಲೆಗೆ ಇಯಾಗೋನನ್ನು ನಿಯೋಜಿಸು ವಂತಹ ಯಾವ ಅಪರಾಧವನ್ನು ತಾನು ಮಾಡಿರುವೆನೆಂದು ಕೇಳುವುದಕ್ಕೂ ಬಂದಿದ್ದನು.

ಈ ಶೋಧನೆಯಿಂದ ಒಥೆಲ್ಲೋ ಸಿಡಿದುಬಡಿದಂತೆ ತತ್ತರಿಸಿದನು. ಆಗ ಅವನಿಗೆ ತಾನೊಬ್ಬ ಕೇವಲ ಕೊಲೆಗಡುಕನೆಂಬುದು ನಿರ್ಧರವಾಯಿತು; ಬಡ ಪಾಯಿಯಾದ ನಿರ್ದೋಷಿಯಾದ ತನ್ನ ಪತ್ನಿ ಪತಿಪ್ರಾಣಳಾದ ಸಾಧ್ವಿಯಾಗಿದ್ದ ಳೆನ್ನುವುದು ವಿದಿತವಾಯಿತು. ಈ ಗ್ರಹಿಕೆಯಿಂದುಂಟಾದ ಮಹಾಕ್ಲೇಶ ಅವನಿಗೆ ಜೀವನ ದುಸ್ಸಹವಾಗುವಂತೆ ಮಾಡಿತು. ಆ ಕೂಡಲೇ ಅವನು ಕತ್ತಿಯಿಂದ ಇರಿದುಕೊಂಡು, ಅನ್ಯಾಯ–ಅಪಚಾರಗಳಿಗೊಳಗಾಗಿದ್ದ ತನ್ನ ಪ್ರೇಯಸಿಯ ಶವದ ಮೇಲೆ ಬಿದ್ದು ಅಸುವನ್ನು ನೀಗಿದನು.

ಈ ದುರ್ಘಟನೆಗಳು ಸುತ್ತಲಿದ್ದವರಲ್ಲೆಲ್ಲ ಭಯಭೀತಿಯ, ಆಶ್ಚರ್ಯದ ಧಾಳಿಯನ್ನೆಬ್ಬಿಸಿದವು. ಏಕೆಂದರೆ ಒಥೆಲ್ಲೋ ನಾಕಷ್ಟು ಕೀರ್ತಿವಂತನಾಗಿದ್ದ ವನು. ನೀಚನೊಬ್ಬನ ಕಪಟ ತಂತ್ರಗಳಿಗೊಳಗಾಗುವ ಮೊದಲು, ಆ ಬಗೆಯ ತಂತ್ರಗಳನ್ನು ಶಂಕಿಸಲೂ ಅರಿಯದ ಉದಾತ್ತಚರಿತನಾಗಿದ್ದನು. ಅತಿ ಮಮತೆಯ, ನಿಷ್ಠನಾದ ಪತಿಯಾಗಿದ್ದನು. ಅವನ ಪ್ರೇಮ ವಿವೇಚನಾ ರಹಿತವಾಗಿದ್ದುದೇನೋ ನಿಜ. ಆದರದು ಅಷ್ಟೇ ಮಹತ್ತಾದುದಾಗಿತ್ತು. ಎಂತಹ ಸಂದರ್ಭದಲ್ಲೂ ಅಳುವ ಅಭ್ಯಾಸವಿರದಿದ್ದ, ಅವನ ಪುರುಷ ನೇತ್ರ ಗಳು, ಅವನಿಗೆ ತನ್ನ ಅಪರಾಧದ ಗ್ರಹಿಕೆಯುಂಟಾದಾಗ, ಧಾರೆಧಾರೆಯಾಗಿ ಕಂಬನಿ ಹರಿಸಿದ್ದವು. ಅವನು ಸತ್ತ ಮೇಲೂ, ಆತನ ಹಿಂದಿನ ಸದ್ಗುಣಗಳು, ಸಾಹಸಕಾರ್ಯಗಳು ಅಮರವಾಗಿ ಉಳಿದವು. ಅವನ ಮರಣಾನಂತರ ಪದವಿಗೆ ಬಂದ ಅಧಿಕಾರಿಗೆ ಉಳಿದಿದ್ದ ಕಾರ್ಯಗಳೆರಡೇ: ಇಯಾಗೋಗೆ ಕಾನೂನಿನ ಅತ್ಯುಗ್ರಶಿಕ್ಷೆ ವಿಧಿಸುವುದು, ಅಲ್ಲದೆ ವೆನಿಸ್ ರಾಜ್ಯಕ್ಕೆ ಅದರ ಪ್ರಸಿದ್ಧ ಸೇನಾನಿಯ ದುರ್ಮರಣ ವಾರ್ತೆಯನ್ನು ಕಳುಹಿಸುವುದು.

# ದಿ ಮರ್ಚೆಂಟ್ ಆಫ್ ವೆನಿಸ್

ವೆನಿಸ್ ನಗರದಲ್ಲಿ ಜ್ಯೂಮತಕ್ಕೆ ಸೇರಿದ ಷೈಲಾಕ್ ನಿವಾಸಿಯಾಗಿದ್ದನು. ಈ ಸಾಲಿಗ ಅಧಿಕ ಬಡ್ಡಿಯಮೇಲೆ ಕ್ರೈಸ್ತ ವರ್ತಕರಿಗೆ ಹಣವನ್ನು ಸಾಲವಾಗಿ ಕೊಟ್ಟು ಕೊಟ್ಟು ಆ ಮೂಲಕ ದೊಡ್ಡ ಆಸ್ತಿಯನ್ನೇ ಶೇಖರಿಸಿದ್ದನು. ಷೈಲಾಕ್‌ನದು ಅತಿ ಕಠಿಣ ಹೃದಯ. ತಾನು ಸಾಲಕೊಡುತ್ತಿದ್ದ ಹಣವನ್ನು ಹಿಂದಕ್ಕೆ ಕಿತ್ತುಕೊಳ್ಳುವಾಗ ಅವನು ತೋರುತ್ತಿದ್ದ ಕ್ರೌರ್ಯಕ್ಕಾಗಿ ಬೇಸತ್ತು ಅಲ್ಲಿನ ಸತ್ಪುರುಷರೆಲ್ಲಾ ಅವನ ದ್ವೇಷಿಗಳಾಗಿದ್ದರು. ಅದರಲ್ಲೂ ವಿಶೇಷವಾಗಿ ವೆನಿಸಿನ ತರುಣ–ವರ್ತಕ ಆಂಟೋನಿಯೋ ಷೈಲಾಕನನ್ನು ಬಹುವಾಗಿ ಅನಾದರಿಸುತ್ತಿದ್ದನು. ಷೈಲಾಕ್ ಸಹ ಅಷ್ಟೇ ಮಟ್ಟಿಗೆ ಆಂಟೋನಿಯೋನಲ್ಲಿ ದ್ವೇಷ ತಳೆದಿದ್ದನು. ಇದಕ್ಕೆ ಆಂಟೋನಿಯೋ ಕಷ್ಟದಲ್ಲಿರುವವರಿಗೆ ಬಡ್ಡಿಯಿಲ್ಲದೆಯೇ ಸಾಲ ಕೊಡುತ್ತಿದ್ದುದೂ ಬಹು ಮಟ್ಟಿಗೆ ಕಾರಣವಾಗಿತ್ತು. ಹೀಗೆ ಈ ದುರಾಶೆಯ ಜ್ಯೂ ಮತ್ತು ಉದಾರಚರಿತ ಆಂಟೋನಿಯೋ ಇವರ ನಡುವೆ ಬದ್ಧದ್ವೇಷ ಬೆಳೆದು ಬಂದಿತ್ತು. ವರ್ತಕರ ಮಾರುಕಟ್ಟೆಯಲ್ಲಿ ಷೈಲಾಕ್‌ನನ್ನು ಸಂಧಿಸಿದಾಗಲೆಲ್ಲಾ, ಆಂಟೋನಿಯೋ ಅವನ ಬಡ್ಡಿಯ ಆಸೆ, ಕ್ರೂರ ವ್ಯವಹಾರಗಳನ್ನು ತೆಗಳಿ ನಿಂದಿಸುತ್ತಿದ್ದನು. ಇವೆಲ್ಲವನ್ನು ಷೈಲಾಕ್ ತೋರಿಕೆಯ ತಾಳ್ಮೆಯಿಂದ ಸೈರಿಸಿಕೊಳ್ಳುತ್ತಿದ್ದುದೇನೋ ನಿಜ. ಆದರೆ ಒಳಗೊಳಗೇ ಅವನ ಮನಸ್ಸು ದ್ವೇಷದ ಅಗ್ನಿಕುಂಡವಾಗಿತ್ತು. ಕ್ರೋಧದ ಹೊಗೆ ಕಾರುತ್ತಾ ಹೊಂಚು ಕಾಯುತ್ತಿತ್ತು.

ಆಂಟೋನಿಯೋ ಸ್ವಭಾವತಃ ಬಹು ದಯಾಳು. ಬಹು ಗುಣಶಾಲಿ, ಶಿಷ್ಟಾಚರಣೆಗಳನ್ನು ಪಾಲಿಸುವುದರಲ್ಲಂತೂ ಅವನಿಗೆ ಬೇಸರವೆಂಬುದೇ ಇರಲಿಲ್ಲ. ಒಂದು ಮಾತಿನಲ್ಲಿ ಹೇಳುವುದಾದರೆ, ಇಟಲಿಯಲ್ಲಿ ಬಾಳಿ ಬದುಕಿದವರಲ್ಲೆಲ್ಲಾ ಪುರಾತನ ರೋಮನ್ ಪ್ರತಿಷ್ಠೆ ಪೂರ್ಣವಾಗಿ ರೂಪುಗೊಂಡು

ವಿಕಸಿತವಾಗಿದ್ದುದೆಂದರೆ ಆಂಟೋನಿಯೋ ಒಬ್ಬನಲ್ಲೇ ಎಂದರೂ ಅತಿಶಯೋಕ್ತಿಯಾಗಲಾರದು. ರೋಮ್‌ನಗರದ ಸಹಪೌರರಿಗೆಲ್ಲಾ ಅವನೆಂದರೆ ಅಚ್ಚುಮೆಚ್ಚು. ಆದರೆ ಎಲ್ಲರಿಗಿಂತಲೂ ಅವನ ಹೃದಯಕ್ಕೆ ಸಮೀಪವರ್ತಿಯೂ ಪ್ರೇಮಪಾತ್ರನೂ ಆಗಿದ್ದವನು ಗಣ್ಯ ವೆನಿಸ್ ನಿವಾಸಿ ಬಸಾನಿಯೋ. ಈ ಮಿತ್ರ ಉಚ್ಚ ಮನೆತನಕ್ಕೆ ಸೇರಿ, ಅಷ್ಟೈಶ್ವರ್ಯದ ಒಡೆಯನಾಗಿದ್ದ ತರುಣ. ಆದ್ದರಿಂದಲೇ, ಅಂತಹ ತರುಣರಿಗೆ ಸ್ವಾಭಾವಿಕವಾದ ದುಂದುಗಾರಿಕೆ ಇವನಲ್ಲೂ ಮನೆ ಮಾಡಿಕೊಂಡಿತ್ತು. ಅವನ ಅಲ್ಪ ಸಂಪತ್ತೆಲ್ಲಾ ಬಹುಮಟ್ಟಿಗೆ ಮುಗಿದೇ ಹೋಗಿತ್ತು. ಇಂತಹ ಸಂದರ್ಭದಲ್ಲೆಲ್ಲಾ ಅವನ ನೆರವಿಗೆ ಬರುತ್ತಿದ್ದವನೆಂದರೆ ಆಂಟೋನಿಯೋ. ಈ ಇಬ್ಬರು ಮಿತ್ರರಲ್ಲಿ ಒಂದೇ ಹೃದಯ ಮಿಡಿಯುತ್ತಿರುವಂತೆ, ಒಂದೇ ಹಣದ ಚೀಲವೂ ಓಡಾಡುತ್ತಿರುವಂತೆ ತೋರುತ್ತಿತ್ತು.

ಹೀಗಿರುವಾಗ ಒಮ್ಮೆ ಬಸಾನಿಯೋ ಆಂಟೋನಿಯೋ ಬಳಿ ಹಣಕ್ಕಾಗಿ ಬರಬೇಕಾಯಿತು. ಅವನು ಬಹುವಾಗಿ ಪ್ರೇಮಿಸುತ್ತಿದ್ದ ಅತಿ ಧನಿಕ ತರುಣಿಯೊಬ್ಬಳನ್ನು ಮದುವೆಯಾಗಿ ಆ ಮೂಲಕ ತನ್ನ ಸಂಪತ್ತನ್ನು ರೂಢಿಸಿಕೊಳ್ಳುವ ಇಚ್ಛೆ ತನಗಿರುವುದಾಗಿ ಅವನು ಆಂಟೋನಿಯೋಗೆ ತಿಳಿಸಿದನು. ಆ ತರುಣಿ ಕೆಲಕಾಲದ ಹಿಂದೆ ಮೃತನಾಗಿದ್ದ ಅವಳ ತಂದೆಯಿಂದ ಮಹದೈಶ್ವರ್ಯದ ಒಡತಿಯಾಗಿರುವಳೆಂದೂ ಹೇಳಿದನು. ಹಿಂದೆ ಆಕೆಯ ತಂದೆ ಜೀವಂತನಾಗಿದ್ದಾಗ ತಾನು ಅವರ ಗೃಹಕ್ಕೆ ಭೇಟಿಕೊಡುತ್ತಿದ್ದುದಾಗಿಯೂ, ಆಗ ಆ ತರುಣಿ ಕೆಲವೊಮ್ಮೆ ತನ್ನ ಕಣ್ಣುಗಳಿಂದಲೇ ಮಾತಿಲ್ಲದ ಪ್ರೇಮ ಬೀರಿ ತಾನವಳಿಗೆ ಆದರಪಾತ್ರನಾದ ವರನಾಗಬಹುದೆಂದು ಸೂಚಿಸಿದುದಾಗಿಯೂ ಬಸಾನಿಯೋ ತಿಳಿಸಿದನು. ಆದರೆ ಅಷ್ಟು ಧನಿಕಳಾದ ತರುಣಿಗೆ ತಕ್ಕ ಪ್ರೇಮಿಯಾಗಲನುಗುಣವಾಗಿ ತಾನು ಸಜ್ಜುಗೊಳ್ಳಲು ಸಾಕಷ್ಟು ಹಣವಿಲ್ಲದಿದ್ದುದರಿಂದ ಬಸಾನಿಯೋ ಎಂದಿನಂತೆ ಆಂಟೋನಿಯೋನ ಸಹಾಯ ಬೇಡಿಬಂದಿದ್ದನು. ಇಲ್ಲಿಯವರೆಗೂ ಆಂಟೋನಿಯೋ ತನಗೆಸಗಿದ್ದ ಉಪಕಾರಗಳೊಂದಿಗೆ, ಈಗಲೂ ಮೂರುಸಾವಿರ ವರಹಗಳನ್ನಿತ್ತು ನೆರವು ನೀಡಬೇಕೆಂದು ಕೋರಿದನು.

ಈ ಸಮಯದಲ್ಲಿ ಗೆಳೆಯನಿಗೆ ನೀಡಲು ಆಂಟೋನಿಯೋ ಬಳಿ ಹಣವಿರಲಿಲ್ಲ. ಆಗವನು ವ್ಯಾಪಾರದ ಸರಕುಗಳನ್ನು ಹೊತ್ತ ಕೆಲವು ಹಡಗುಗಳು ಹಿಂತಿರುಗಿ ಬರುವುದನ್ನೇ ನಿರೀಕ್ಷಿಸುತ್ತಿದ್ದನು. ಆದ್ದರಿಂದ, ಈ ಹಡಗು

ಗಳ ಆಧಾರದಮೇಲೆ ಧನಿಕ ಸಾಲಿಗನಾದ ಷೈಲಾಕ್ ಬಳಿ ಹಣವನ್ನು ಸಾಲ ಪಡೆಯಲು ಆಂಟೋನಿಯೋ ನಿಶ್ಚಯಿಸಿದನು.

ಆಂಟೋನಿಯೋ, ಬಸಾನಿಯೋ ಕೂಡಿ ಷೈಲಾಕ್‌ನೆಡೆಗೆ ತೆರಳಿದರು. ಆಂಟೋನಿಯೋ ಆ ಜ್ಯೂನ ಬಳಿ, ಅವನಿಚ್ಛಿಸುವಷ್ಟು ಬಡ್ಡಿಯಮೇಲೆ, ತನ್ನ ಹಡಗಿನ ಸರಕುಗಳ ಆಧಾರದಿಂದ ಮೂರುಸಾವಿರ ವರಹಗಳನ್ನು ಸಾಲವಾಗಿ ಕೊಡುವಂತೆ ಕೇಳಿದನು. ಷೈಲಾಕ್ ಮನದಲ್ಲಿಯೇ "ಇರಲಿ, ಒಮ್ಮೆ ಇವನು ನನ್ನ ಹಿಡಿತಕ್ಕೆ ಸಿಕ್ಕಿ ಬಿದ್ದನೆಂದರೆ ನನ್ನ ಚಿರ ಪೋಷಿತ ದ್ವೇಷವನ್ನು ಪೂರ್ತಿಯಾಗಿ ತಣಿಸಿಬಿಡುತ್ತೇನೆ. ಇವನು ನಮ್ಮ ಜ್ಯೂ ಜನಾಂಗದ ದ್ವೇಷಿ. ಬಡ್ಡಿಯಿಲ್ಲದೆಯೇ ಸಾಲ ಕೊಡುವವನು. ವರ್ತಕರೆಲ್ಲದುರಿನಲ್ಲಿ ನನ್ನನ್ನೂ, ತಾನು ಬಡ್ಡಿ ಎಂದು ಕರೆಯುವ ಈ ನನ್ನ ಕಷ್ಟಾರ್ಜಿತ ಸಂಪತ್ತನ್ನೂ ಹೀನೈಸಿ ಮಾತನಾಡುತ್ತಾನೆ. ನನ್ನ ಕುಲದಾಣೆ, ಇವನನ್ನು ನಾನೆಂದಿಗೂ ಕ್ಷಮಿಸ ಲಾರೆ" ಎಂದುಕೊಂಡನು. ಅವನು ಉತ್ತರಕೊಡದೆ ಈ ಬಗೆಯಲ್ಲಿ ಮನ ದಲ್ಲೇ ಗುಣಕಾರ ಹಾಕುತ್ತಿದ್ದುದನ್ನು ಆಂಟೋನಿಯೋ ನೋಡಿದನು. ಅವನಿಗಾದರೋ ಬೇಗ ಹಣವನ್ನು ಪಡೆಯುವ ಕಾತರ. ಆದ್ದರಿಂದ "ಏನು ಷೈಲಾಕ್, ನಿನಗೆ ನನ್ನ ಮಾತು ಕೇಳಿಸಿತಷ್ಟೆ? ಹಣವನ್ನು ಸಾಲ ಕೊಡು ವೆಯೋ ಹೇಗೆ?" ಎಂದನು. ಷೈಲಾಕ್ ಪ್ರಕಾಶವಾಗಿ "ಅಯ್ಯಾ ಹಿರಿಯ, ಹಿಂದೆಷ್ಟೋ ಬಾರಿ, ಎಷ್ಟೋ ಸಂದರ್ಭದಲ್ಲಿ ನೀನು ಮಾರುಕಟ್ಟೆಯಲ್ಲಿ ನನ್ನನ್ನೂ, ನನ್ನ ವ್ಯಾಪಾರ–ವ್ಯವಹಾರಗಳನ್ನೂ ಹಳಿದಿರುವೆ. ನಾನಾ ದರೋ, ನಮ್ಮ ಬುಡಕಟ್ಟಿನವರೆಲ್ಲರ ಸಂಕೇತಗುಣವಾದ ತಾಳ್ಮೆಯ ಬಲದಿಂದ ಅವೆಲ್ಲವನ್ನೂ ತಾಳಿಕೊಂಡಿದ್ದೇನೆ. ನೀನು ನನ್ನನ್ನು ನಾಸ್ತಿಕನೆಂದು, ಕೊರಳು ಕೊಯ್ಯುವ ನಾಯಿಯೆಂದು ಕರೆದಿರುವೆ; ಈ ನನ್ನ ಜ್ಯೂ ವೇಷ ಭೂಷಣಗಳಮೇಲೆ ಉಗುಳಿರುವೆ. ನಾನೊಂದು ನಾಯಿಕುನ್ನಿಯೋ ಎಂಬಂತೆ ಕಾಲಿನಿಂದ ದೂಡಿರುವೆ. ಈಗ, ಇಷ್ಟಾದಮೇಲೆ, ನಿನಗೆ ನನ್ನ ಸಹಾಯ ಬೇಕಾಯಿತೆಂದು ತೋರುತ್ತಿದೆ. ಈಗ ನನ್ನೆಡೆಗೆ ಬಂದು ನೀನು "ಷೈಲಾಕ್, ನನಗೆ ಹಣವನ್ನು ಸಾಲಕೊಡು." ಎಂದು ಕೇಳುತ್ತಿರುವೆಯಲ್ಲ. ನಾಯಿ ಯೊಂದರ ಬಳಿ ಹಣವಿರುವುದೇನು? ನಾಯಿಕುನ್ನಿ ಮೂರುಸಾವಿರ ವರಹ ಗಳನ್ನು ಸಾಲವಾಗಿ ಕೊಡಬಲ್ಲದೇನು? ನಾನೀಗ ನಿನ್ನ ಮುಂದೆ ಶಿರಬಾಗಿ ಮಣಿದು, ಉದಾರಚರಿತನೇ, ಕಳೆದ ಬುಧವಾರ ನೀನು ನನ್ನಮೇಲೆ ಉಗುಳಿದೆ, ಇನ್ನೊಮ್ಮೆ ನನ್ನನ್ನು ನಾಯಿಯೆಂದು ಕರೆದೆ. ಈ ಸೌಜನ್ಯಕ್ಕಾಗಿ ನಾನು

ನಿನಗೆ ಹಣವನ್ನು ಸಾಲಕೊಡಬೇಕಾಗಿದೆ ಎಂದು ಹೇಳಲೇ?" ಎಂದನು
ಆಂಟೋನಿಯೋ "ಹಿಂದಿನಂತೆಯೇ ನಿನ್ನನ್ನು ಆ ಹೆಸರುಗಳಿಂದ ಸಂಬೋಧಿ
ಸಲು, ಕೊನೆಗೆ ಕಾಲಿನಿಂದ ಒದೆಯಲೂ ಸಹ ನನಗೀಗ ಮನಸ್ಸಾಗುತ್ತಿದೆ
ನೀನು ನನಗೆ ಹಣವನ್ನು ಸಾಲಕೊಡುವುದಾದಲ್ಲಿ ಮಿತ್ರನಿಗೆಂಬಂತೆ ಕೊಡ
ಬೇಡ. ಒಬ್ಬ ಶತ್ರುವಿಗೆ ಸಾಲಕೊಡುವ ರೀತಿಯಲ್ಲಿ ಕೊಡು. ಒಂದ
ವೇಳೆ ನಾನು ಹಿಂತಿರುಗಿಸಲು ತಪ್ಪಿದಲ್ಲಿ, ಇದರಿಂದ, ಆ ಹಣವನ್ನು ಮತ್ತಷ್ಟು
ಕ್ರೌರ್ಯದಿಂದ ನೀನು ಕಿತ್ತುಕೊಳ್ಳಲು ಅನುಕೂಲಿಸುವುದು" ಎಂದನು
ಷೈಲಾಕ್ "ನೋಡು ನೋಡು! ನೀನು ಹೇಗೆ ಕೂಗಾಡುತ್ತಿರುವೆ! ನಾನ
ನಿನ್ನಲ್ಲಿ ಗೆಳೆಯನಾಗಿರಲು, ನಿನ್ನನ್ನು ಪ್ರೀತಿಸಲು ಬಯಸುತ್ತಿದ್ದೇನೆ. ನೀನ
ನನಗೆ ಮಾಡಿರುವ ಅಪಮಾನಗಳನ್ನೆಲ್ಲಾ ಮನ್ನಿಸಲೂ ಸಿದ್ಧವಾಗಿದ್ದೇನೆ
ನಿನ್ನ ಕಷ್ಟಕಾಲದಲ್ಲಿ ನೆರವು ನೀಡುವ ಸಲುವಾಗಿ ಬಡ್ಡಿಯಿಲ್ಲದೆಯೇ ಸಾಲ
ಕೊಡುವವನಿದ್ದೇನೆ" ಎಂದನು. ಈ ತೋರಿಕೆಯ ಉದಾರತೆಯಿಂದ
ಆಂಟೋನಿಯೋಗೆ ಬಹು ಬೆರಗಾಗಿಹೋಯಿತು. ಷೈಲಾಕ್ ಇನ್ನೂ ಉದಾ
ರತೆಯ ಸೋಗಿನಲ್ಲೇ, ತಾನು ಮಾಡುತ್ತಿರುವುದೆಲ್ಲಾ ಆಂಟೋನಿಯನ ಸ್ನೇಹ
ಗಳಿಸುವುದಕ್ಕಾಗಿಯೇ ಎಂಬಂತೆ ನಟನೆಮಾಡುತ್ತಾ, ಪುನಃ ತಾನು ಬಡ್ಡಿ
ಇಲ್ಲದೆಯೇ ಆಂಟೋನಿಯೋಗೆ ಮೂರುಸಾವಿರ ವರಹಗಳನ್ನು ಸಾಲ ಕೊಡು
ವುದಾಗಿ ನುಡಿದನು. ಆದರೆ ಮಾತ್ರ ಆಂಟೋನಿಯೋ ಆ ಕೂಡಲೇ ವಕೀಲನ
ಬಳಿ ತೆರಳಿ ತನಗೆ ಒಂದು ವಿನೋದದ ಕರಾರುಪತ್ರವನ್ನು ಬರೆದುಕೊಡಬೇಕೆಂ
ದನು. ಆ ಕರಾರು ಪತ್ರದಲ್ಲಿ, ಅಂಟೋನಿಯೋ ತಾನು ನಿಷ್ಕರ್ಷಿತ ದಿನ
ದೊಳಗೆ ಹಣವನ್ನು ಹಿಂತಿರುಗಿಸದಿದ್ದಲ್ಲಿ, ತನ್ನ ದೇಹದಲ್ಲಿ ಷೈಲಾಕ್ ಇಚ್ಛಿಸು
ವೆಡೆಯಿಂದ ಒಂದು ತೂಕದಷ್ಟು ಮಾಂಸವನ್ನು ತೆಗೆದು ಒಪ್ಪಿಸುವುದಾಗಿ
ಬರೆದುಕೊಡಬೇಕೆಂದನು.

ಆಂಟೋನಿಯೋ "ಒಪ್ಪಿದೆ; ಈ ಕರಾರು ಪತ್ರಕ್ಕೆ ನಾನು ಸಹಿ
ಹಾಕಲು ಸಿದ್ಧನಿದ್ದೇನೆ. ಅಷ್ಟೇ ಅಲ್ಲ, ಇನ್ನು ಮುಂದೆ, ಜ್ಯೂಗಳಲ್ಲೂ
ಸಹ ದಯೆಯೆಂಬುದಿದೆ ಎಂದು ಎಲ್ಲೆಡೆಯಲ್ಲೂ ಸಾರುತ್ತೇನೆ" ಎಂದನು.

ಆದರೆ ಬಸಾನಿಯೋ ಇದನ್ನು ತೀವ್ರವಾಗಿ ವಿರೋಧಿಸಿದನು. ತನ
ಗಾಗಿ ಆಂಟೋನಿಯೋ ಅಂತಹ ಕರಾರು ಪತ್ರಕ್ಕೆ ಸಹಿ ಹಾಕುವುದನ್ನು
ಅವನು ಒಪ್ಪಲಿಲ್ಲ. ಆದರೆ ಅಂಟೋನಿಯೋಗೆ ನಿಷ್ಕರ್ಷಿತ ದಿನಕ್ಕಿಂತ
ಮುಂಚೆಯೇ ಆ ಹಣಕ್ಕಿಂತ ಎಷ್ಟೋ ಪಾಲು ಬೆಲೆಬಾಳುವ ಸರಕುಗಳ

ನ್ನೊಳಗೊಂಡ ತನ್ನ ಹಡಗುಗಳು ಬರುವುದೆಂಬ ದೃಢ ನಂಬಿಕೆಯಿದ್ದಿತು. ಆದ್ದರಿಂದ ಅವನು ಬಸಾನಿಯೋ ಮಾತನ್ನು ಕೇಳದೆ ಕರಾರುಪತ್ರಕ್ಕೆ ಸಹಿ ಹಾಕುವುದಾಗಿಯೇ ನಿಶ್ಚಯಿಸಿದನು.

ಷೈಲಾಕ್ ಇವರಿಬ್ಬರ ಸಂವಾದವನ್ನು ಕೇಳಿ "ಅಯ್ಯೋ ದೇವರೇ! ಈ ಕ್ರೈಸ್ತರು ಅದೆಷ್ಟು ಸಂಶಯ ಸ್ವಭಾವದವರು! ಅವರ ಕಠಿಣ ವ್ಯವಹಾರಗಳೇ ಇತರರನ್ನೂ ಸಹ ಅವರು ಸಂಶಯ ದೃಷ್ಟಿಯಿಂದ ನೋಡುವಂತೆ ಪ್ರೇರಿಸುವುದೋ ಏನೋ! ಅಯ್ಯಾ ಬಸಾನಿಯೋ, ನೀವೇ ಹೇಳಿ, ಹಣ ಹಿಂತಿರುಗಿಸಲು ಅವನು ತಪ್ಪಿದಲ್ಲಿ, ಅವನು ಕೊಡುವ ಈ ದಂಡದಿಂದ ನನಗೇನು ಲಾಭವಿದೆ? ಮನುಷ್ಯನಿಂದ ತೆಗೆದ ಒಂದು ತೂಕದಷ್ಟು ಮಾಂಸಕ್ಕೆ ಪ್ರಾಣಿ ಮಾಂಸದಷ್ಟು ಬೆಲೆಯಾದರೂ ಇದೆಯೆ? ಅದರಷ್ಟು ಲಾಭವಾದರೂ ಸಿಗಬಹುದೆ? ಕೇವಲ ಅವನ ಆದರ ಗಳಿಸುವ ಸಲುವಾಗಿ ನಾನು ಈ ಸ್ನೇಹ ಸೂಚನೆಯನ್ನಿತ್ತೆನೇ ಹೊರತು ಬೇರೆ ಅಲ್ಲ. ಅವನು ಒಪ್ಪುವುದಾದರೆ ಸರಿ, ಇಲ್ಲದಿದ್ದರೆ ನಾನು ಹೊರಡುತ್ತೇನೆ, ನಮಸ್ಕಾರ ನಿಮಗೆ" ಎಂದನು.

ಸದುದ್ದೇಶ ಪ್ರೇರಿತವಾದುದೆಂದು ತೋರುವಂತೆಯೇ ನುಡಿದ ಷೈಲಾಕನ ಈ ಮಾತುಗಳಿಂದ ಬಸಾನಿಯೋನೇನೂ ತೃಪ್ತನಾಗಲಿಲ್ಲ. ತನಗಾಗಿ ತನ್ನ ಮಿತ್ರನು ಇಂತಹ ಘೋರ ದಂಡದ ಅಪಾಯಕ್ಕೊಳಗಾಗುವುದನ್ನು ಬಸಾನಿಯೋ ಎಂದಿಗೂ ಒಪ್ಪುವಂತಿರಲಿಲ್ಲ. ಆದರೆ ಆಂಟೋನಿಯೋ ಅವನ ಮಾತನ್ನು ಕಿವಿಗೇ ಹಾಕಿಕೊಳ್ಳದೆ ಕರಾರುಪತ್ರಕ್ಕೆ ಸಹಿ ಹಾಕಿಯೇ ಬಿಟ್ಟನು. ಷೈಲಾಕ್ ನುಡಿದಿದ್ದಂತೆ ಇವೆಲ್ಲಾ ಕೇವಲ ವಿನೋದವೆಂದೇ ಅವನ ಭಾವನೆಯಾಗಿತ್ತು.

ಬಸಾನಿಯೋ ವಿವಾಹವಾಗಲು ಬಯಸಿದ್ದ ಧನಿಕ ತರುಣಿ ವೆನಿಸಿನ ಸಮೀಪದಲ್ಲೇ ಇದ್ದ ಬೆಲ್‌ಮಾಂಟ್ ನಗರದಲ್ಲಿದ್ದಳು. ಅವಳ ಹೆಸರು ಪೋರ್ಷಿಯಾ. ರೂಪ ಗುಣಗಳಲ್ಲಿ ಅವಳು ನಾವು ಓದಿ ತಿಳಿದಿರುವ ಕೇಟೋನ ಮಗಳೂ, ಬ್ರೂಟಸನ ಹೆಂಡತಿಯೂ ಆದ ಧೀರೆ ಪೋರ್ಷಿಯಾಗೆ ಯಾವ ಬಗೆಯಲ್ಲೂ ಕೆಳಗಿನವಳಾಗಿರಲಿಲ್ಲ.

ಮೇಲೆ ಹೇಳಿದಂತೆ ಆಂಟೋನಿಯೋ ತನ್ನ ಪ್ರಾಣವನ್ನೇ ಪಣವಾಗಿಟ್ಟು ಬಸಾನಿಯೋಗೆ ಉದಾರತೆಯಿಂದ ಹಣ ಒದಗಿಸಿದನು. ನಂತರ ಅದರ ಸಹಾಯದಿಂದ ಬಸಾನಿಯೋ ಉತ್ತಮ ಪರಿವಾರದೊಡಗೂಡಿ, ಗ್ರೇಷಿಯಾನೋ ಎಂಬೊಬ್ಬ ತರುಣನೊಂದಿಗೆ ಬೆಲ್‌ಮಾಂಟ್‌ಗೆ ಪ್ರಯಾಣ

ಬೆಳಸಿದನು. ಈ ಗ್ರೇಷಿಯಾನೋ ಬಹು ವಿನೋದ ಶೀಲನಾದ ತರುಣ ನಾಗಿದ್ದನು.

ಬಸಾನಿಯೋ ಪ್ರೇಮಪರೀಕ್ಷೆಯಲ್ಲಿ ಜಯಶಾಲಿಯಾದ ಮೇಲೆ, ಶೀಘ್ರ ದಲ್ಲಿಯೇ ಪೋರ್ಷಿಯಾ ಅವನ ಪತ್ನಿಯಾಗಲು ಒಪ್ಪಿದಳು.

ಪೋರ್ಷಿಯಾ ಬಳಿ ಬಸಾನಿಯೋ ತನಗೆ ಯಾವ ಆಸ್ತಿಯೂ ಇಲ್ಲ ವೆಂದೂ, ಉತ್ತಮ ಕುಲ, ಶ್ರೇಷ್ಠ ಮನೆತನಗಳನ್ನುಳಿದು ಹೆಮ್ಮೆ ಪಡಬಹು ದಾದುದೇನೂ ತನ್ನಲ್ಲಿಲ್ಲವೆಂದೂ ಹೇಳಿಕೊಂಡನು. ಪೋರ್ಷಿಯಾ ಅವನ ಸದ್ಗುಣಗಳಿಗಾಗಿಯೇ ಆತನನ್ನು ಪ್ರೇಮಿಸಿದ್ದವಳು. ಪತಿಯ ಧನಸಂಪತ್ತನ್ನು ಲೆಕ್ಕಿಸದಷ್ಟು ಧನಿಕಳಾಗಿದ್ದಳು. ಅವಳದೊಂದು ಬಗೆಯ ಮನೋಹರ ನಮ್ರತೆಯೊಂದಿಗೆ, ತಾನವನಿಗೆ ಅರ್ಹಳೆನಿಸುವ ಸಲುವಾಗಿ ಇನ್ನೂ ನೂರ ರಷ್ಟು ಸುಂದರಳಾಗಿ, ಸಾವಿರದಷ್ಟು ಹೆಚ್ಚು ಧನಿಕಳಾಗಿರಲು ಬಯಸುವುದಾಗಿ ನುಡಿದಳು. ಪಾಂಡಿತ್ಯಪೂರ್ಣೆಯಾಗಿದ್ದರೂ ಸಹ ಪೋರ್ಷಿಯಾ ಆಗ ತನ್ನನ್ನೇ ತಾನು ಕಡೆಗಣಿಸಿಕೊಳ್ಳುತ್ತಾ ತಾನೊಬ್ಬ ಅಶಿಕ್ಷಿತ, ಅವಿದ್ಯಾವತಿ ಯಾದ ತರುಣಿಯೆಂದೂ, ಆದರೂ ಸಹ ಮುಂದೆ ಕಲಿಯಲಾರದಷ್ಟು ವಯೋವೃದ್ಧಳಲ್ಲವೆಂದೂ ಹೇಳಿಕೊಂಡಳು. ತನ್ನ ವಿನೀತ ಆತ್ಮವನ್ನು ಅವನ ಅಧಿಕಾರಕ್ಕೇ ಒಪ್ಪಿಸುವುದಾಗಿ ನುಡಿದಳು. 'ನಾನೂ ಮತ್ತು ನನಗೆ ಸೇರಿದ ಎಲ್ಲವೂ ಈಗ ನಿನ್ನವರಾಗಿದ್ದೇವೆ. ಬಸಾನಿಯೋ, ಕೇವಲ ನಿನ್ನೆ ನಾನು ಈ ಭವ್ಯ ಭವನದ ಒಡತಿಯಾಗಿದ್ದೆ. ನನಗೂ ನನ್ನ ಸೇವಕರೆಲ್ಲರಿಗೂ ಅರಸಿಯಾಗಿದ್ದೆ. ಅದರಿಂದು ಈ ಗೃಹ, ಈ ಸೇವಕರು ಮತ್ತು ನಾನು ಎಲ್ಲರೂ ನಿನ್ನವರು. ಈ ಉಂಗುರದೊಂದಿಗೆ ಇವೆಲ್ಲವನ್ನೂ ನಿನಗೆ ಅರ್ಪಿಸು ತ್ತಿದ್ದೇನೆ" ಎಂದು ಹೇಳಿ ಅವಳು ಬಸಾನಿಯೋಗೆ ಒಂದು ಉಂಗುರವ ನ್ನಿತ್ತಳು.

ಧನಿಕಳೂ ಉದಾತ್ತಚರಿತಳೂ ಆದ ಪೋರ್ಷಿಯಾ ತನ್ನಂತಹ ಅಲ್ಪ ಸಂಪತ್ತಿನ ಪುರುಷನನ್ನು ಇಷ್ಟು ಮನೋಹರವಾದ ವೈಖರಿಯಲ್ಲಿ ಅಂಗೀಕರಿಸಿ ಕೊಂಡಾಗ, ಬಸಾನಿಯೋ ಕೃತಜ್ಞತೆಯಿಂದ, ಕೌತುಕದಿಂದ ಸ್ತಂಭೀ ಭೂತನಾದನು. ತನ್ನನ್ನು ಈ ರೀತಿಯಲ್ಲಿ ಗೌರವಿಸಿದ ಆ ಪ್ರಿಯ ರಮಣಿಗೆ ತನ್ನ ಆನಂದ-ಮೆಚ್ಚುಗೆಗಳನ್ನು, ಪ್ರೇಮ ಕೃತಜ್ಞತೆಗಳನ್ನು ಸೂಚಿಸಲು ಅವನಿಗೆ ಮಾತೇ ಹೊರಡದಾಯಿತು. ಕೇವಲ ಕೆಲವು ಅಪೂರ್ಣ, ಅಸ್ಫುಟ ಪದಗಳಿಂದ ಮಾತ್ರ ಅವನು ತನ್ನ ಭಾವನೆಗಳನ್ನು ವ್ಯಕ್ತಪಡಿಸಿದನು. ಉಂಗು

ರವನ್ನು ಸ್ವೀಕರಿಸಿ, ಅದರಿಂದ ಎಂದಿಗೂ ಅಗಲುವುದಿಲ್ಲವೆಂದು ಅವನು ಪ್ರತಿಜ್ಞೆ ಮಾಡಿದನು.

ಹೀಗೆ ಪೋರ್ಷಿಯಾ ಬಸಾನಿಯೋನ ವಿಧೇಯ ಪತ್ನಿಯಾಗುವೆನೆಂದು ವಚನವಿತ್ತಾಗ, ಗ್ರೇಷಿಯಾನೋ ಮತ್ತು ಪೋರ್ಷಿಯಾಳ ಚೇಟಿ ನೆರಿಸ್ಸಾ ತಮ್ಮೊಡೆಯ ಒಡತಿಯರ ಬಳಿಯಲ್ಲೇ ನಿಂತಿದ್ದರು. ಗ್ರೇಷಿಯಾನೋ ಬಸಾನಿಯೋಗೂ ಅವನ ಉದಾರಚರಿತಳಾದ ಪ್ರೇಯಸಿಗೂ ಶುಭಾಶಯ ಗಳನ್ನು ಕೋರಿದನು. ನಂತರ ತಾನೂ ಅದೇ ಹೊತ್ತಿನಲ್ಲಿ ವಿವಾಹವಾಗಲಿರು ವುದಾಗಿ ಹೇಳಿ ಅದಕ್ಕೆ ಅನುಜ್ಞೆ ಕೋರಿದನು.

ಬಸಾನಿಯೋ "ಅದಕ್ಕೇನು ಗ್ರೇಷಿಯಾನೋ? ನಿನಗೊಬ್ಬ ಪತ್ನಿ ಸಿಕ್ಕು ವುದಾದಲ್ಲಿ, ನನ್ನ ಪೂರ್ಣ ಅನುಮತಿಯಿದೆ" ಎಂದನು.

ಗ್ರೇಷಿಯಾನೋ ತಾನು ಪೋರ್ಷಿಯಾಳ ಸುಂದರ ಚೇಟಿ ನೆರಿಸ್ಸಾಳಲ್ಲಿ ಅನುರಕ್ತನಾಗಿರುವುದಾಗಿಯೂ, ಅವಳೂ ಸಹ ತನ್ನ ಒಡತಿ ಬಸಾನಿಯೋನ ಪತ್ನಿಯಾದಲ್ಲಿ ತಾನು ಗ್ರೇಷಿಯಾನೋನನ್ನು ವಿವಾಹವಾಗುವುದಾಗಿ ವಚನ ವಿತ್ತಿರುವಳೆಂದೂ ತಿಳಿಸಿದನು. ಪೋರ್ಷಿಯಾ ನೆರಿಸ್ಸಾಳನ್ನು ಇದು ನಿಜವೇ ಎಂದು ಪ್ರಶ್ನಿಸಿದಳು. ನೆರಿಸ್ಸಾ "ತಾಯಿ, ನೀನೊಪ್ಪುವುದಾದರೆ, ಇದು ನಿಜ" ಎಂದಳು. ಪೋರ್ಷಿಯಾ ಸಂತೋಷದಿಂದ ಒಪ್ಪಿಗೆಯಿತ್ತಳು, ನಂತರ ಬಸಾನಿಯೋ ಸುಹಾಸದಿಂದ "ಹಾಗಿದ್ದರೆ ನಮ್ಮ ವಿವಾಹ ಸಮಾರಂಭ ನಿನ್ನ ಲಗ್ನದಿಂದ ಮತ್ತಷ್ಟು ಮಾನ್ಯವೆನಿಸುವುದು, ಗ್ರೇಷಿಯಾನೋ" ಎಂದನು.

ಈ ಪ್ರೇಮಿಗಳ ಆನಂದಕ್ಕೆ ಇದ್ದಕಿದ್ದಂತೆ ತಡೆಯೊದಗಿ ಅವರ ಮೇಲೆ ವ್ಯಥೆಯ ಮೋಡ ಕವಿದುಕೊಂಡಿತು. ಇದಕ್ಕೆ ಅದೇ ತಾನೇ ಅಂಟೋನಿಯೋ ನೆಡೆಯಿಂದ ಭೀಕರ ಸುದ್ದಿಯನ್ನೊಳಗೊಂಡ ಪತ್ರವನ್ನು ತಂದ ಒಬ್ಬ ದೂತನ ಪ್ರವೇಶವೇ ಕಾರಣವಾಯಿತು. ಬಸಾನಿಯೋ ಆಂಟೋನಿಯೋನ ಪತ್ರವನ್ನು ಓದುತ್ತಿದ್ದಂತೆ ಅವನ ಮುಖ ಬಿಳುಪೇರಿಹೋಯಿತು. ಪೋರ್ಷಿಯ ಳಂತೂ ಆ ಪತ್ರದಲ್ಲಿ ಯಾವುದೋ ಪ್ರಿಯಮಿತ್ರನ ಮರಣವಾರ್ತೆಯನ್ನೇ ತಿಳಿಸಿರಬೇಕೆಂದು ಶಂಕಿಸತೊಡಗಿದಳು. ಅವನನ್ನು ಅಷ್ಟು ವ್ಯಗ್ರಗೊಳಿಸಿ ರುವ ಸುದ್ದಿ ಏನೆಂದು ಆಕೆ ವಿಚಾರಿಸಿದಳು. ಆಗ ಬಸಾನಿಯೊ "ಓ ಪ್ರಿಯೆ ಪೋರ್ಷಿಯಾ! ಕಾಗದದ ಮೇಲೆ ಮೂಡಿಸಬಹುದಾದ ಅತ್ಯಂತ ನಿಷ್ಠುರದ ಅತಿ ಅಪ್ರಿಯವಾದ ಪದಗಳಿಲ್ಲಿವೆ. ಪೋರ್ಷಿಯಾ, ನಾನು ಪ್ರಥಮಬಾರಿಗೆ ನಿನ್ನಲ್ಲಿ ಅನುರಾಗವನ್ನು ವ್ಯಕ್ತಪಡಿಸಿದಾಗ, ಯಾವ ನಿರ್ಬಂಧವೂ ಇಲ್ಲದೆ

ನನ್ನ ಸಂಪತ್ತೆಲ್ಲಾ ನನ್ನ ಧಮನಿಗಳಲ್ಲೇ ಹರಿಯುತ್ತಿರುವುದೆಂದು ಹೇಳಿದೆ ನಲ್ಲವೆ ? ನಾನು ಹೇಳಿದ್ದು ಸುಳ್ಳು. ನಾನದಕ್ಕಿಂತ ಕೀಳುಸ್ಥಿತಿಯಲ್ಲಿರುವೆ ನೆಂದು ನಿನಗೆ ತಿಳಿಸಬೇಕಾಗಿದ್ದಿತು. ಋಣಸ್ಥನಾಗಿರುವ ನಾನು ನನ್ನಲ್ಲಿ ಏನೂ ಇಲ್ಲದಿರುವುದಕ್ಕಿಂತ ಹೀನ ದೆಶೆಯಲ್ಲಿದ್ದೇನೆ" ಎಂದನು. ನಂತರ ಬಸಾನಿಯೋ ಪೋರ್ಷಿಯಾಗೆ, ಈ ಹಿಂದೆಯೇ ನಾವು ತಿಳಿಸಿರುವಂತೆ, ಆಂಟೋನಿಯೋ ಜ್ಯೂ ಷೈಲಾಕ್‌ನಿಂದ ಹಣ ಸಾಲ ಪಡೆದು ತನಗೆ ಕೊಟ್ಟಿ ರುವುದನ್ನು ತಿಳಿಸಿದನು. ನಿಷ್ಕರ್ಷಿತ ದಿನದಲ್ಲಿ ಹಣ ಹಿಂತಿರುಗಿಸದಿದ್ದಲ್ಲಿ ಆಂಟೋನಿಯೋ ಒಂದು ತೂಕದಷ್ಟು ಮಾಂಸವನ್ನು ದಂಡವಾಗಿ ಒಪ್ಪಿಸ ಬೇಕಾಗಿ ಕರಾರು ಪತ್ರವಾಗಿದ್ದುದನ್ನೂ ತಿಳಿಸಿದನು. ನಂತರ ಆಂಟೋನಿ ಯೋನ ಪತ್ರವನ್ನು ತೆಗೆದು ಈ ಕೆಳಗೆ ಕಂಡಂತೆ ಓದಿದನು : "ಪ್ರಿಯ ಬಸಾನಿಯೋ, ನನ್ನ ಹಡುಗಗಳೆಲ್ಲಾ ನಾಶವಾಗಿ ಜ್ಯೂ ಷೈಲಾಕನಿಗೆ ಬರೆದು ಕೊಟ್ಟಿದ್ದ ಕರಾರುಪತ್ರದ ಅವಧಿ ಮುಗಿದುಹೋಗಿದೆ. ಕರಾರಿನಂತೆ ನಡೆ ಯುವುದಕ್ಕಾಗಿ ನಾನು ಪ್ರಾಣವನ್ನೊಪ್ಪಿಸಬೇಕಾದುದು ಅನಿವಾರ್ಯ. ಆದ್ದ ರಿಂದ ನನ್ನ ಸಾವಿನ ಸಮಯದಲ್ಲಿ ನಿನ್ನನ್ನು ನೋಡಲು ಬಯಸುತ್ತೇನೆ. ಆದರೆ ನೀನು ನಿನಗೆ ಅನುಕೂಲ ತೋರಿದಂತೆ ನಡೆಯಬಹುದು. ನನ್ನ ವಿಷಯದಲ್ಲಿ ನಿನಗಿರುವ ಪ್ರೀತಿ ನಿನ್ನನ್ನಿಲ್ಲಿಗೆ ಬರಮಾಡದಿದ್ದಲ್ಲಿ ಕೇವಲ ಈ ಪತ್ರ ಎಂದೂ ಹಾಗೆ ಮಾಡದಿರಲಿ."

ಪೋರ್ಷಿಯಾ "ಸ್ವಾಮಿ, ಈ ಕೂಡಲೇ ಉಳಿದೆಲ್ಲ ಕಾರ್ಯಗಳನ್ನು ಬಿಟ್ಟು ಹೊರಡಿ. ನನ್ನ ಬಸಾನಿಯೋನ ದೋಷದಿಂದ ಈ ದಯಾಪರ ಮಿತ್ರನ ಒಂದೇ ಒಂದು ಕೂದಲು ಸಹ ಕೊಂಕದಿರಲಿ. ಇದಕ್ಕಾಗಿ ಆ ಹಣದ ಇಪ್ಪತ್ತರಷ್ಟು ಹಣವನ್ನಾದರೂ ಕೊಡಲು ನಿಮಗೆ ಸಾಧ್ಯವೆನಿಸುವಂತೆ ನಾನು ಮಾಡುತ್ತೆನೆ. ಇಷ್ಟೊಂದು ಪ್ರಿಯವಾಗಿ ನಾನು ನಿಮ್ಮನ್ನು ಪಡೆ ದಿರುವುದರಿಂದ, ಅಷ್ಟೇ ಪ್ರಿಯವಾಗಿ ನಿಮ್ಮನ್ನು ಪ್ರೇಮಿಸುತ್ತೇನೆ" ಎಂದಳು. ನಂತರ ಪೋರ್ಷಿಯಾ ಬಸಾನಿಯೋಗೆ ತನ್ನ ಧನದ ಮೇಲೆ ನ್ಯಾಯಬದ್ಧ ವಾದ ಅಧಿಕಾರವನ್ನು ವಹಿಸಿಕೊಡುವ ಸಲುವಾಗಿ ಆ ಕೂಡಲೇ ಅವನನ್ನು ವಿವಾಹವಾಗುವುದಾಗಿ ಹೇಳಿದಳು. ಆ ದಿನನೇ ಅವರಿಬ್ಬರ ವಿವಾಹ ನಡೆ ಯಿತು. ಗ್ರೇಷಿಯಾನೋ ಮತ್ತು ನೆರಿಸ್ಸಾರ ವಿವಾಹವೂ ಆಗಲೇ ನಡೆ ಯಿತು. ವಿವಾಹವಾದ ಮರುಗಳಿಗೆಯಲ್ಲೇ ಬಸಾನಿಯೋ, ಗ್ರೇಷಿಯಾನೋ

ರಿಬ್ಬರೂ ತ್ವರೆಯಿಂದ ವೆನಿಸ್‌ನಗರಕ್ಕೆ ಪ್ರಯಾಣ ಬೆಳೆಸಿದರು. ಅಲ್ಲಿ ಅಷ್ಟು ಹೊತ್ತಿಗಾಗಲೇ ಆಂಟೋನಿಯೋ ಸೆರೆಮನೆ ಸೇರಿದ್ದುದನ್ನು ಕಂಡರು.

ಸಾಲದ ಅವಧಿ ಮುಗಿದುಹೋಗಿದ್ದುದರಿಂದ ಆ ಕ್ರೂರ ಜ್ಯೂ ಬಸಾನಿಯೋ ಕೊಡಬಂದ ಹಣವನ್ನು ನಿರಾಕರಿಸಿ ಆಂಟೋನಿಯೋ ಒಂದು ತೂಕದಷ್ಟು ಮಾಂಸವನ್ನೇ ಒಪ್ಪಿಸಬೇಕೆಂದು ಹಠ ಹಿಡಿದನು. ಈ ಭೀಕರ ವಿವಾದದ ಬಗ್ಗೆ ವೆನಿಸ್ಸಿನ ಡ್ಯೂಕನೆದುರು ವಿಚಾರಣೆ ನಡೆಸಲು ಒಂದು ದಿನವು ನಿಷ್ಕರ್ಷಿಸಲ್ಪಟ್ಟಿತು. ಬಸಾನಿಯೋ ಈ ವಿಚಾರಣೆಯು ಪರಿಣಾಮವೇನಾಗುವುದೋ ಎಂದು ಪ್ರತೀಕ್ಷೆ ಮಾಡುತ್ತಾ ದಾರುಣ ಆತಂಕದಲ್ಲಿ ಮುಳುಗಿ ಹೋದನು.

ಪೋರ್ಷಿಯಾ ಪತಿಯಿಂದ ಅಗಲುವಾಗ ಅವನನ್ನು ಹುರಿದುಂಬಿಸುವ ಮಾತನ್ನೇ ಆಡಿದ್ದಳು. ಹಿಂತಿರುಗಿ ಬರುವಾಗ ಅವನ ಪ್ರಿಯಮಿತ್ರನನ್ನೂ ಕರೆತರಬೇಕೆಂದು ಹೇಳಿದ್ದಳು. ಆದರೂ ಸಹ ಅವಳಿಗೆ ಆಂಟೋನಿಯೋ ಈ ಕಷ್ಟದಿಂದ ಸುಲಭವಾಗಿ ಬಿಡುಗಡೆ ಹೊಂದಲಾರನೆಂಬ ಭೀತಿ ಇದ್ದೇ ಇತ್ತು. ಆದ್ದರಿಂದ ಅವಳು ಒಬ್ಬಳೇ ಉಳಿದುಕೊಂಡಾಗ ಬಸಾನಿಯೋನ ಮಿತ್ರನನ್ನು ಉಳಿಸಲು ತಾನೇ ಏನಾದರೂ ಸಾಧನವಾಗಲು ಸಾಧ್ಯವೇ ಎಂದು ವಿಚಾರ ಮಾಡತೊಡಗಿದಳು. ತನ್ನ ಬಸಾನಿಯೋಗೆ ಗೌರವ ಸಲ್ಲಿಸುವ ಸಲುವಾಗಿ ಅವಳು ವಿನೀತವಾದ ಪತ್ನೀ ಸಹಜ ಮಾಧುರ್ಯದಿಂದ ತಾನು ಎಲ್ಲ ವಿಧದಲ್ಲೂ ಉತ್ತಮ ದರ್ಜೆಯದಾಗಿದ್ದ ಅವನ ವಿವೇಚನಾಶಕ್ತಿಗೆ ಒಳಪಡುವುದಾಗಿ ನುಡಿದಿದ್ದಳು. ಆದರೀಗ, ತನ್ನ ಗೌರವಪಾತ್ರನಾದ ಪತಿಯ ಮಿತ್ರನ ಆಪತ್ಕಾಲದಲ್ಲಿ ಕಾರ್ಯಶೀಲೆಯಾಗಬೇಕಾದ ಸಂದರ್ಭ ಒದಗಿದಾಗ, ಆಕೆ ತನ್ನ ಶಕ್ತಿ ಸಾಮರ್ಥ್ಯದಲ್ಲಿ ಸ್ವಲ್ಪವೂ ಸಂದೇಹಪಡಲಿಲ್ಲ. ತನ್ನ ನೈಜವಾದ ಪರಿಪೂರ್ಣ ವಿವೇಚನಾಶಕ್ತಿಯ ಏಕಮಾತ್ರ ಬಲದಿಂದಲೇ ಅವಳು ವೆನಿಸಿಗೆ ತೆರಳಿ ಅಲ್ಲಿ ಆಂಟೋನಿಯೋ ಪರವಾಗಿ ವಾದಮಾಡಲು ನಿರ್ಧರಿಸಿದಳು.

ಪೋರ್ಷಿಯಾಗೆ ನ್ಯಾಯಶಾಸ್ತ್ರದಲ್ಲಿ ಪರಿಣತ ವಕೀಲನಾಗಿದ್ದ ಒಬ್ಬ ಬಂಧುವಿದ್ದನು. ಆತನ ಹೆಸರು ಬೆಲ್ಲೇರಿಯೋ. ಈ ಸಂದರ್ಭದಲ್ಲಿ ಪೋರ್ಷಿಯಾ ಆತನಿಗೆ ಈ ವಿಷಯಗಳೆಲ್ಲವನ್ನೂ ವಿವರವಾಗಿ ಬರೆದು ತಿಳಿಸಿ ಅವನ ಅಭಿಮತವನ್ನು ತಿಳಿಯಲು ಅಪೇಕ್ಷಿಸಿದಳು. ಅಲ್ಲದೆ ಆತನು ತನ್ನ ಒಪ್ಪಿಗೆಯೊಂದಿಗೆ ವಕೀಲರು ಧರಿಸುವ ಉಡುಪು ತೊಡುಪುಗಳನ್ನೂ ಕಳುಹಿಸಬೇಕೆಂದು ಕೋರಿದಳು. ಅವಳು ಕಳುಹಿದ್ದ ದೂತನು ಹಿಂತಿರುಗಿದಾಗ ಬೆಲ್ಲೇರಿಯೋನಿಂದ

ಸಲಹೆಯ ಪತ್ರಗಳನ್ನೂ, ಅವಳು ಸಜ್ಜಾಗಲು ಅವಶ್ಯವಾದ ಉಳಿದೆಲ್ಲ ವಸ್ತುಗಳನ್ನೂ ತಂದನು.

ಪೋರ್ಷಿಯಾ ಪುರುಷ ವೇಷವನ್ನು ಸಜ್ಜುಗೊಳಿಸಿಕೊಂಡು ವಕೀಲನ ವೇಷ ಭೂಷಣಗಳನ್ನು ಧರಿಸಿದಳು. ಚೇಟಿ ನೆರಿಸ್ಸಾಗೂ ಸಹ ಪುರುಷ ವೇಷವನ್ನು ಒದಗಿಸಿ ತನ್ನ ಕರಣಿಕನನ್ನಾಗಿ ಮಾಡಿಕೊಂಡಳು. ಇಬ್ಬರೂ ಆ ಕೂಡಲೇ ಹೊರಟು ವಿಚಾರಣೆಯ ದಿನದಂದೇ ಸರಿಯಾದ ವೇಳೆಗೆ ವೆನಿಸಿನಲ್ಲಿ ಬಂದಿಳಿದರು. ಸಭಾಶಾಲೆಯಲ್ಲಿ ಅದೇ ತಾನೇ ವೆನಿಸಿನ ಡ್ಯೂಕ್ ಮತ್ತೂ ಸೆನೆಟ್ ಸಭಾಸದರೆಲ್ಲರೆದುರಿನಲ್ಲಿ ವಿಚಾರಣೆ ಮೊದಲಾಗುವುದರಲ್ಲಿತ್ತು. ಈ ಹೊತ್ತಿಗೆ ಪೋರ್ಷಿಯಾ ನ್ಯಾಯಾಲಯವನ್ನು ಪ್ರವೇಶಿಸಿ, ಬೆಲ್ಲೇರಿಯೋನಿಂದ ತಾನು ತಂದಿದ್ದ ಒಂದು ಪತ್ರವನ್ನು ಡ್ಯೂಕನಿಗೆ ಸಮರ್ಪಿಸಿದಳು. ವಿದ್ವನ್ಮಣಿಯಾದ ಬೆಲ್ಲೇರಿಯೋ ಅದರಲ್ಲಿ ಡ್ಯೂಕನಿಗೆ, ತಾನೇ ಆಂಟೋನಿಯೋ ಪರವಾಗಿ ವಾದಮಾಡಲು ಬರಬೇಕೆಂದಿದ್ದುದಾಗಿಯೂ ಆದರೆ ವ್ಯಾಧಿಯ ದೆಸೆಯಿಂದ ಅದು ಅಸಾಧ್ಯವಾಯಿತೆಂದೂ ಬರೆದು ತಿಳಿಸಿದ್ದನು. ಅಲ್ಲದೆ ತನಗೆ ಬದಲಾಗಿ ವಿದ್ವತ್ಪೂರ್ಣ ತರುಣ ವಕೀಲನಾಗಿದ್ದ ಬಾಲ್ಥಸಾರನಿಗೆ (ಇದು ಪೋರ್ಷಿಯಾಗೆ ಅವನು ಕೊಟ್ಟಿದ್ದ ಹೆಸರು) ಆಂಟೋನಿಯೋ ಪರವಾಗಿ ವಾದ ಮಾಡಲು ಅನುಮತಿ ಕೊಡಬೇಕೆಂದು ಕೋರಿದ್ದನು. ಕೃತಕವಾದ ದೊಡ್ಡ ತಲೆಟೊಪ್ಪಿಗೆಯಿಂದಲೂ, ವಕೀಲನ ವೇಷ ಭೂಷಣಗಳಿಂದಲೂ ಪೂರ್ತಿಯಾಗಿ ವೇಷಮರೆಸಿಕೊಂಡಿದ್ದ ಆಗಂತುಕನ ಮುಖವನ್ನು ಡ್ಯೂಕ್ ದೃಷ್ಟಿಸಿ ನೋಡಿದನು. ಆತನ ತರುಣ ಮುಖಛಾಯೆಯನ್ನು ಗಮನಿಸಿ ಕೌತುಕ ಪಡುತ್ತಲೇ ಡ್ಯೂಕ್ ತನ್ನ ಒಪ್ಪಿಗೆಯನ್ನಿತ್ತನು.

ಕೊನೆಗೊಮ್ಮೆ ಗಹನವಾದ ಆ ವಿಚಾರಣೆ ಪ್ರಾರಂಭವಾಯಿತು. ಪೋರ್ಷಿಯಾ ಸುತ್ತಲೂ ಕಣ್ಣು ಹೊರಳಿಸಿ, ನಿರ್ದಯನಾದಾ ಜ್ಯೂನನ್ನು ನೋಡಿದಳು. ಇನ್ನೊಂದೆಡೆ ಆಂಟೋನಿಯೋ ಪಕ್ಕದಲ್ಲಿ ನಿಂತು ಮಿತ್ರನ ಸಲುವಾದ ಭೀತಿ – ಆತಂಕಗಳ ಯಾತನೆಯಲ್ಲಿ ಹೊಯ್ದಾಡುತ್ತಿದ್ದ ಬಸಾನಿಯೋನನ್ನೂ ಕಂಡಳು. ಬಸಾನಿಯೋ ಆಕೆಯ ಛದ್ಮವೇಷದಲ್ಲಿ ಪತ್ನಿಯನ್ನು ಗುರುತಿಸಲಾರದೆ ಹೋದನು.

ಸುಕುಮಾರ ಯುವತಿಯಾದ ಪೋರ್ಷಿಯಾಗೆ ಅವಳು ಕೈಗೊಂಡಿದ್ದ ಗುರುತರ ಕಾರ್ಯದ ಗಹನತ್ವವೇ ಧೈರ್ಯವನ್ನು ಒದಗಿಸಿತು. ಆಕೆ ತಾನು ನಿರ್ಧರಿಸಿಕೊಂಡಿದ್ದ ಕಾರ್ಯದಲ್ಲಿ ಧೈರ್ಯದಿಂದ ಮುಂದುವರಿದಳು. ಮೊದಲು

ಆಕೆ ಷೈಲಾಕನನ್ನು ಉದ್ದೇಶಿಸಿ ಮಾತನಾಡಿದಳು. ವೆನಿಸ್‌ನಗರದ ಕಾನೂನಿನ ಪ್ರಕಾರ, ಷೈಲಾಕನಿಗೆ ಕರಾರುಪತ್ರದಲ್ಲಿ ನಮೂದಿಸಿರುವ ದಂಡವನ್ನು ಪಡೆದುಕೊಳ್ಳಲು ಸಂಪೂರ್ಣ ಹಕ್ಕಿರುವುದೆಂದು ತಾನು ಒಪ್ಪುವುದಾಗಿ ಹೇಳಿದಳು. ನಂತರ ಪೋರ್ಷಿಯಾ ಮಾನವ ಸಹಜವೆನಿಸುವ ಕರುಣಾ ಗುಣವನ್ನು ಕುರಿತು ಉಜ್ವಲ ಉಪನ್ಯಾಸ ಮಾಡಿದಳು. ಅದರ ಉದಾತ್ತ ಭಾವವನ್ನು ವರ್ಣಿಸಿ ಸ್ಪಷ್ಟಪಡಿಸಿದಳು. ಹೆಚ್ಚೇಕೆ, ಆಕೆಯಾಡಿದ ಮಾತಿನಿಂದ, ಭಾವರಹಿತನಾದ ಷೈಲಾಕನಲ್ಲದೆ ಬೇರೆ ಯಾರು ಅಲ್ಲಿದ್ದರೂ ಅವರ ಹೃದಯ ಕರಗಿನೀರಾಗಿ ಬಿಡುತ್ತಿತ್ತು. ಆಕೆ, ಕರುಣೆಯು ಲಲಿತವಾದ ಹೂ ಮಳೆಯಂತೆ ಸ್ವರ್ಗಧಾಮದಿಂದ ಈ ಕೆಳಗಿನ ಲೋಕಕ್ಕೆ ಬೀಳುವುದೆಂದಳು. ಕರುಣೆ ತೋರಿಸುವವನನ್ನೂ ಹೊಂದುವವನನ್ನೂ ಇಬ್ಬರನ್ನೂ ಧನ್ಯರನ್ನಾಗಿ ಮಾಡುವ ಅನಂತ ಅನುಗ್ರಹ ಶಕ್ತಿಯೆಂದು ನುಡಿದಳು. ಪರಮಾತ್ಮನ ಉಪಾಧಿಗುಣವೇ ಆಗಿರುವ ಕರುಣೆ, ದೊರೆಗಳಿಗೆ ಅವರ ಮುಕುಟಕ್ಕಿಂತ ಹೆಚ್ಚು ಶೋಭಿಸುವುದೆಂದಳು. ಕರುಣೆಯಿಂದ ಹದಗೊಂಡ ನ್ಯಾಯಪರತೆಯನ್ನು ಯಾವ ಮಾನವನು ಅಂಗೀಕರಿಸುವನೋ ಅಂತಹವನು ಹೆಚ್ಚು ಹೆಚ್ಚಾಗಿ ಪರಮಾತ್ಮನ ಬಳಿ ಸಾರುವನೆಂದಳು. ನಾವೆಲ್ಲರೂ ಕರುಣೆಗಾಗಿ ಪ್ರಾರ್ಥಿಸುವುದು ನಿತ್ಯನಿಯಮವಾಗಿರುವುದರಿಂದ, ಅದೇ ಪ್ರಾರ್ಥನೆ ಪರರಲ್ಲಿ ಕನಿಕರ ತೋರಬೇಕೆಂಬುದನ್ನೂ ನಮಗೆ ಬೋಧಿಸುವುದೆಂಬುದನ್ನು ನೆನಪಿನಲ್ಲಿಡಲು ಷೈಲಾಕನಿಗೆ ಪೋರ್ಷಿಯಾ ಹೇಳಿದಳು. ಆದರೆ ಇವೆಲ್ಲದರಿಂದ ಗೋರ್ಕಲ್ಲ ಮೇಲೆ ಮಳೆ ಹುಯ್ದಂತಾಯಿತೇ ಹೊರತು, ಷೈಲಾಕನ ಮನ ಒಂದಿನಿತೂ ಇದರಿಂದ ಕರಗಲಿಲ್ಲ. ಕರಾರು ಪತ್ರದಲ್ಲಿ ನಮೂದಿಸಿರುವ ದಂಡವನ್ನು ಪಡೆದುಕೊಳ್ಳುವುದೇ ತನ್ನ ಇಚ್ಛೆಯೆಂಬುದು ಷೈಲಾಕನ ಉತ್ತರವಾಯಿತು. ಆಗ ಪೋರ್ಷಿಯಾ "ಆತನೀಗ ಹಣವನ್ನು ಹಿಂತಿರುಗಿಸಲು ಶಕ್ತನಾಗಿಲ್ಲವೆ?" ಎಂದು ಕೇಳಿದಳು. ಮೂರು ಸಾವಿರ ವರಹಗಳ ಎಷ್ಟು ಪಾಲು ಹಣವನ್ನು ಆ ಜ್ಯೂ ಬಯಸಿದರೂ ತಾನದನ್ನು ಕೊಡುವುದಾಗಿ ಬಸಾನಿಯೋ ಮುಂದೆ ಬಂದನು. ಆದರೆ ಷೈಲಾಕ್ ಆ ಹಣವನ್ನು ನಿರಾಕರಿಸಿದನು. ಕಾನೂನು ಪ್ರಕಾರ ತನಗೆ ದೊರೆಯಬೇಕಾಗಿದ್ದ ಒಂದು ತೂಕದಷ್ಟು ಆಂಟೋನಿಯೋನ ಮಾಂಸದ ಹೊರತು ಬೇರೇನನ್ನೂ ತಾನು ಒಪ್ಪುವುದಿಲ್ಲವೆಂದನು. ಆಗ ಬಸಾನಿಯೋ ತರುಣ ವಕೀಲನಲ್ಲಿ ಮೊರೆಯಿಡುತ್ತಾ, ಕಾನೂನಿನಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಮಾಡಲು

ಪ್ರಯತ್ನಿಸಿ ಆಂಟೋನಿಯೋನ ಪ್ರಾಣ ಉಳಿಸುವಂತೆ ಬೇಡಿದನು. ಆದರೆ ಪೋರ್ಷಿಯಾ ನಿಷ್ಠುರತೆಯಿಂದ ಗಂಭೀರ ಸ್ವರದಲ್ಲಿ ಕಾಯಿದೆ ಕಾನೂನುಗಳನ್ನು ಎಂದಿಗೂ ಬದಲಾಯಿಸಲಾಗದೆಂದಳು. ಇದನ್ನು ಕೇಳಿದ ಷೈಲಾಕನಿಗೆ ಬ್ರಹ್ಮಾನಂದವಾಗಿ ಹೋಯಿತು. ಪೋರ್ಷಿಯಾ ತನ್ನ ಪರವಾಗಿ ವಾದ ಮಾಡುತ್ತಿರುವಳೆಂದೇ ಅವನು ಭ್ರಮಿಸಿದನು. "ಆಹಾ ಡೇನಿಯಲನೇ ನ್ಯಾಯತೀರ್ಪನ್ನು ಕೊಡಲು ಬಂದಂತಿದೆ! ಓ ಪರಿಣತ ನ್ಯಾಯಾಧಿಕಾರಿ, ನಿನ್ನನ್ನು ನಾನೆಷ್ಟು ಗೌರವಿಸಿದರೂ ಸಾಲದಾಗಿದೆ. ನಿನ್ನ ಸ್ವರೂಪಕ್ಕಿಂತ ನೀನದೆಷ್ಟು ಹಿರಿಯವನಾಗಿರುವೆ!" ಎಂದು ಉದ್ಗಾರ ತೆಗೆದನು.

ಪೋರ್ಷಿಯಾ 'ಕರಾರುಪತ್ರವನ್ನು ನಾನು ನೋಡಲು ಬಯಸುತ್ತೇನೆ" ಎಂದು ಷೈಲಾಕನಿಗೆ ಹೇಳಿದಳು. ಅದನ್ನು ಓದಿ ಮುಗಿಸಿದ ನಂತರ— "ಈ ಕರಾರುಪತ್ರದ ಅವಧಿ ಮುಗಿದಿರುವುದು ನಿಜ. ಇದರಿಂದ ಈ ಜ್ಯೂ, ನ್ಯಾಯಬದ್ಧವಾಗಿಯೇ ಆಂಟೋನಿಯೋನ ಒಂದು ತೂಕದಷ್ಟು ಮಾಂಸವನ್ನು ಆತನ ಹೃದಯಕ್ಕೆ ಅತಿಸಮೀಪದಲ್ಲಿ ಕತ್ತರಿಸಿ ಪಡೆದುಕೊಳ್ಳಬಹುದಾಗಿದೆ" ಎಂದಳು. ನಂತರ ಷೈಲಾಕನನ್ನು ಕುರಿತು—"ಕರುಣೆತೋರು, ಆ ಹಣವನ್ನು ತೆಗೆದುಕೊಳ್ಳಲು ಒಪ್ಪಿ, ಈ ಕರಾರು ಪತ್ರವನ್ನು ಹರಿದು ಹಾಕಲು ನನಗೆ ಅನುಮತಿ ಕೊಡು" ಎಂದಳು. ಕ್ರೂರ ಷೈಲಾಕ್ ಯಾವ ಬಗೆಯಲ್ಲೂ ಕರುಣೆತೋರಲು ಸಿದ್ಧನಿರಲಿಲ್ಲ. ಅವನು "ನನ್ನಾಣೆ, ನನ್ನ ನಿರ್ಧಾರ ದೃಢವಾದುದು, ಯಾವ ಮನುಷ್ಯನ ನಾಲಿಗೆಗೂ ಅದನ್ನು ಬದಲಾಯಿಸುವ ಶಕ್ತಿ ಬರಬಾರದೆಂದು ಪಣ ತೊಡುತ್ತೇನೆ" ಎಂದನು. ಪೋರ್ಷಿಯಾ—"ಹಾಗಿದ್ದರೆ ಸರಿ, ಆಂಟೋನಿಯೋ, ಕತ್ತಿಗೆ ಬಲಿಕೊಡಲು ನಿನ್ನೆದೆಯನ್ನು ಒಡ್ಡು, ಸಿದ್ಧನಾಗು" ಎಂದಳು. ಷೈಲಾಕ್ ಅತಿ ತವಕದಿಂದ ದೊಡ್ಡ ಕತ್ತಿಯೊಂದನ್ನು ತೆಗೆದು ಹರಿತಪಡಿಸಿಕೊಳ್ಳತೊಡಗಿದನು. ಪೋರ್ಷಿಯಾ ಆಂಟೋನಿಯೋನನ್ನು ನೋಡಿ "ನೀನೇನಾದರೂ ಹೇಳುವುದಿದೆಯೇ?" ಎಂದಳು. ಆಂಟೋನಿಯೋ ಸ್ವಲ್ಪವೂ ವಿಚಲಿತನಾಗದೆ ಶಾಂತಸ್ವರದಲ್ಲಿ ತಾನಾಗಲೇ ಸಾವಿಗೆ ಮನಸ್ಸನ್ನು ಸಿದ್ಧಗೊಳಿಸಿಕೊಂಡಿದ್ದುದರಿಂದ, ಹೆಚ್ಚಾಗಿ ಹೇಳುವಂತಹದೇನೂ ಇಲ್ಲವೆಂದು ನುಡಿದನು. ನಂತರ ಅವನು ಬಸಾನಿಯೋನೆಡೆಗೆ ತಿರುಗಿ "ನಿನ್ನ ಕೈಯನ್ನಿತ್ತ ಕೊಡು ಬಸಾನಿಯೋ ನಿನಗೆ ಶುಭವಾಗಲಿ. ನಿನಗಾಗಿ ನಾನಿಂತಹ ದುಸ್ಥಿತಿಗಿಳಿದೆನೆಂದು ಮರುಗ

ಬೇಡ. ಮಾನ್ಯಳಾದ ನಿನ್ನ ಪತ್ನಿಗೆ ನನ್ನ ವಿಚಾರವನ್ನು ಅರುಹು. ನಿನ್ನನ್ನು ನಾನೆಷ್ಟು ಪ್ರೀತಿಸಿರುವೆನೆಂಬುದನ್ನು ಅವಳಿಗೆ ಹೇಳು" ಎಂದನು. ಅತೀವ ಯಾತನೆಪಡುತ್ತಾ ಬಸಾನಿಯೋ "ಆಂಟೋನಿಯೋ, ಪ್ರಾಣಕ್ಕಿಂತ ಪ್ರಿಯಳಾದ ಪತ್ನಿ ನನಗಿದ್ದಾಳೆ. ಆದರೆ ನನ್ನ ಪ್ರಾಣ, ಆ ನನ್ನ ಪತ್ನಿ, ಏಕೆ ಈ ಇಡೀ ಜಗತ್ತೇ ನನ್ನ ಪಾಲಿಗೆ ನಿನ್ನ ಜೀವಕ್ಕಿಂತ ಹೆಚ್ಚಿನದಲ್ಲ. ನಿನ್ನನ್ನು ಉಳಿಸಿಕೊಳ್ಳಲು ನನಗೆ ಪ್ರಿಯವಾಗಿರುವ ಅವೆಲ್ಲವನ್ನೂ ಇಲ್ಲಿರುವ ಈ ಪಿಶಾಚಿಗೆ ಬಲಿಯಾಗಿ ಅರ್ಪಿಸಲು ನಾನು ಸಿದ್ಧನಿದ್ದೇನೆ" ಎಂದನು.

ಪೋರ್ಷಿಯಾ ಇದನ್ನು ಕೇಳಿದಳು. ತನ್ನ ಪತಿ ಅವನ ಪರಮಮಿತ್ರನ ಬಗೆಗಿದ್ದ ಗಾಢ ಸ್ನೇಹವನ್ನು ಈ ಬಗೆಯಲ್ಲಿ ವ್ಯಕ್ತಪಡಿಸಿದ್ದರಿಂದ ಬಹು ಸ್ನೇಹಪರಳಾದ ಆಕೆಗೆ ಯಾವ ರೀತಿಯಿಂದಲೂ ಅಸಮಾಧಾನವಾಗಲಿಲ್ಲ. ಆದರೂ ಸಹ ಆಕೆ ಸುಮ್ಮನಿರಲಾರದೆ—"ನಿಮ್ಮ ಪತ್ನಿ ಇಲ್ಲದ್ದಿದ್ದಲ್ಲಿ, ಈ ನಿಮ್ಮ ಅರ್ಪಣೆಯನ್ನು ಕೇಳಿ ಆಕೆಯೇನೂ ನಿಮ್ಮ ಮೇಲೆ ಕೃಪಾಕಟಾಕ್ಷ ಬೀರುತ್ತಿರಲಿಲ್ಲ" ಎಂದಳು. ಅಲ್ಲೇ ಇದ್ದ ಗ್ರೇಷಿಯಾನೋ, ತನ್ನ ಒಡೆಯನಂತೆಯೇ ತಾನೂ ನಡೆಯಲು ಬಯಸುತ್ತಿದ್ದವನು, ಈಗ ತಾನೂ ಬಸಾನಿಯೋನಂತೆಯೇ ಮಾತನಾಡುವುದು ಉಚಿತವೆಂದು ಭಾವಿಸಿದನು. ಅವನು ಪೋರ್ಷಿಯಾ ಬಳಿಯಲ್ಲೇ ಗುಮಾಸ್ತನ ವೇಷದಲ್ಲಿ ಬರೆಯುತ್ತಾ ಕುಳಿತಿದ್ದ ನೆರಿಸ್ಸಾಳೆದುರಿನಲ್ಲಿ—"ಪ್ರಮಾಣವಾಗಿಯೂ ಹೇಳುತ್ತೇನೆ; ನನ್ನ ಪ್ರೇಮಕ್ಕೆ ಪಾತ್ರಳಾಗಿರುವ ಪತ್ನಿ ನನಗಿದ್ದಾಳೆ. ಈಗವಳಿಂದ ಸಾಧ್ಯವಿದ್ದಿದ್ದಲ್ಲಿ, ಅವಳು ಸ್ವರ್ಗದಲ್ಲಿದ್ದು ಈ ನಾಯಿಬುದ್ಧಿಯ ಜ್ಯೂನ ಕ್ರೂರ ಪ್ರವೃತ್ತಿಯನ್ನು ಬದಲಿಸುವ ಶಕ್ತಿಯನ್ನು ಹೊಂದಿರಬಾರದಿತ್ತೇ ಎಂದು ನಾನು ಬಯಸುತ್ತಿದ್ದೇನೆ" ಎಂದನು. ನೆರಿಸ್ಸಾ- "ಅವಳ ಬೆನ್ನ ಹಿಂದೆ ನೀವೀರೀತಿ ಬಯಸುತ್ತಿರುವುದು ಒಳ್ಳೆಯದಾಯಿತು. ಇಲ್ಲದಿದ್ದಲ್ಲಿ ನಿಮ್ಮ ಕುಟುಂಬದಲ್ಲಿ ವಿರಸ ಮಾಡುತ್ತಿದ್ದುದರಲ್ಲಿ ಸಂದೇಹವಿಲ್ಲ" ಎಂದಳು.

ಷೈಲಾಕ್ ಅಸಹನೆಗೊಳ್ಳುತ್ತಾ ತವಕದಿಂದ—"ನಾವಿಲ್ಲಿ ವ್ಯರ್ಥವಾಗಿ ಕಾಲಹರಣ ಮಾಡುತ್ತಿದ್ದೇವೆ. ದಯವಿಟ್ಟು ಕೊನೆಯ ತೀರ್ಪನ್ನು ಕೊಡಿ" ಎಂದು ಕೂಗಿದನು. ಆಗ ಸಭೆಯಲ್ಲೆಲ್ಲಾ ಕಾತರ, ಭಯದಿಂದೊಡಗೂಡಿದ ಪ್ರತೀಕ್ಷೆ ತಾನೇ ತಾನಾಯಿತು. ಅಲ್ಲಿನ ಪ್ರತಿಯೊಂದು ಹೃದಯವೂ ಆಂಟೋನಿಯೋ ಸಲುವಾಗಿ ವ್ಯಥೆಯಿಂದ ಭಾರವಾಯಿತು.

ಪೋರ್ಶಿಯಾ ಮಾಂಸವನ್ನು ತೂಕಮಾಡಲು ತ್ರಾಸು ಸಿದ್ಧವಾಗಿದೆಯೇ ಎಂದು ವಿಚಾರಿಸಿದಳು. ಷೈಲಾಕನನ್ನು ಕುರಿತು "ಷೈಲಾಕ್, ಆತನಿಗೇನಾದರೂ ಹೆಚ್ಚು ರಕ್ತಸುರಿದು ಪ್ರಾಣಾಪಾಯ ಉಂಟಾಗಬಹುದು. ಆದ್ದರಿಂದ ಬಳಿಯಲ್ಲೇ ಶಸ್ತ್ರಚಿಕಿತ್ಸಜ್ಞನಿರುವುದು ಒಳಿತಲ್ಲವೆ?" ಎಂದಳು. ಆಂಟೋನಿಯೋಗೆ ಹೆಚ್ಚು ರಕ್ತಸುರಿದು ಪ್ರಾಣಹೋಗಲೆಂಬುದೇ ಷೈಲಾಕನ ಉದ್ದಿಶ್ಯವಾಗಿದ್ದುದರಿಂದ ಅವನು "ಇದನ್ನೇನೂ ಕರಾರುಪತ್ರದಲ್ಲಿ ಹೇಳಿಲ್ಲ" ಎಂದನು. ಪೋರ್ಶಿಯಾ "ಕರಾರು ಪತ್ರದಲ್ಲಿ ಹೇಳಿಲ್ಲ, ನಿಜ. ಆದರೇನು? ಧರ್ಮದ ಸಲುವಾಗಿಯಾದರೂ ನೀನಿದನ್ನು ಮಾಡುವುದು ಒಳಿತು" ಎಂದುತ್ತರಿಸಿದಳು. ಇದಕ್ಕೆಲ್ಲ ಷೈಲಾಕನದು ಒಂದೇ ಉತ್ತರ—"ಅದೇನೋ ನನಗೆ ತಿಳಿಯದು. ಕರಾರು ಪತ್ರದಲ್ಲಿ ಅದನ್ನು ಹೇಳಿಲ್ಲ" ಪೋರ್ಶಿಯಾ ಆಗ—"ಹಾಗಾದರೆ, ಆಂಟೋನಿಯೋ ಮಾಂಸದಲ್ಲಿ ಒಂದು ತೂಕದಷ್ಟು ನಿನ್ನದು. ಇದಕ್ಕೆ ಕಾನೂನಿನ ಸಮ್ಮತಿ ಇದೆ. ನ್ಯಾಯ ಸಭೆಯ ಅನುಮತಿಯೂ ಇದೆ. ಈ ಮಾಂಸವನ್ನು ಅವನ ಎದೆಯಿಂದ ನೀನು ಕತ್ತರಿಸಿಕೊಳ್ಳಬಹುದು. ಕಾನೂನು ಅದನ್ನು ಸಮ್ಮತಿಸುತ್ತದೆ. ನ್ಯಾಯ ಸಭೆ ಅದನ್ನು ಸಲ್ಲಿಸುತ್ತದೆ" ಎಂದಳು. ಪುನಃ ಷೈಲಾಕ್ "ಓ ಚತುರ ನೀತಿವಂತ ನ್ಯಾಯಮೂರ್ತಿ! ಇಂದು ಡೇನಿಯಲನೇ ನ್ಯಾಯ ತೀರ್ಮಾನಕ್ಕೆ ಬಂದಿರುವಂತಿದೆ" ಎಂದು ಉದ್ಗಾರ ತೆಗೆದನು. ನಂತರ ತನ್ನ ಉದ್ದವಾದ ಕತ್ತಿಯನ್ನು ಪುನಃ ಹರಿತಗೊಳಿಸಿಕೊಂಡು, ಆತುರದಿಂದ ಆಂಟೋನಿಯೋನನ್ನು ನೋಡುತ್ತಾ "ಬಾ, ಸಿದ್ಧನಾಗು" ಎಂದನು.

ಪೋರ್ಶಿಯಾ "ಸ್ವಲ್ಪ ತಡೆ, ಜ್ಯೂ, ನಿಲ್ಲು; ಇಲ್ಲ ಇನ್ನೂ ಹೇಳಬೇಕಾದ ಅಂಶವೊಂದಿದೆ. ಈ ಕರಾರುಪತ್ರ ನಿನಗೆ ಒಂದು ತೊಟ್ಟು ರಕ್ತವನ್ನೂ ಸಹ ಕೊಡುವುದಿಲ್ಲ. ಇಲ್ಲಿರುವ ಪದಗಳು ಸ್ಪಷ್ಟವಾಗಿ "ಒಂದು ತೂಕ ಮಾಂಸ" ಎಂದಾಗಿವೆ. ಈ ಒಂದು ತೂಕ ಮಾಂಸವನ್ನು ಕತ್ತರಿಸಿಕೊಳ್ಳುವಾಗ ನೀವೇನಾದರೂ ಒಂದೇ ಒಂದೇ ತೊಟ್ಟು ಕ್ರೈಸ್ತ ರಕ್ತವನ್ನು ಕೆಳಕ್ಕೆ ಸುರಿಸಿದೆಯಾದರೆ, ಕಾನೂನಿನ ಮೇರೆಗೆ ನಿನ್ನ ಸ್ಥಿರಚರ ಸ್ವತ್ತುಗಳೆಲ್ಲವೂ ವೆನಿಸಿನ ರಾಜ್ಯಾಂಗಕ್ಕೆ ಸೇರಿಹೋಗುತ್ತವೆ" ಎಂದಳು. ಒಂದು ತೊಟ್ಟು ರಕ್ತವನ್ನಾದರೂ ಚೆಲ್ಲದೆ ಮಾಂಸವನ್ನು ಕತ್ತರಿಸಿಕೊಳ್ಳುವುದು ಯಾರಿಗಾದರೂ ಅಸಾಧ್ಯವಷ್ಟೆ? ಹೀಗೆ ಪೋರ್ಶಿಯಾ ಕರಾರುಪತ್ರದಲ್ಲಿ ಬರೆದಿದ್ದುದು ಮಾಂಸವೆಂದೇ ಹೊರತು ರಕ್ತವೆಂದಲ್ಲವೆಂಬ ಅಂಶವನ್ನು ಬುದ್ಧಿವಂತಿಕೆಯಿಂದ

ಕಂಡುಹಿಡಿದುದು ಆಂಟೋನಿಯೋನ ಪ್ರಾಣವನ್ನು ಉಳಿಸಿತು. ಇಷ್ಟು ಸಂತೋಷಕರವಾದ ವಿಹಿತಾಂಶವನ್ನು ಚಿಂತಿಸಿದ ತರುಣ ವಕೀಲನ ಅದ್ಭುತ ಬುದ್ಧಿ ಚಾತುರ್ಯಕ್ಕೆ ಎಲ್ಲರೂ ಮೆಚ್ಚಿ ಬೆರಗಾಗಿ ಹೋದರು. ಸೆನೆಟ್ ಸಭೆಯ ಮೂಲೆ ಮೂಲೆಗಳಿಂದಲೂ ಹರ್ಷಧ್ವನಿಗಳೂ, ಜಯಘೋಷ ಗಳೂ ಕೇಳಿಬಂದವು. ಗ್ರೇಷಿಯಾನೋ, ಹಿಂದೆ ಷೈಲಾಕನೇ ಉಚ್ಚರಿಸಿದ್ದ ಪದಗಳನ್ನು ಅನುಕರಣೆಮಾಡುತ್ತಾ "ಓ ಚತುರ ನೀತಿವಂತ ನ್ಯಾಯ ಮೂರ್ತಿ! ನೋಡು, ನೋಡು, ಷೈಲಾಕ್, ಡೇನಿಯಲನೇ ನ್ಯಾಯ ತೀರ್ಮಾನಕ್ಕೆ ಬಂದಿದ್ದಾನೆ" ಎಂದು ಕೂಗಿದನು.

ತನ್ನ ಕ್ರೂರ ಉದ್ದಿಶ್ಯ ಸಫಲಗೊಳ್ಳದಿದ್ದುದಕ್ಕೆ ಹತಾಶನಾದ ಷೈಲಾಕ್, ಆಗ, ಹಣವನ್ನೇ ತಾನು ಅಂಗೀಕರಿಸುವುದಾಗಿ ಹೇಳಿದನು. ಆಂಟೋನಿಯೋನ ಈ ಅನಿರೀಕ್ಷಿತ ಬಿಡುಗಡೆಯಿಂದಾದ ಸಂತೋಷದಿಂದ ಉಬ್ಬಿಹೋಗಿದ್ದ ಬಸಾನಿಯೋ ಆಗ ಆತುರದಿಂದ ಮುಂದೆ ಬಂದು "ಇದೋ ಇಲ್ಲಿದೆ ಹಣ" ಎಂದನು. ಆದರೆ ಪೋರ್ಷಿಯಾ ಅವನನ್ನು ತಡೆದು— "ಸಾವಧಾನ, ಸಾವಧಾನ; ಆತುರಪಡಬೇಕಾಗಿಲ್ಲ. ಈ ನಮ್ಮ ಜ್ಯೂ ಇಲ್ಲಿ ನಮೂದಿಸಿರುವ ದಂಡವನ್ನಲ್ಲದೆ ಬೇರೇನನ್ನೂ ಪಡೆಯುವುದಿಲ್ಲ. ಆದ್ದರಿಂದ, ಷೈಲಾಕ್, ಮಾಂಸವನ್ನು ಕತ್ತರಿಸಲು ಸಿದ್ಧಮಾಡಿಕೋ. ಅದರೆ ಎಚ್ಚರಿಕೆ, ಒಂದು ತೊಟ್ಟು ರಕ್ತವನ್ನೂ ಕೆಳಗೆ ಸುರಿಸಕೂಡದು. ಅಲ್ಲದೆ ಒಂದು ತೂಕಕ್ಕಿಂತ ಸ್ವಲ್ಪವೂ ಹೆಚ್ಚು ಕಡಿಮೆಯಾಗದಂತೆ ಕತ್ತರಿಸಬೇಕು. ಎಳ್ಳಷ್ಟು ತೂಕ ವ್ಯತ್ಯಾಸವಾದರೂ, ಏಕೆ, ತೂಕದಲ್ಲಿ ಒಂದೇ ಒಂದು ಕೂದಲಿನೆಳೆ ಯಷ್ಟು ವ್ಯತ್ಯಾಸವನ್ನು ತ್ರಾಸು ತೋರಿಸಿದರೂ, ವೆನಿಸಿನ ಕಾನೂನು ಮೇರೆಗೆ, ನೀನು ಮರಣದಂಡನೆಗೊಳಗಾಗುವೆ; ನಿನ್ನ ಸಂಪತ್ತನ್ನೆಲ್ಲಾ ಸೆನೆಟ್ ವಶಪಡಿಸಿಕೊಳ್ಳುವುದು" ಎಂದಳು. ಷೈಲಾಕ್ "ನನ್ನ ಹಣವನ್ನು ಕೊಟ್ಟುಬಿಡಿ. ನಾನು ಮನೆಗೆ ಹೋಗುತ್ತೇನೆ" ಎಂದನು. ಬಸಾನಿಯೋ "ಇದೋ, ಹಣ ಸಿದ್ಧವಾಗಿದೆ" ಎಂದನು.

ಷೈಲಾಕ್ ಹಣವನ್ನು ಸ್ವೀಕರಿಸುವುದರಲ್ಲಿದ್ದಾಗ, ಪೋರ್ಷಿಯಾ ಪುನಃ ಅವನನ್ನು ತಡೆದಳು—"ನಿಲ್ಲು, ನಿಲ್ಲು ಜ್ಯೂ; ನಿನ್ನ ಮೇಲೆ ನನಗೆ ಇನ್ನೊಂದು ಹಿಡಿತ ಸಿಕ್ಕಿದೆ. ವೆನಿಸ್‌ನಗರದ ಕಾನೂನಿನ ಪ್ರಕಾರ, ಈ ನಗರದ ಪೌರನೊಬ್ಬನ ಪ್ರಾಣಾಪಹಾರಕ್ಕೆ ನೀನು ಸಂಚು ಮಾಡಿರುವುದರಿಂದ, ನಿನ್ನ ಸ್ವತ್ತೆಲ್ಲಾ ಸರ್ಕಾರಕ್ಕೆ ಸೇರಿಹೋಗುವುದು. ಅಲ್ಲದೆ ನಿನ್ನ ಪ್ರಾಣ ಡ್ಯೂಕರ

ಕರುಣೆಗೆ ಅಧೀನವಾಗಿದೆ. ಆದ್ದರಿಂದ ಅಡ್ಡಬೀಳು, ಅವರ ಕ್ಷಮೆಯನ್ನು ಯಾಚಿಸು " ಎಂದಳು.

ಆಗ ಡ್ಯೂಕನು ಷೈಲಾಕನನ್ನು ಕುರಿತು—"ನಮ್ಮ ಕ್ರೈಸ್ತ ಮನೋವೃತ್ತಿಯಲ್ಲಿನ ವ್ಯತ್ಯಾಸವನ್ನು ನೀನು ಅರಿತುಕೊಳ್ಳಲೆಂಬುದರ ಸಲುವಾಗಿ ನಾನು, ನೀನು ಕೇಳಿಕೊಳ್ಳುವ ಮುನ್ನವೇ ನಿನ್ನ ಪ್ರಾಣವನ್ನು ಉಳಿಸಿದ್ದೇನೆ. ನಿನ್ನ ಆಸ್ತಿಯಲ್ಲಿ ಅರ್ಧ ಭಾಗ ಆಂಟೋನಿಯೋಗೆ ಸೇರಿದುದು. ಉಳಿದರ್ಧ ರಾಜ್ಯಕ್ಕೆ ಸೇರುತ್ತದೆ'' ಎಂದನು.

ಷೈಲಾಕನಿಗಿದ್ದ ಒಬ್ಬಳೇ ಮಗಳು ಆಂಟೋನಿಯೋನ ಮಿತ್ರನಾಗಿದ್ದ ಲೊರೆನ್ಸೋ ಎಂಬ ಕ್ರೈಸ್ತ ತರುಣನಲ್ಲಿ ಅನುರಕ್ತಳಾಗಿದ್ದಳು. ಷೈಲಾಕನ ಇಚ್ಛೆಗಿದುರಾಗಿ ಆಕೆ ಆ ತರುಣನನ್ನು ವಿವಾಹವಾಗಿದ್ದಳು. ಇದರಿಂದ ಬಹು ಅಗ್ರಹಗೊಂಡಿದ್ದ ಷೈಲಾಕ್ ಅವಳಿಗೆ ತನ್ನ ಅಸ್ತಿಯ ಮೇಲಿನ ಸ್ವಾಮ್ಯವನ್ನು ತಪ್ಪಿಸಿಬಿಟ್ಟಿದ್ದನು. ಈ ವಿಷಯವು ಅಂಟೋನಿಯೋಗೆ ತಿಳಿದಿದ್ದಿತು. ಆದ್ದರಿಂದಲೇ ಈಗ ಉದಾರಚರಿತನಾದ ಆಂಟೋನಿಯೋ, ಷೈಲಾಕನು ತನ್ನ ಸಾವಿನ ಬಳಿಕ ಆಸ್ತಿಯನ್ನು ಮಗಳಿಗೂ ಅವಳ ಗಂಡನಿಗೂ ಒಪ್ಪಿಸುವುದಕ್ಕೆ ಸಮ್ಮತಿಸಿ, ಆ ಮೇರೆಗೆ ಕರಾರು ಪತ್ರಕ್ಕೆ ಸಹಿ ಹಾಕುವುದಾದರೆ, ತನ್ನ ಪಾಲಿಗೆ ಬರುವ ಷೈಲಾಕನ ಆಸ್ತಿಯನ್ನು ತಾನು ಬಿಟ್ಟುಕೊಡುವುದಾಗಿ ಹೇಳಿದನು.

ಷೈಲಾಕ್ ಇದಕ್ಕೆ ಸಮ್ಮತಿಸಿದನು. ಹೀಗೆ ಸೇಡು ತೀರದೆ ಹತಾಶನಾದದಲ್ಲದೆ, ಸಂಪತ್ತನ್ನೂ ಕಳೆದುಕೊಂಡ ಅವನು–"ನಾನು ಅಸ್ವಸ್ಥನಾಗಿದ್ದೇನೆ. ನನ್ನನ್ನು ಮನೆಗೆ ಹೋಗಲು ಬಿಡಿ. ಕರಾರು ಪತ್ರವನ್ನು ಹಿಂದೆಯೇ ಕಳುಹಿಸಿದರೆ ನನ್ನ ಆಸ್ತಿಯಲ್ಲಿ ಅರ್ಧಭಾಗ ಮಗಳಿಗೆ ಸೇರುವಂತೆ ಒಪ್ಪಿ ಸಹಿ ಹಾಕುತ್ತೇನೆ" ಎಂದನು. ಡ್ಯೂಕ್—"ಹಾಗಿದ್ದರೆ ಹೊರಡು : ಅದಕ್ಕೆ ಸಹಿ ಹಾಕು. ಅಲ್ಲದೆ ನಿನ್ನ ಕ್ರೂರಕೃತ್ಯಕ್ಕಾಗಿ ನೀನು ಪಶ್ಚಾತ್ತಾಪಪಟ್ಟು ಕ್ರೈಸ್ತ ಧರ್ಮವನ್ನು ಅವಲಂಬಿಸುವುದಾದರೆ, ರಾಷ್ಟ್ರವು ಉಳಿದರ್ಧ ಆಸ್ತಿಯ ದಂಡನೆಯನ್ನು ಕ್ಷಮಿಸುವುದು" ಎಂದನು.

ನಂತರ ಡ್ಯೂಕ್ ಆಂಟೋನಿಯೋನನ್ನು ಬಿಡುಗಡೆ ಮಾಡಿ ಸಭೆಯನ್ನು ಚದುರಿಸಿದನು. ಆ ಬಳಿಕ ಅವನು ತರುಣ ವಕೀಲನೆಡೆಗೆ ತಿರುಗಿ ಆತನ ಬುದ್ಧಿ ಶಕ್ತಿ, ಜಾಣ್ಮೆಗಳನ್ನು ಬಹುವಾಗಿ ಪ್ರಶಂಸಿಸಿ, ಅವನನ್ನು ಭೋಜನಕ್ಕಾಗಿ ತನ್ನ ಮನೆಗೇ ಬರಲು ಆಮಂತ್ರಿಸಿದನು. ಆದರೆ

ಪೋರ್ಷಿಯಾ ತನ್ನ ಪತಿಗಿಂತ ಮೊದಲೇ ಬೆಲಿಮಾಂಟ್ ಪಟ್ಟಣವನ್ನು ಸೇರಲು ಉತ್ಸುಕಳಾಗಿದ್ದರಿಂದ ಡ್ಯೂಕನಿಗೆ ವಂದನೆಗಳನ್ನರ್ಪಿಸಿ "ಕ್ಷಮಿಸ ಬೇಕು ; ನಾನೀ ಕೂಡಲೇ ಇಲ್ಲಿಂದ ಹೊರಡಬೇಕಾಗಿದೆ" ಎಂದು ಉತ್ತರಿಸಿದಳು. ಡ್ಯೂಕ್ ಅವನಿಗೆ ಕಾಲಾವಕಾಶವಿಲ್ಲದಿರುವುದಕ್ಕಾಗಿ ವಿಷಾದವನ್ನು ವ್ಯಕ್ತಪಡಿಸಿದನು. ನಂತರ ಆಂಟೋನಿಯೋನೆಡೆಗೆ ತಿರುಗಿ–"ಈ ತರುಣನನ್ನು ಬಹುಮಾನಿಸು. ನೀನವನಿಗೆ ಬಹುಮಟ್ಟಿಗೆ ಋಣಿಯಾಗಿರಬೇಕೆಂದು ನನ್ನ ಅಭಿಮತ" ಎಂದನು. ಡ್ಯೂಕನೂ ಅವನ ಸಭಾಸದರೂ ಆ ನಂತರ ಹೊರಟು ಹೋದರು.

ಈಗ ಬಸಾನಿಯೋ ಪೋರ್ಷಿಯಾಳೆಡೆಗೆ ತಿರುಗಿ, "ಅಯ್ಯಾ, ಗುಣಶ್ರೇಷ್ಠ. ನಿನ್ನ ಚಾತುರ್ಯದಿಂದಾಗಿ, ಈ ದಿನ ನಾನೂ ಮತ್ತು ನನ್ನ ಮಿತ್ರ ಆಂಟೋನಿಯೋ ಘೋರ ದಂಡನೆಯಿಂದ ಭೀಕರ ಶಾಸನಗಳಿಂದ ಬಿಡುಗಡೆ ಹೊಂದಿದ್ದೇವೆ. ದಯವಿಟ್ಟು ಆ ಜ್ಯೂಗೆ ಸಲ್ಲಬೇಕಾಗಿದ್ದ ಈ ಮೂರು ಸಾವಿರ ವರಹಗಳನ್ನು ನೀನು ಪರಿಗ್ರಹಿಸಬೇಕಾಗಿ ಕೋರುತ್ತೇನೆ" ಎಂದು ಬೇಡಿದನು. ಆಂಟೋನಿಯೋ "ಅಲ್ಲದೆ ಇದಕ್ಕೂ ಮೀರಿ ನಾವಿನ್ನು ಮುಂದೆ ನಿನಗೆ ಚಿರಋಣಿಗಳಾಗಿರುತ್ತೇವೆ. ನಮ್ಮ ಪ್ರೇಮ, ಸೇವೆಗಳೆರಡೂ ನಿನಗೆ ಮೀಸಲಾಗಿವೆ" ಎಂದನು.

ಪೋರ್ಷಿಯಾ ಹಣವನ್ನು ಅಂಗೀಕರಿಸಲು ಸುತರಾಂ ಒಪ್ಪಲಿಲ್ಲ. ಆದರೆ ಬಸಾನಿಯೋ ಪುನಃ ಪುನಃ ಏನಾದರೂ ಒಂದು ಬಹುಮಾನವನ್ನು ಅಂಗೀಕರಿಸಲೇಬೇಕೆಂದು ಒತ್ತಾಯಪಡಿಸಿದ್ದರಿಂದ ಆಕೆ–"ಹಾಗಿದ್ದರೆ ನಿಮ್ಮ ಹಸ್ತಕವಚಗಳನ್ನು ಕೊಡಿ. ನಿಮಗಾಗಿ ಅದನ್ನು ನಾನು ಧರಿಸುತ್ತೇನೆ" ಎಂದಳು. ಬಸಾನಿಯೋ ಹಸ್ತಕವಚಗಳನ್ನು ಹೊರಗೆ ತೆಗೆದಾಗ ಪೋರ್ಷಿಯಾ ಅವನ ಕೈಬೆರಳಿನಲ್ಲಿ ತಾನಿತ್ತಿದ್ದ ಉಂಗುರವನ್ನು ಕಂಡಳು. ಈ ಉಂಗುರವನ್ನು ಅವನಿಂದ ಪಡೆದುಕೊಂಡು ಪುನಃ ಆತನನ್ನು ಸಂಧಿಸಿದಾಗ ವಿನೋದಕ್ಕೀಡುಮಾಡಬೇಕೆಂಬ ಆಶಯದಿಂದಲೇ ಈ ತಂತ್ರಗಾತಿ ಅವನ ಹಸ್ತಕವಚವನ್ನು ಕೇಳಿದ್ದಳು. ಉಂಗುರವನ್ನು ನೋಡಿದ ಕೂಡಲೇ ಅಕೆ–"ಅಲ್ಲದೆ, ನಿಮ್ಮ ಪ್ರೇಮದ ಸಲುವಾಗಿ, ಈ ಉಂಗುರವನ್ನು ತೆಗೆದುಕೊಳ್ಳುತ್ತೇನೆ" ಎಂದಳು. ಈ ತರುಣ ವಕೀಲ ಯಾವುದನ್ನೂ ಒಲ್ಲದೆ ತಾನು ಅಗಲಲಾಗದ ಈ ಏಕಮಾತ್ರ ವಸ್ತುವನ್ನು ಬೇಡಿದ್ದರಿಂದ ಬಸಾನಿಯೋಗಾದ ಕಳವಳ ಅಷ್ಟಿಷ್ಟಲ್ಲ. ಅವನು ವಿಹ್ವಲತೆಯಿಂದ ಕಕ್ಕಬಿಕ್ಕಾಗಿ ಹೋದನು. ಆ ಉಂಗುರ

ತನ್ನ ಪತ್ನಿಯ ಉಡುಗೊರೆಯೆಂದೂ, ಅದರಿಂದ ಎಂದಿಗೂ ಅಗಲುವುದಿಲ್ಲ ವೆಂದು ವಚನವಿತ್ತಿರುವುದರಿಂದ ಆ ಉಂಗುರವನ್ನು ಕೊಡಲು ಸಾಧ್ಯವಿಲ್ಲ ವೆಂದು ತಿಳಿಸಿದನು. ಆದರೆ ಜಾಹೀರಾತಿನ ಮೂಲಕ ತಾನು ಇಡೀ ವೆನಿಸ್ ನಗರದಲ್ಲೇ ಅತ್ಯಂತ ಬೆಲೆ ಬಾಳುವ ಉಂಗುರವನ್ನು ತರಿಸಿಕೊಡುವುದಾಗಿ ಹೇಳಿದನು. ಇದನ್ನು ಕೇಳಿ ಪೋರ್ಷಿಯಾ ಬಹು ಅಪಮಾನವಾದವಳಂತೆ ನಟಿಸುತ್ತಾ "ಸ್ವಾಮಿ, ಮೊದಲು ತಾವು ನನಗೆ ಭಿಕ್ಷೆ ಬೇಡುವುದು ಹೇಗೆಂಬು ದನ್ನು ತಿಳಿಸಿಕೊಟ್ಟಿರಿ. ಈಗ ಭಿಕ್ಷೆ ಬೇಡುವವನಿಗೆ ಹೇಗೆ ಉತ್ತರ ಕೊಡ ಬೇಕೆಂಬುದನ್ನು ತಿಳಿಸಿಕೊಡುತ್ತಿರುವಿರೆಂದು ತೋರುತ್ತದೆ" ಎಂದು ಹೇಳುತ್ತಾ ಸಭಾಂಗಣವನ್ನು ಬಿಟ್ಟು ಹೊರಟುಬಿಟ್ಟಳು.

ಆಗ ಆಂಟೋನಿಯೋ "ಬಸಾನಿಯೋ, ಆ ಉಂಗರವನ್ನಾತನಿಗೆ ಕೊಟ್ಟುಬಿಡು. ನನ್ನ ಮೇಲಿನ ಪ್ರೇಮವೂ, ಆತ ನನಗೆಸಗಿರುವ ಮಹದುಪ ಕಾರವೂ ನಿನ್ನ ಪತ್ನಿಯ ಅಸಮಾಧಾನಕ್ಕೆ ಈಡೆಂದು ಪರಿಗಣಿತವಾಗಲಿ" ಎಂದನು. ಬಸಾನಿಯೋ ಕೃತಘ್ನನೆನಿಸಿಕೊಳ್ಳಲು ಲಜ್ಜೆಪಟ್ಟು ಇದಕ್ಕೆ ಸಮ್ಮತಿಸಿದನು. ಗ್ರೇಷಿಯಾನೋನನ್ನು ಉಂಗುರದೊಂದಿಗೆ ಪೋರ್ಷಿಯಾಳ ಹಿಂದೆಯೇ ಅಟ್ಟಿದನು. ಆಗ, ಗುಮಾಸ್ತನ ವೇಷದಲ್ಲಿದ್ದ ನೆರಿಸ್ಸಾ ತಾನೂ ಒಂದು ಉಂಗುರವನ್ನು ಗ್ರೇಷಿಯಾನೋಗೆ ಕೊಟ್ಟಿದ್ದುದ್ದರಿಂದ ಅದನ್ನು ಕೊಡುವಂತೆ ಅವನನ್ನು ಬೇಡಿದಳು. ಉದಾರತೆಯಲ್ಲಿ ತನ್ನೊಡೆಯನಿಗಿಂತ ಕೀಳಾಗಲು ಇಚ್ಛಿಸದೆ ಗ್ರೇಷಿಯಾನೋ ಉಂಗುರವನ್ನು ಅವಳಿಗಿತ್ತನು. ನಂತರ ಆ ತರುಣಿಯರಿಬ್ಬರೂ ತಮ್ಮ ವಿನೋದಕ್ಕಾಗಿ ಮನಃಪೂರ್ತಿ ನಗೆ ಯಾಡಿದರು. ಮನೆ ಸೇರಿದ ಮೇಲೆ, ತಮ್ಮ ತಮ್ಮ ಪತಿಯನ್ನು ಯಾವಳೋ ಹೆಂಗಸಿಗೆ ಉಂಗುರ ಕೊಟ್ಟಿರುವರೆಂಬುದಾಗಿ ಹಠ ಹಿಡಿದು ಗೇಲಿ ಮಾಡ ಬಹುದೆಂದು ನೆನಸಿಕೊಂಡು ನಕ್ಕರು.

ಹಿಂತಿರುಗುವಾಗ ಪೋರ್ಷಿಯಾ, ಸತ್ಕಾರ್ಯವೆನ್ನೆಸಗಿರುವೆನೆಂಬ ಭಾವ ದಿಂದ ಪ್ರೇರಿತವಾಗಿದ್ದ ಅದೊಂದು ಬಗೆಯ ಸುಖೀಭೂತ ಮನಃ ಸ್ಥಿತಿಯಲ್ಲಿ ದ್ದಳು. ಆಕೆಯ ಹರ್ಷಭರಿತ ಚೈತನ್ಯ ಅವಳು ನೋಡಿದ್ದೆಲ್ಲವನ್ನೂ ಸಂತಸ ದಿಂದ ಅನುಭೋಗಿಸುವಂತೆ ತೋರಿತು. ಚಂದ್ರನು ಹಿಂದೆಂದೂ ಆಕೆಗೆ ಅಷ್ಟು ಪ್ರಕಾಶಮಾನವಾಗಿ ತೋರಿರಲಿಲ್ಲ. ಆ ಬಳಿಕ ಸುಖಪ್ರದನಾದಾ ಚಂದ್ರಮನು ಮೋಡವೊಂದರ ಹಿಂದೆ ಮರೆಯಾದಾಗ, ಬೆಲ್‌ಮಾಂಟ್‌ನಲ್ಲಿದ್ದ ಅವಳ ಮನೆಯಿಂದ ಕಾಣಬರುತ್ತಿದ್ದ, ದೂರದ ದೀಪದ ಬೆಳಕೂ ಸಹ ಅಕೆಯ

ಆನಂದಭಾವವನ್ನು ಅಷ್ಟೇ ಮಟ್ಟಿಗೆ ತಣಿಸಿತು. ನೆರಿಸ್ಸಾ ಬಳಿ ಅವಳು— "ಈಗ ನಾನು ನೋಡುತ್ತಿರುವ ದೀಪ ನಮ್ಮ ಮನೆಯ ಪಡಸಾಲೆಯಲ್ಲಿ ಉರಿಯುತ್ತಿದೆಯಲ್ಲವೆ? ಅಂತೆಯೇ ಈ ಕಿಡಿಗೇಡಿ ಪ್ರಪಂಚದಲ್ಲಿ ಒಂದು ಸತ್ಕಾರ್ಯ ಬೆಳಗುವುದಲ್ಲವೆ?" ಎಂದಳು. ತನ್ನ ಮನೆಯಿಂದ ಕೇಳಿಬರುತ್ತಿದ್ದ ಗಾನದ ನಾದವನ್ನು ಆಲಿಸುತ್ತಾ, "ಹಗಲಿಗಿಂತಲೂ ಈಗ ಗಾನವು ಹೆಚ್ಚು ಮಧುರವಾಗಿ ಕೇಳಿಬರುವುದೆಂದು ನನಗೆನಿಸುತ್ತಿದೆ" ಎಂದಳು.

ಪೋರ್ಷಿಯಾ ಮತ್ತು ನೆರಿಸ್ಸಾ ಮನೆಯನ್ನು ಸೇರಿ, ತಮ್ಮ ಸ್ವಂತ ವೇಷ ಭೂಷಣಗಳನ್ನೇ ಧರಿಸ್ಕಿ ತಮ್ಮ ಪತಿಗಳ ಆಗಮನವನ್ನು ನಿರೀಕ್ಷಿಸ ತೊಡಗಿದರು. ಅವರು ಬರುವುದೇನೂ ತಡವಾಗಲಿಲ್ಲ. ಆಂಟೋನಿಯೋ ನೊಡಗೂಡಿ ಅವರು ಶೀಘ್ರದಲ್ಲಿಯೇ ಬಂದರು. ಬಸಾನಿಯೋ ತನ್ನ ಪ್ರಿಯಮಿತ್ರನನ್ನು ಪೋರ್ಷಿಯಾಗೆ ಪರಿಚಯಮಾಡಿಕೊಟ್ಟನು. ಆಕೆಯ ಅಭಿನಂದನೆಗಳೂ, ಸ್ವಾಗತದ ನುಡಿಗಳೂ ಕೊನೆಗೊಳ್ಳುವ ಮುನ್ನವೇ ಆ ಕೋಣೆಯ ಮೂಲೆಯೊಂದರಲ್ಲಿ ನೆರಿಸ್ಸಾ ಮತ್ತು ಅವಳ ಗಂಡ ಜಗಳವಾಡುವುದು ಅವರಿಗೆ ಕೇಳಿಬಂದಿತು. "ಏನಿದು ಆಗಲೇ ಜಗಳವೆ? ವಿಷಯವೇನು?" ಎಂದಳು ಪೋರ್ಷಿಯಾ. ಗ್ರೇಷಿಯಾನೋ "ತಾಯಿ, ಅದು ಪ್ರಾರಂಭವಾದುದು ನೆರಿಸ್ಸಾ ನನಗೆ ಕೊಟ್ಟಿದ್ದ ಅದೊಂದು ಕ್ಷುಲ್ಲಕ ಉಂಗುರದಿಂದ. ಆ ಉಂಗುರದಮೇಲೆ, ಚೂರಿ ಮಾರುವವನ ಚಾಕುವಿನಲ್ಲಿರುವುದಿಲ್ಲವೇ, ಹಾಗೆಯೇ ಪದ್ಯರೂಪದಲ್ಲಿ—'ಆದರಿಸೆನ್ನನ್ನು, ಅಗಲದಿರೆನ್ನಿಂದ' ಎಂದು ಬರೆದಿತ್ತು" ಎಂದನು.

ನೆರಿಸ್ಸಾ. "ಆ ಪದ್ಯಕ್ಕಾಗಲೀ ಆ ಉಂಗರದ ಬೆಲೆಗಾಗಲೀ ಈಗ ಯಾವ ಅರ್ಥವಿದೆ? ನಾನದನ್ನು ನಿನಗೆ ಕೊಟ್ಟಾಗ ಸಾಯುವವರೆಗೂ ಅದರಿಂದ ಅಗಲುವುದಿಲ್ಲವೆಂದು ನೀನು ಪ್ರಮಾಣ ಮಾಡಿದೆ. ಈಗ ಕೇಳಿದರೆ ಅದನ್ನು ಯಾವನೋ ವಕೀಲನ ಗುಮಾಸ್ತನಿಗೆ ಕೊಟ್ಟೆನೆಂದು ಹೇಳುತ್ತಿರುವೆ. ನನಗೆ ಗೊತ್ತು, ನೀನದನ್ನು ಯಾವಳೋ ಹೆಂಗಸಿಗೆ ಕೊಟ್ಟಿದ್ದೀಯೆ" ಎಂದಳು. ಗ್ರೇಷಿಯಾನೋ "ಈ ನನ್ನ ಕೈಯಾಣೆ; ನಾನದನ್ನು ಒಬ್ಬ ತರುಣನಿಗೆ ಕೊಟ್ಟೆ. ಆತ ಹುಡುಗನಂತಿದ್ದ. ನಿನಗಿಂತ ಎತ್ತರವಿಲ್ಲದ, ಬೆಳವಣಿಗೆಯೆ ಸಾಲದ ಅದೊಂದು ಬಗೆಯ ಹುಡುಗ ಆತ. ಅವನು ಚಾತುರ್ಯದಿಂದ ಆಂಟೋನಿಯೋನ ಪ್ರಾಣ ಉಳಿಸಿದ ತರುಣ ವಕೀಲನ ಗುಮಾಸ್ತನಾಗಿದ್ದ. ಆ ಹರಟೆಯ ಮಲ್ಲನಾದ ಹುಡುಗ ಉಂಗುರವನ್ನು ಶುಲ್ಕ

ವಾಗಿ ಬೇಡಿದಾಗ, ನನ್ನ ಜೀವದಾಣೆ, ನನಗೆ ನಿರಾಕರಿಸುವುದಾಗಲಿಲ್ಲ" ಎಂದನು. ಪೋರ್ಷಿಯಾ—"ನೀನು ತಪ್ಪಿತಸ್ಥ, ಗ್ರೇಷಿಯಾನೋ; ನಿನ್ನ ಪತ್ನಿಯ ಪ್ರಥಮ ಕಾಣಿಕೆಯಿಂದ ನೀನು ಅಗಲಬಾರದಾಗಿತ್ತು. ನೋಡು, ನಾನು ನನ್ನ ಸ್ವಾಮಿ ಬಸಾನಿಯೋಗೆ ಒಂದು ಉಂಗುರವನ್ನಿತ್ತಿದ್ದೆ. ಇಡೀ ಪ್ರಪಂಚವನ್ನೇ ಕೊಟ್ಟರೂ ಅವರು ಅದರಿಂದ ಅಗಲುವುದಿಲ್ಲವೆಂದು ನಾನು. ಖಂಡಿತವಾಗಿ ಬಲ್ಲೆ" ಎಂದಳು. ಗ್ರೇಷಿಯಾನೋ ತನ್ನ ಅಪರಾಧದಿಂದ ತಪ್ಪಿಸಿಕೊಳ್ಳಲು ನೆಪ ಸಿಕ್ಕಿತೆಂದು ಸಂತೋಷಪಡುತ್ತಾ—"ನಮ್ಮೊಡೆಯ ಬಸಾನಿಯೋ ಆ ಉಂಗುರವನ್ನು ವಕೀಲನಿಗೆ ಕೊಟ್ಟುಬಿಟ್ಟರು. ಆನಂತರವೇ, ಬರೆಯಲು ಅಲ್ಪಸ್ವಲ್ಪ ಶ್ರಮವಹಿಸಿದ್ದ ಆ ಹುಡುಗ ಗುಮಾಸ್ತ. ನನ್ನ ಉಂಗುರವನ್ನು ಬೇಡಿದ್ದು" ಎಂದುಬಿಟ್ಟನು.

ಪೋರ್ಷಿಯಾ ಇದನ್ನು ಕೇಳಿ ಬಹು ಕೋಪಗೊಂಡಪಳಂತೆ ತೋರ್ಪಡಿಸಿಕೊಂಡಳು. ಉಂಗುರವನ್ನು ಕೊಟ್ಟುಬಿಟ್ಟುದಕ್ಕಾಗಿ ಬಸಾನಿಯೋನನ್ನು ನಿಂದಿಸಿದಳು. ನೆರಿಸ್ಸಾ ತಾನು ಏನನ್ನು ಚಿಂತನೆಮಾಡ ಬೇಕೆಂಬುದನ್ನು ತೋರಿಸಿಕೊಟ್ಟರುವಳೆಂದೂ ಉಂಗುರ ಯಾವಳೋ ಹೆಂಗಸಿನ ಕೈ ಸೇರಿ ಹೋಗಿರುವುದೆಂದು ತಾನು ತಿಳಿಯಬೇಕಾಗಿದೆಯೆಂದೂ ಹೇಳಿದಳು. ಪ್ರೇಯಸಿಯನ್ನು ತಾನೀರೀತಿ ಅಸಮಾಧಾನಗೊಳಿಸಿದ್ದಕ್ಕಾಗಿ ಬಸಾನಿಯೋ ಬಹು ಖೇದಗೊಂಡನು. ಅವನು ಅತ್ಯಸ್ಥೆಯಿಂದ—"ಇಲ್ಲ ಇಲ್ಲ; ನನ್ನಾಣೆಯಾಗಿಯೂ, ಅದನ್ನು ಯಾವ ಹೆಂಗಸೂ ಪಡೆಯಲಿಲ್ಲ. ನಾನು ನೀಡಿದ ಮೂರು ಸಾವಿರ ವರಹಗಳನ್ನು ನಿರಾಕರಿಸಿ, ಈ ಉಂಗುರ ವನ್ನು ಮಾತ್ರ ನಾನು ಕೊಡಲಾರೆನೆಂದಾಗ ಕೋಪಿಸಿಕೊಂಡು ಹೋದ ಆ ತರುಣ ವಕೀಲನಲ್ಲಿದೆ ಉಂಗುರ. ನಾನಿನ್ನೇನು ಮಾಡಬಹುದಿತ್ತು, ಪ್ರಿಯ ಪೋರ್ಷಿಯಾ? ಕೃತಘ್ನನಾಗಲು ನನಗೆ ಲಜ್ಜೆಯುಂಟಾಗಿ, ಆತನ ಹಿಂದೆಯೇ ಉಂಗುರವನ್ನು ಕಳುಹಿಸಬೇಕಾಯಿತು. ನನ್ನನ್ನು ಕ್ಷಮಿಸು ಪ್ರಿಯೆ; ಒಂದು ವೇಳೆ ನೀನಲ್ಲಿದ್ದಿದ್ದರೆ, ನೀನಾಗಿಯೇ ಉಂಗುರವನ್ನು ಆ ಶ್ರೇಷ್ಠ ವಕೀಲನಿಗೆ ಕೊಡು ಎಂದು ನನ್ನನ್ನು ಬೇಡುತ್ತಿದ್ದೆ" ಎಂದನು.

ಇತ್ತ ಆಂಟೋನಿಯೋ "ಅಯ್ಯೋ, ಈ ಎಲ್ಲ ಕಲಹಕ್ಕೆ ನಾನೇ ಕಾರಣನಾದೆನಲ್ಲವೆ ?" ಎಂದು ಪರಿತಾಪಪಟ್ಟನು. ಪೋರ್ಷಿಯಾ ಅವನನ್ನು ಮರುಗದಿರಲು ಕೋರಿದಳು. ಇಷ್ಟೆಲ್ಲ ನಡೆದರೂ ಆತ ಆದರಣೀಯ ನೆಂದಳು. ಆಗ ಆಂಟೋನಿಯೋ—"ಒಮ್ಮೆ ನಾನು ಬಸಾನಿಯೋಗಾಗಿ

ದೇಹವನ್ನು ಅರ್ಪಿಸಿದ್ದೆ. ನಿನ್ನ ಪತಿ ಈಗ ಯಾರಿಗೆ ಉಂಗುರವನ್ನಿತ್ತಿರುವನೋ ಆತನಿಲ್ಲದಿದ್ದರೆ ನಾನೀ ಹೊತ್ತಿಗೆ ಸಾವನ್ನಪ್ಪಬೇಕಾಗಿತ್ತು. ಈಗ ಪುನಃ ನಾನು, ನನ್ನ ಆತ್ಮವನ್ನು ಪಣವಾಗಿ ಒಡ್ಡಿ, ನಿನ್ನ ಸ್ವಾಮಿ ಮುಂದೆಂದೂ ನಿನ್ನ ನಂಬಿಕೆಯನ್ನು ಕಳೆದುಕೊಳ್ಳುವುದಿಲ್ಲವೆಂದು ಹೇಳಲು ಸಿದ್ಧನಿದ್ದೇನೆ" ಎಂದನು. ಪೋರ್ಷಿಯಾ—"ಹಾಗಿದ್ದರೆ, ನೀವೇ ಅವರಿಗೆ ಹೊಣೆಗಾರರಾಗಿದ್ದು, ಈ ಉಂಗುರವನ್ನವರಿಗೆ ಕೊಡಿ. ಹಿಂದಿನದಕ್ಕಿಂತ ಇದನ್ನು ಚೆನ್ನಾಗಿ ರಕ್ಷಿಸಿಕೊಳ್ಳುವಂತೆ, ಅವರಿಗೆ ಹೇಳಿ" ಎಂದಳು.

ಆ ಉಂಗುರವನ್ನು ನೋಡಿದಾಗ ಬಸಾನಿಯೋ ಅದು ತಾನು ಕೊಟ್ಟಿದ್ದುದೇ ಎಂದರಿತನು. ಅವನಿಗಾದ ಆಶ್ಚರ್ಯಕ್ಕೆ ಎಣೆಯೇ ಇರಲಿಲ್ಲ. ಆಗ ಪೋರ್ಷಿಯಾ ತಾನೇ ಆ ತರುಣ ವಕೀಲನಾಗಿದ್ದುದನ್ನೂ, ನೆರಿಸ್ಸಾ ತನ್ನ ಗುಮಾಸ್ತನಾಗಿದ್ದುದನ್ನೂ ಅವನಿಗೆ ಹೇಳಿದಳು. ಆಂಟೋನಿಯೋನ ಪ್ರಾಣ ಉಳಿದುದು ತನ್ನ ಪತ್ನಿಯ ಅಪ್ರತಿಮ ಧೈರ್ಯ ಚಾತುರ್ಯಗಳಿಂದಲೇ ಎಂದರಿತ ಬಸಾನಿಯೋ ಆನಂದಾಶ್ಚರ್ಯಗಳಿಂದ ಅವಾಕ್ಕಾದನು !

ನಂತರ ಪೋರ್ಷಿಯಾ ಆಂಟೋನಿಯೋನನ್ನು ಪುನಃ ಸ್ವಾಗತಿಸಿ ಆದರಿಸಿದಳು. ಅಲ್ಲದೆ ಯಾವುದೋ ಅದೃಷ್ಟವಿಶೇಷದಿಂದ ತನ್ನ ಕೈಸೇರಿದ್ದು, ಸಂತೋಷ ಸುದ್ದಿಯನ್ನೊಳಗೊಂಡಿದ್ದ ಕೆಲವು ಪತ್ರಗಳನ್ನು ಅವನಿಗೆ ಒಪ್ಪಿಸಿದಳು. ಅದರಲ್ಲಿ ನಾಶವಾದವೆಂದು ಪರಿಗಣಿತವಾಗಿದ್ದ ಆಂಟೋನಿಯೋನ ಹಡಗುಗಳೆಲ್ಲಾ ಸುರಕ್ಷಿತವಾಗಿ ಬಂದರನ್ನು ಸೇರಿದವೆಂಬ ಸುದ್ದಿ ಇತ್ತು. ಹೀಗೆ ಈ ಧನಿಕ ವರ್ತಕನ ಕತೆಯಲ್ಲಿನ ದುಃಖಕರ ಉಪಕ್ರಮಗಳೆಲ್ಲ ಮುಂದೆ ಸಂಘಟಿಸಿದ ಅನಿರೀಕ್ಷಿತವಾದ ಸಂತೋಷ ಘಟನೆಗಳಿಂದಾಗಿ ನೆನಪಿನಿಂದ ಸರಿದು ಹೋದವು. ಆನಂತರ ಉಂಗುರಗಳನ್ನು ಕುರಿತ ವಿನೋದದ ಬಗ್ಗೆಯೂ ಅಲ್ಲದೆ ತಮ್ಮ ತಮ್ಮ ಪತ್ನಿಯರನ್ನೇ ಗುರುತಿಸದೆ ಹೋದ ಗಂಡಂದಿರ ಬಗ್ಗೆಯೂ ಪರಿಹಾಸ ಮಾಡಲು ಸಾಕಷ್ಟು ಅವಕಾಶ ದೊರಕಿತು ! ನಮ್ಮ ತರುಣಿಯರು ಆ ಅವಕಾಶವನ್ನು ಸರಿಯಾಗಿಯೇ ಉಪಯೋಗಿಸಿಕೊಂಡರೆಂದು ಹೇಳಬೇಕಿಲ್ಲವಷ್ಟೆ ?

---

# ಸಿಂಬಿಲ್ಯೈನ್

ರೋಮ್‌ನ ಚಕ್ರಾಧಿಪತಿ ಆಗಸ್ಟಸ್ ಸೀಸರನ ಕಾಲ; ಇಂಗ್ಲೆಂಡ್ ಆಗ ಬ್ರಿಟನ್ ಎಂದು ಕರೆಯಲ್ಪಡುತ್ತಿತ್ತು. ಈ ಬ್ರಿಟನ್ನಿನಲ್ಲಿ ಸಿಂಬಿಲ್ಯೈನ್ ಎಂಬ ಹೆಸರಿನ ದೊರೆ ರಾಜ್ಯವಾಳುತ್ತಿದ್ದನು.

ಸಿಂಬಿಲ್ಯೈನನ ಮೊದಲನೆಯ ಹೆಂಡತಿ ಅವನ ಮೂವರು ಮಕ್ಕಳು ಇನ್ನೂ ಚಿಕ್ಕವರಿದ್ದಾಗಲೇ ಮೃತಳಾಗಿ ಹೋಗಿದ್ದಳು. ಸಿಂಬಿಲ್ಯೈನ್‌ಗಿದ್ದವರು ಇಬ್ಬರು ಪುತ್ರರು. ಒಬ್ಬ ಮಗಳು. ಈ ಮಕ್ಕಳಲ್ಲಿ ಎಲ್ಲರಿಗಿಂತ ಹಿರಿಯ ಳಾಗಿದ್ದ ಇಮೋಜೆನ್ ತಂದೆಯ ಆಸ್ಥಾನದಲ್ಲೇ ಬೆಳೆಯುತ್ತಿದ್ದಳು. ಆದರೆ, ದೈವಗತಿ ವಿಲಕ್ಷಣವಾದುದು—ಸಿಂಬಿಲ್ಯೈನಿನ ಇಬ್ಬರು ಪುತ್ರರೂ ಅವರ ಬಾಲ್ಯ ದಲ್ಲಿಯೇ ಅವರ ಕ್ರೀಡಾಗೃಹದಿಂದ ಕದ್ದೊಯ್ಯಲ್ಪಟ್ಟಿದ್ದರು. ಆಗ ಹಿರಿಯ ವನಿಗೆ ಮೂರು ವರುಷ ವಯಸ್ಸಾಗಿದ್ದಿತು. ಕಿರಿಯನಿನ್ನೂ ಎಳೆಯ ಶಿಶು. ಅನಂತರ ಅವರೇನಾದರು, ಅವರನ್ನು ಕದ್ದೊಯ್ದವರು ಯಾರು ಎನ್ನುವು ದೊಂದೂ ಸಿಂಬಿಲ್ಯೈನನಿಗೆ ತಿಳಿಯದೆ ಹೋಯಿತು.

ಸಿಂಬಿಲ್ಯೈನ್ ಮತ್ತೊಮ್ಮೆ ವಿವಾಹವಾಗಿದ್ದನು. ಅವನ ಎರಡನೆಯ ಹೆಂಡತಿ ಕಪಟಿ. ದುರುಳೆ. ಸವತಿಯ ಮಗಳಾದ ಇಮೋಜೆನಳನ್ನು ಅವಳು ಬಹು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದಳು.

ರಾಣಿಗೂ ಇಮೋಜೆನಗೂ ಬದ್ಧದ್ವೇಷ; ಈ ರಾಣಿ ಸಹ ಎರಡುಬಾರಿ ವಿವಾಹವಾಗಿದ್ದವಳು. ಮೊದಲ ಗಂಡನಿಂದ ಅವಳಿಗೆ ಕ್ಲಾಟೆನ್ ಎಂಬ ಮೂಢ ಮಗನಿದ್ದನು. ಈ ಮಗನಿಗೆ ಇಮೋಜೆನಳೊಂದಿಗೆ ವಿವಾಹ ನಡೆಸ ಬೇಕೆಂಬುದು ರಾಣಿಯ ಅಪೇಕ್ಷೆಯಾಗಿದ್ದಿತು. ಈ ಮೂಲಕವಾದರೂ, ಸಿಂಬಿಲ್ಯೈನನ ಮರಣಾನಂತರ, ಬ್ರಿಟನ್ನಿನ ರಾಜಮುಕುಟ ತನ್ನ ಮಗ ಕ್ಲಾಟೆನನ ತಲೆಯನ್ನಲಂಕರಿಸಲೆಂದು ಅವಳ ಆಶಯ. ಏಕೆಂದರೆ, ರಾಜನ ಕಳೆದುಹೋಗಿದ್ದ ಪುತ್ರರು ದೊರೆಯದಿದ್ದಲ್ಲಿ, ರಾಜಕುವರಿ ಇಮೋಜೆನಳೇ

ಮುಂದಿನ ಉತ್ತರಾಧಿಕಾರಿಯಾಗುವಳೆಂಬುದು ಅವಳ ಅರಿವಿನಲ್ಲಿತ್ತು. ಆದರೆ ಅವಳ ಈ ಹಂಚಿಕೆ ಸ್ವತಃ ಇಮೋಜೆನ್‌ಳಿಂದಲೇ ಮುರಿದುಬಿತ್ತು. ಕಾರಣ, ಇಮೋಜೆನ್ ತಂದೆಯ ಅಥವಾ ರಾಣಿಯ ಒಪ್ಪಿಗೆ ಪಡೆಯದೆ, ಕೊನೆಗೆ ಅವರಿಗೆ ಅರಿವು ಸಹ ಕೊಡದೆ ಪೋಸ್ಥ್ಯುಮಸ್ ಎಂಬ ಯುವಕನನ್ನು ವಿವಾಹ ವಾಗಿದ್ದಳು.

ಪೋಸ್ಥ್ಯುಮಸ್ ಆ ಕಾಲದಲ್ಲಿನ ಉತ್ತಮ ವಿದ್ವನ್ಮಣಿಯಾಗಿದ್ದನು. ಅನೇಕ ವಿದ್ಯೆಯಲ್ಲಿ ಪಾರಂಗತನಾಗಿದ್ದನು. ಪೋಸ್ಥ್ಯುಮಸನ ತಂದೆ ರಾಜನ ಸೈನ್ಯದಲ್ಲಿ ಉನ್ನತಾಧಿಕಾರದಲ್ಲಿದ್ದು, ಅವನ ಪರವಾಗಿ ಹೋರಾಡುತ್ತಲೇ ಯುದ್ಧದಲ್ಲಿ ಮಡಿದುಬಿದ್ದಿದ್ದನು. ಇನ್ನು ತಾಯಿಯಾದರೋ, ಪೋಸ್ಥ್ಯುಮಸನ ಜನನವಾದ ಕೂಡಲೇ ಗಂಡನನ್ನು ಕಳೆದುಕೊಂಡ ದುಃಖದಿಂದ ಸತ್ತಿದ್ದಳು. ರಾಜ ಸಿಂಬಿಲೈನ್ ಈ ಅನಾಥ ಶಿಶುವಿನ ನಿಸ್ಸಹಾಯಕ ಸ್ಥಿತಿಯನ್ನು ನೋಡಿ ಮರುಕಗೊಂಡಿದ್ದನು. ಪೋಸ್ಥ್ಯುಮಸನನ್ನು ತನ್ನ ವಶಕ್ಕೇ ತೆಗೆದುಕೊಂಡು ತನ್ನ ಆಸ್ಥಾನದಲ್ಲೇ ಅವನಿಗೆ ವಿದ್ಯಾಭ್ಯಾಸ ಮಾಡಿಸಿದ್ದನು.

ಇಮೋಜೆನ್ ಮತ್ತು ಪೋಸ್ಥ್ಯುಮಸ್ ಒಬ್ಬರೇ ಗುರುಗಳಿಂದ ಶಿಕ್ಷಣ ಪಡೆದರು. ಶೈಶವ್ಯದಿಂದ ಒಡನಾಡಿಗಳಾಗಿ, ಎಳೆತನದಲ್ಲಿ ಅವರು ಪರಸ್ಪರ ಬಹು ಮಮತೆಯಿಂದ ಪ್ರೀತಿಸುತ್ತಿದ್ದರು. ವಯಸ್ಸು ಕಳೆದಂತೆಲ್ಲಾ, ಅವರ ಮಮತೆಯೂ ವರ್ಧಿಸಿತ್ತು. ದೊಡ್ಡವರಾದ ಮೇಲೆ ಅವರಿಬ್ಬರೂ ಗುಪ್ತವಾಗಿ ವಿವಾಹವಾಗಿದ್ದರು.

ರಾಣಿ ಮಲಮಗಳ ಮೇಲೆ ಸದಾ ಗೂಢಚಾರರನ್ನು ನಿಯಮಿಸಿರುತ್ತಿದ್ದಳು. ಅಂತೆಯೇ ಈ ರಹಸ್ಯವನ್ನೂ ಅವಳು ಅರಿತುಕೊಂಡುದಲ್ಲದೆ, ಹತಾಶಳಾಗಿ ಆ ಕೂಡಲೇ ರಾಜನಿಗೆ ಈ ಗುಪ್ತವಿವಾಹದ ಸುದ್ದಿಯನ್ನು ತಿಳಿಸಿಬಿಟ್ಟಳು.

ಮಗಳು ತನ್ನ ಉನ್ನತ ಸ್ಥಾನ ಮರ್ಯಾದೆಯನ್ನು ಮರೆತು ಸಾಮಾನ್ಯ ಪ್ರಜೆಯೊಬ್ಬನನ್ನು ಮದುವೆಯಾದಳೆಂದು ಕೇಳಿದಾಗ ಸಿಂಬಿಲೈನನಿಗುಂಟಾದ ಕ್ರೋಧ ಅಷ್ಟಿಷ್ಟಲ್ಲ. ಆ ಕೂಡಲೇ ಅವನು ಪೋಸ್ಥ್ಯುಮಸ್‌ನನ್ನು ಬ್ರಿಟನ್ ಬಿಟ್ಟು ತೆರಳಲು ಆಜ್ಞಾಪಿಸಿದನು. ಜನ್ಮಭೂಮಿಗೆ ಮುಂದೆಂದೂ ಹಿಂತಿರುಗದಂತೆ ಅವನನ್ನು ಗಡೀಪಾರು ಮಾಡಿದನು.

ಪತಿಯ ಅಗಲಿಕೆಗಾಗಿ ಮರುಗುತ್ತಿದ್ದ ಇಮೋಜೆನ್‌ಳನ್ನು ರಾಣಿ ಕನಿಕರಿಸುವಂತೆ ನಟಿಸುತ್ತಾ, ಪೋಸ್ಥ್ಯುಮಸ್ ದೇಶಬಿಟ್ಟು ಹೋಗುವ ಮುನ್ನ

ಅವರಿಬ್ಬರ ರಹಸ್ಯ ಭೇಟಿಗೆ ಅವಕಾಶ ಮಾಡಿಕೊಡುವುದಾಗಿ ಮುಂದೆ ಬಂದಳು. ಆದರೆ ಅವಳೀ ಉದಾರತ್ವದ ತೋರಿಕೆಗೂ ಅವಳ ಮಗನ ಮೇಲಿನ ಹಂಚಿಕೆಯೇ ಪ್ರೇರಕವಾಗಿದ್ದಿತು. ಇಮೋರ್ಜಳನ್ನು ಗಂಡ ತೊರೆದುಹೋದ ಮೇಲೆ, ರಾಜಾನುಜ್ಞೆಯಿಲ್ಲದೆ ನಡೆದಿದ್ದುದರಿಂದ ಅವಳ ವಿವಾಹ ಅದು ನ್ಯಾಯಬಾಹಿರವೆಂದು ಸಿದ್ಧಪಡಿಸಬೇಕೆಂಬುದೇ ರಾಣಿಯ ಉದ್ದೇಶವಾಗಿದ್ದಿತು.

ಪೋಸ್ತ್ಯುಮಸ್, ದೇಶಭ್ರಷ್ಟನಾದ ಮೇಲೆ ರೋಮ್‌ನಗರಕ್ಕೆ ತೆರಳಿ ಅಲ್ಲೇ ಇರಬೇಕೆಂದು ನಿಶ್ಚಯಿಸಿಕೊಂಡಿದ್ದನು. ಇಮೋರ್ಜ ಮತ್ತು ಪೋಸ್ತ್ಯುಮಸ್ ಎಷ್ಟೋ ಆದರದಿಂದ ಪರಸ್ಪರ ಬೀಳ್ಕೊಂಡರು. ಇಮೋರ್ಜ ತನ್ನ ತಾಯಿಯದಾಗಿದ್ದ ಒಂದು ವಜ್ರದುಂಗುರವನ್ನು ಅವನಿಗೆ ಕಾಣಿಕೆಯಾಗಿ ಕೊಟ್ಟಳು. ಅವನು ಎಂದಿಗೂ ಅದರಿಂದ ಅಗಲುವುದಿಲ್ಲವೆಂದು ವಚನ ಕೊಟ್ಟು ನಂತರ ಹೆಂಡತಿಯ ತೋಳಿಗೆ ಒಂದು ತೋಳಬಂದಿಯನ್ನು ಕಟ್ಟಿ, ಅದನ್ನು ಅವಳು ತನ್ನ ಪ್ರೇಮಸಂಕೇತವೆಂದು ತಿಳಿದು ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದು ಕೋರಿದನು. ನಂತರ ಅವರಿಬ್ಬರೂ ನಿರಂತರ ಪ್ರೇಮ ಮತ್ತು ನಿಷ್ಠೆಯ ಪ್ರಮಾಣ ವಚನಗಳೊಂದಿಗೆ ಪರಸ್ಪರ ದುಃಖದಿಂದ ಅಗಲಿದರು.

ಇಮೋರ್ಜ ತಂದೆಯ ರಾಜಾಸ್ಥಾನದಲ್ಲಿ ಏಕಾಂಗಿಯಾಗಿ, ಖಿನ್ನ ಮನಸ್ಕಳಾಗಿ ಉಳಿದುಕೊಂಡಳು. ಪೋಸ್ತ್ಯುಮಸ್, ಮೊದಲೇ ನಿಷ್ಕರ್ಷಿಸಿದ್ದಂತೆ, ರೋಮ್‌ನಗರಕ್ಕೆ ಹೊರಟು ಸೇರಿದನು.

ರೋಮ್‌ನಲ್ಲಿ ಪೋಸ್ತ್ಯುಮಸ್ ಹಲವಾರು ದೇಶಗಳಿಂದ ಬಂದಿದ್ದ ಕೆಲವು ಸುಖಪ್ರವೃತ್ತಿಯ ತರುಣರ ಸ್ನೇಹಿತನಾದನು. ಅಲ್ಲಿ ಅವರೆಲ್ಲರೂ ಒಮ್ಮೆ ಸ್ತ್ರೀಯರ ಬಗ್ಗೆ ಸ್ವೇಚ್ಛೆಯಿಂದ ಮಾತನಾಡಲಾರಂಭಿಸಿದರು. ಎಲ್ಲರೂ ತಮ್ಮ ತಮ್ಮ ದೇಶದ ಸ್ತ್ರೀಯರನ್ನೂ, ತಮ್ಮ ಪ್ರೇಯಸಿಯರನ್ನೂ ಹೊಗಳಿಕೊಳ್ಳುತ್ತಿದ್ದರು. ಸದಾ ತನ್ನ ಪ್ರೇಯಸಿಯಲ್ಲೇ ಪೋಸ್ತ್ಯುಮಸ್‌ನ ಮನಸ್ಸು ಮಗ್ನವಾಗಿರುತ್ತಿದ್ದುದರಿಂದ ಅವನು ತನ್ನ ಪತ್ನಿಯಾದ ಸುಂದರಿ ಇಮೋರ್ಜ, ಪ್ರಪಂಚದಲ್ಲೆಲ್ಲಾ ಅತ್ಯಂತ ಸದ್ಗುಣಿ, ಚತುರೆ ಮತ್ತು ಪತಿವ್ರತೆಯಾದವಳೆಂದು ಕಂಠೋಕ್ತವಾಗಿ ವಾದಿಸಿದನು.

ಅಲ್ಲಿದ್ದ ತರುಣರಲ್ಲಿ ಇಯಾಕಿಮೋ ಎಂಬ ಹೆಸರಿನವನು ಒಬ್ಬನಿದ್ದನು. ಅವನು ರೋಮ್‌ನವನೇ. ತನ್ನ ಮಾತೃಭೂಮಿಯವರಾದ ರೋಮನ್

ಸ್ತ್ರೀಯರಿಗಿಂತ ಉತ್ತಮಳೆಂಬುದಾಗಿ ಬ್ರಿಟನ್ನಿನ ಒಬ್ಬ ಸ್ತ್ರೀಯನ್ನು ಶ್ಲಾಘಿಸುತ್ತಿರುವುದು ಅವನಿಗೆ ಸರಿಬೀಳಲಿಲ್ಲ. ಅವನು ಪೋಸ್ತ್ಯುಮಸ್‌ನನ್ನು ಕೆಣಕುವ ಉದ್ದೇಶ್ಯದಿಂದ ಅವನು ಹಾಡಿ ಹೊಗಳುತ್ತಿದ್ದ ಇಮೋಜೆನ್‌ಳ ಪಾತಿವ್ರತ್ಯವನ್ನು ಶಂಕಿಸುವಂತೆ ನಟಿಸಿದನು. ಕೊನೆಗೆ, ಬಹು ಹೊತ್ತು ಚರ್ಚೆ ಮುಂದುವರಿದುದಾಯಿತು. ನಂತರ ಇಯಾಕಿಮೋ ತಾನೇ ಬ್ರಿಟನ್‌ಗೆ ಹೋಗಿ, ವಿವಾಹಿತಳಾಗಿರುವ ಇಮೋಜೆನ್‌ಳ ಪ್ರೇಮವನ್ನು ಸಂಪಾದಿಸಲು ಪ್ರಯತ್ನ ಪಡುವುದಾಗಿ ಪಣತೊಟ್ಟನು. ಈ ದುಷ್ಟ ಹಂಚಿಕೆಯಲ್ಲಿ ಅವನು ಗೆಲ್ಲದಿದ್ದರೆ ದೊಡ್ಡಮೊತ್ತದ ಹಣವನ್ನು ಇಯಾಕಿಮೋ ದಂಡವಾಗಿ ಪೋಸ್ತ್ಯುಮಸನಿಗೆ ಸಲ್ಲಿಸಬೇಕೆಂದು ನಿಶ್ಚಯವಾಯಿತು. ಹಾಗಲ್ಲದೆ, ಇಯಾಕಿಮೋ, ಇಮೋಜೆನ್‌ಳ ಆದರವನ್ನು ಸಂಪಾದಿಸಿ, ಅವಳಿಗೆ ಪೋಸ್ತ್ಯುಮಸ್ ಪ್ರೇಮಸಂಕೇತವಾಗಿ ಕೊಟ್ಟಿದ್ದ ತೋಳಬಂದಿಯನ್ನೂ ಪಡೆಯುವುದಾದಲ್ಲಿ, ಪಣದಲ್ಲಿ ಸೋತ ಪೋಸ್ತ್ಯುಮಸ್ ಇಮೋಜೆನ್‌ಳ ಪ್ರೇಮ ಕಾಣಿಕೆಯಾಗಿ ತನ್ನಲ್ಲಿದ್ದ ವಜ್ರದುಂಗುರವನ್ನೂ ಇಯಾಕಿಮೋಗೆ ಒಪ್ಪಿಸ ಬೇಕೆಂದು ತೀರ್ಮಾನವಾಯಿತು. ಇಮೋಜೆನ್‌ಳ ಸತೀತ್ವದಲ್ಲಿ ಪೋಸ್ತ್ಯುಮಸ್‌ಗೆ ಅಪಾರ, ಅಚಲ ವಿಶ್ವಾಸವಿದ್ದಿತು. ಅಂತೆಯೇ ಅವನು ಈ ಬಗೆಯ ಪರೀಕ್ಷೆ ಯಿಂದ ಯಾವ ಕೆಡಕಾದರೂ ಸಂಭವಿಸಬಹುದೆಂದು ಯೋಚಿಸಲಾರದೆ ಹೋದನು.

ಇಯಾಕಿಮೋ ಬ್ರಿಟನ್ನಲ್ಲಿ ಬಂದಿಳಿದನು. ಪತಿಯ ಮಿತ್ರನೆಂದು ಇಮೋಜೆನ್ ಅವನಿಗೆ ಶೀಘ್ರ ಪ್ರವೇಶಕ್ಕೆ ಅನುಜ್ಞೆಯಿತ್ತು, ಗೌರವದಿಂದಲೇ ಸ್ವಾಗತಿಸಿದಳು. ಆದರೆ ಅವನೆಂದು ಅವಳನ್ನು ಕುರಿತು ಪ್ರೇಮಾಲಾಪ ಗಳನ್ನು ಆರಂಭಿಸಿದನೋ ಆ ಕೂಡಲೇ ಅವಳು ಅವನನ್ನು ತುಚ್ಛೀಕರಿಸಿ, ದೂರಮಾಡಿದಳು. ಇಯಾಕಿಮೋಗೆ ಇನ್ನು ತನ್ನ ದುಷ್ಟ ಹಂಚಿಕೆ ಎಂದಿಗೂ ಕೈಗೂಡುವುದಿಲ್ಲವೆಂದು ಅರಿಯಲು ಬಹುಕಾಲ ಬೇಕಾಗಲಿಲ್ಲ.

ಪಂಥದಲ್ಲಿ ಗೆಲ್ಲಲೇಬೇಕೆಂಬ ಹಠ ಇಯಾಕಿಮೋನಲ್ಲಿ ದುರುದ್ದಿಶ್ಯವನ್ನು ಪ್ರೇರಿಸಿತು. ಪೋಸ್ತ್ಯುಮಸ್‌ನನ್ನು ನಂಬಿಸಿ ಮೋಸಗೊಳಿಸುವ ಕುಟಿಲ ತಂತ್ರ ವೊಂದನ್ನು ಅವನು ಯೋಚಿಸಿದನು. ಇದಕ್ಕಾಗಿ ಅವನು ಇಮೋಜೆನ್‌ಳ ಹಲವು ಪರಿಚಾರಕರಿಗೆ ಲಂಚವನ್ನಿತ್ತು ವಶಪಡಿಸಿಕೊಂಡನು. ಈ ಸೇವಕರ ಸಹಾಯದಿಂದಲೇ ಅವನು ಒಂದು ದೊಡ್ಡ ಪೆಟ್ಟಿಗೆಯಲ್ಲಿ ಅವಿತುಕೊಂಡಿದ್ದು ಇಮೋಜೆನ್‌ಳ ಮಲಗುವ ಕೋಣೆಗೆ ಒಯ್ಯಲ್ಪಟ್ಟನು. ಅಲ್ಲಿ ಇಮೋಜೆನ್

ವಿಶ್ರಾಂತಿಗೆ ತೆರಳಿ ನಿದ್ರಿಸುವವರೆಗೂ ಒಳಗೇ ಅವಿತುಕೊಂಡಿದ್ದನು. ನಂತರ ಪೆಟ್ಟಿಗೆಯಿಂದ ಹೊರಬಂದು, ಕೋಣೆಯನ್ನೆಲ್ಲಾ ಸುತ್ತಲೂ ನೋಡಿ ಎಚ್ಚರಿಕೆಯಿಂದ ಪರೀಕ್ಷಿಸಿದನು. ಅಲ್ಲಿ ತಾನು ಕಂಡುದನ್ನೆಲ್ಲಾ ಗುರುತಿಸಿ ಕೊಂಡನು. ಎಲ್ಲಕ್ಕಿಂತ ವಿಶೇಷವಾಗಿ ಇಮೋಜಿನ್ ಕುತ್ತಿಗೆಯ ಮೇಲಿದ್ದ ಒಂದು ಮಚ್ಚೆಯನ್ನು ಗಮನವಿಟ್ಟು ನೋಡಿದನು. ನಂತರ ಅವಳಿಗರಿವಿಲ್ಲ ದಂತೆ, ಮೆಲ್ಲಗೆ ಅವಳ ತೋಳಿನಿಂದ ಪೋಸ್ಥ್ಯುಮಸ್ ಕೊಟ್ಟಿದ್ದ ತೋಳಬಂದಿ ಯನ್ನು ಕಳಚಿಕೊಂಡನು. ನಂತರ ಅದನ್ನು ಭದ್ರವಾಗಿರಿಸಿಕೊಂಡು ಪುನಃ ಪೆಟ್ಟಿಗೆಯೊಳಗೇ ಸೇರಿ ಕುಳಿತುದಾಯಿತು. ಮರುದಿನ ಇಯಾಕಿಮೋ ತ್ವರೆಯಿಂದ ರೋಮ್‌ನಗರಕ್ಕೆ ಪ್ರಯಾಣ ಬೆಳಸಿದನು. ಅಲ್ಲಿ ಪೋಸ್ಥ್ಯುಮಸ್ ಬಳಿ, ಇಮೋಜಿನ್ ಸ್ವತಃ ತನಗೆ ತೋಳಬಂದಿಯನ್ನು ಕೊಟ್ಟಳೆಂದೂ, ಅಷ್ಟೇ ಅಲ್ಲದೆ ಅವಳ ಶಯ್ಯಾಗೃಹದಲ್ಲಿ ಒಂದು ರಾತ್ರಿ ಕಳೆಯಲೂ ಸಹ ಅವಕಾಶ ಕೊಟ್ಟಳೆಂದೂ ಬಡಾಯಿ ಹೇಳಿಕೊಂಡನು. ಇಯಾಕಿಮೋ ತನ್ನ ಸುಳ್ಳು ಕತೆಯನ್ನು ಸಮರ್ಥಿಸುತ್ತಾ "ಅವಳು ಮಲಗುವ ಮನೆ ರೇಷ್ಮೆ ಮತ್ತು ರಜತ ದಿಂದ ನೆಯ್ದಿರುವ ಜವನಿಕೆಯಿಂದ ಅಲಂಕೃತವಾಗಿದೆ. ಅದರ ಮೇಲಿರುವ ಅತಿ ಸುಂದರವಾದ ನೇಯ್ಗೆ ಚಿತ್ರದಲ್ಲಿ ಕ್ಲಿಯೋಪಾತ್ರ ಆಂಟೋನಿಯೋನನ್ನು ಸಂಧಿಸುವ ದೃಶ್ಯವಿದೆಯಲ್ಲವೆ ?" ಎಂದನು.

ಪೋಸ್ಥ್ಯುಮಸ್ "ಇದೇನೋ ನಿಜ. ಆದರೆ ಇದನ್ನೆಲ್ಲಾ ನೀನು ಸ್ವತಃ ನೋಡದಿರಬಹುದು. ಯಾರಾದರೂ ಹೇಳಿದ್ದನ್ನು ಕೇಳಿರಬಹುದು" ಎಂದನು.

"ಹಾಗಿದ್ದರೆ ಅಲ್ಲಿ, ಆ ಕೋಣೆಯ ದಕ್ಷಿಣ ದಿಕ್ಕಿನಲ್ಲಿ ಹೊಗೆಗೂಡಿದೆ ಯಲ್ಲ, ಅದರ ಮೇಲೆ ಡಯಾನಾ ಸ್ನಾನಮಾಡುವ ಚಿತ್ರವಿದೆ. ಅಷ್ಟು ಚೆನ್ನಾಗಿ ಮೂಡಿಸಿರುವ ಚಿತ್ರಗಳನ್ನು ನಾನು ಕಂಡುದು ಅದೇ ಮೊದಲು."

"ಇದನ್ನೂ ಸಹ ನೀನು ಕೇಳಿ ತಿಳಿದಿರಬಹುದು. ಅದು ಆ ದೇಶದಲ್ಲಿ ಎಲ್ಲರ ಬಾಯಿಯ ಮಾತಾಗಿದೆ" ಎಂದನು ಪೋಸ್ಥ್ಯುಮಸ್.

ಆಗ ಇಯಾಕಿಮೋ ಹಿಂದಿನಷ್ಟೇ ಖಚಿತವಾಗಿ ಆ ಕೋಣೆಯ ಮೇಲ್ಛಾವಣಿಯನ್ನೂ ವರ್ಣಿಸಿದನು. ಆಮೇಲೆ ತೋಳಬಂದಿಯನ್ನು ಹೊರ ತೆಗೆದು ತೋರಿಸುತ್ತಾ "ನಿಮಗೀ ಆಭರಣ ಗೊತ್ತೇ ? ಇದನ್ನು ಅವಳು ನನಗೆ ಕೊಟ್ಟಳು. ಆಹಾ ! ಅವಳು ಸ್ವತಃ ಇದನ್ನು ತೋಳಿನಿಂದ ಕಳಚಿ ತೆಗೆದ ಚಿತ್ರ ಇನ್ನೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಅವಳ ಆಗಿನ ಚೆಲುಭಂಗಿ

ಈ ಬಹುಮಾನವನ್ನೇ ಮೀರಿಸಿತ್ತು. ಈ ಬಹುಮಾನಕ್ಕೆ ಮತ್ತಷ್ಟು ಕಳೆ ಕೊಟ್ಟಿತ್ತು. ಅವಳು ಇದನ್ನು ನನಗೆ ಕೊಟ್ಟಮೇಲೆ, ಹಿಂದೊಮ್ಮೆ ತನಗಿದು ಬಹು ಪ್ರಿಯವಾಗಿತ್ತೆಂದೂ ತಿಳಿಸಿದಳು" ಇಷ್ಟು ಹೇಳಿದಮೇಲೆ ಇಯಾಕಿಮೋ ತಾನು ಅವಳ ಕೊರಳಿನ ಮೇಲೆ ನೋಡಿದ್ದ ಮಚ್ಚೆಯನ್ನು ವರ್ಣಿಸಿದನು.

ಇಲ್ಲಿಗೆ ಪೋಸ್ತ್ಯುಮಸ್‌ನ ಸಹನೆ ಎಲ್ಲೆಮೀರಿತು. ಇಷ್ಟು ಹೊತ್ತೂ ಆತ ಈ ಕುಟಿಲ ಕಥನವನ್ನು ಕೇಳುತ್ತಾ ಸಂದಿಗ್ಧದಲ್ಲಿ, ವೇದನೆಯಲ್ಲಿ ಹೊಯ್ದಾಡುತ್ತಿದ್ದನು. ಅವನಿಗೀಗ ಆವೇಶ ಉಕ್ಕಿ ಬಂದಿತು. ಇಮೋಜೆಳನ್ನು, ಮೇಲಿಂದ ಮೇಲೆ, ಅತಿ ನಿಷ್ಠುರವಾದ ನುಡಿಗಳಿಂದ ಅವನು ಶಪಿಸತೊಡಗಿದನು. ಹಿಂದೆಯೇ ಒಪ್ಪಂದವಾಗಿದ್ದಂತೆ ಇಮೋಜೆಳ ವಜ್ರದುಂಗುರವೂ ಇಯಾಕಿಮೋನ ಕೈ ಸೇರಿಹೋಯಿತು.

ಪೋಸ್ತ್ಯುಮಸ್ ಮಾತ್ಸರ್ಯ, ರೋಷಗಳಲ್ಲಿ ಸಿಲುಕಿಹೋದನು. ಆ ಕೂಡಲೇ ಅವನು ತನ್ನ ಮಿತ್ರನೂ ಇಮೋಜೆಳ ಪರಿವಾರದಲ್ಲೊಬ್ಬನೂ ಆಗಿದ್ದ ಪಿಸಾನಿಯೋ ಎಂಬವನಿಗೆ ಪತ್ರ ಬರೆದನು. ಅದರಲ್ಲಿ ಪಿಸಾನಿಯೋಗೆ ತನ್ನ ಪತ್ನಿಯ ವಿಶ್ವಾಸ ಘಾತುಕತನದ ನಿದರ್ಶನವನ್ನು ತಿಳಿಸಿ, ಅವಳನ್ನು ಆ ಕೂಡಲೇ ಕೊಲೆಮಾಡಬೇಕೆಂದೂ ಬರೆದುಬಿಟ್ಟನು. ಇದಕ್ಕಾಗಿ ಅವಳನ್ನು ವೇಲ್ಸ್‌ನ ಸಮುದ್ರ ತೀರವಾದ ಮಿಲ್‌ಫೋರ್ಡ್ ಹೇವೆಗೆ ಕರೆದೊಯ್ಯಬೇಕೆಂದು ತಿಳಿಸಿದ್ದನು. ಅದೇ ವೇಳೆಗೆ ಅವನು ಇಮೋಜೆಗೂ ಒಂದು ಕಪಟ ಪತ್ರವನ್ನು ಬರೆದನು; ತಾನು ಇನ್ನು ಹೆಚ್ಚುಕಾಲ ಅವಳ ವಿರಹವನ್ನು ತಡೆಯಲಾರನೆಂದೂ, ಮರಣದಂಡನೆಯ ಭಯವನ್ನೂ ನಿರ್ಲಕ್ಷಿಸಿ ಅವಳನ್ನು ತಾನು ನೋಡಬಯಸುವುದರಿಂದ ಅವಳು ಪಿಸಾನಿಯೋನೊಂದಿಗೆ ಮಿಲ್‌ಫೋಡ್ ಹೇವನ್‌ಗೆ ಬಂದು ತನ್ನನ್ನು ಸಂಧಿಸಬೇಕೆಂದೂ ಆ ಪತ್ರದಲ್ಲಿ ತಿಳಿಸಿದ್ದನು. ಸಂಶಯರಹಿತಳಾಗಿದ್ದ ಮುಗ್ಧೆ ಇಮೋಜೆ ಅವನ ಮಾತನ್ನು ನಂಬಿದಳು. ಪತಿಪ್ರಾಣೆಯಾಗಿದ್ದ ಅವಳು ಆ ಕೂಡಲೇ ಅವನನ್ನು ನೋಡಲು ತವಕಗೊಂಡಳು. ಪತ್ರ ಬಂದ ದಿನವೇ ರಾತ್ರಿ ಅವಳು ಪಿಸಾನಿಯೋನೊಂದಿಗೆ ಪ್ರಯಾಣ ಬೆಳೆಸಿದಳು.

ಪ್ರಯಾಣ ಇನ್ನೇನು ಕೊನೆ ಮುಟ್ಟಿತೆನ್ನುವಾಗ, ಪಿಸಾನಿಯೋ ತನಗೆ ಪೋಸ್ತ್ಯುಮಸ್‌ನಿಂದ ಬಂದಿದ್ದ ಕ್ರೂರ ನಿರೂಪವನ್ನು ಅವಳಿಗೆ ತಿಳಿಯಪಡಿಸಿದನು. ಪಿಸಾನಿಯೋ ಪೋಸ್ತ್ಯುಮಸನಿಗೆ ವಿಶ್ವಾಸಪಾತ್ರನಾಗಿದ್ದರೂ

ಸಹ, ದುಷ್ಟ ಕಾರ್ಯದಲ್ಲಿ ಅವನ ಬೆಂಬಲಿಗನಾಗಲು ಆತನ ಮನ ಒಡಂಬಡಲಿಲ್ಲ.

ಪ್ರೀತಿಯ, ಪ್ರೀತಿಸುವ ಪತಿಯ ದರ್ಶನದ ಬದಲು ಅವನ ಈ ಘೋರ ನಿರೂಪ—ಅವನಿಂದಲೇ ಮರಣದಂಡನೆಗೆ ಒಳಗಾಗಬೇಕಾದ ಕಠೋರ ದೌರ್ಭಾಗ್ಯ ಸಿಡಿಲಿನಂತೆ ಇಮೋಜೆನಳ ಮೇಲೆ ಬಂದೆರಗಿತು. ಅವಳು ಈ ಆಘಾತದಿಂದ ತತ್ತರಿಸಿ ಹೋದಳು.

ಪಿಸಾನಿಯೋ ಅವಳನ್ನು ಸಮಾಧಾನಪಡಿಸತೊಡಗಿದನು. ಪೋಸ್ಥ್ಯುಮಸ್ ತನ್ನ ಅನ್ಯಾಯ ಕರ್ಮವನ್ನು ಕಂಡುಕೊಂಡು ಅನುತಾಪ ಪಡಬಹುದೆಂದೂ, ಅಲ್ಲಿಯವರೆಗೂ ಧೃತಿಗೆಡದೆ ತಾಳ್ಮೆಯಿಂದ ಪ್ರತೀಕ್ಷೆ ಮಾಡಬೇಕೆಂದೂ ಅವಳನ್ನು ಒಪ್ಪಿಸಿದನು. ಇಷ್ಟಾದ ಮೇಲೆ, ಅವಳು ಆ ದುಸ್ಥಿತಿಯಲ್ಲಿ ತಂದೆಯ ರಾಜಾಸ್ಥಾನಕ್ಕೆ ಹಿಂತಿರುಗಲು ನಿರಾಕರಿಸಿದ್ದರಿಂದ, ಪ್ರವಾಸ ಮಧ್ಯದಲ್ಲಿ ಸಂರಕ್ಷಣೆಯ ಸಲುವಾಗಿ ಅವಳು ಪುರುಷವೇಷ ಧರಿಸಿ ಕೊಳ್ಳಬೇಕೆಂದು ಪಿಸಾನಿಯೋ ಸಲಹೆಯಿತ್ತನು. ಇಮೋಜೆನ್ ಇದಕ್ಕೆ ಒಪ್ಪಿ, ಆ ವೇಷದಲ್ಲೇ ರೋಮ್‌ನಗರಕ್ಕೆ ಹೊರಟು ಪತಿಯನ್ನು ನೋಡಲು ಸಂಕಲ್ಪಿಸಿದಳು. ಅವನು ಅವಳನ್ನು ಅಷ್ಟು ಕ್ರೂರವಾಗಿ ನಡೆಸಿ ಕೊಂಡಿದ್ದರೂ ಸಹ, ಆಕೆಗೇನೋ ಅವನ ಮೇಲಿದ್ದ ಪ್ರೇಮ ಕುಂದಿರಲಿಲ್ಲ.

ಪಿಸಾನಿಯೋ, ಪುರುಷವೇಷದ ಉಡುಪುತೊಡಪುಗಳನ್ನು ಅವಳಿಗೆ ಒದಗಿಸಿಕೊಟ್ಟನು. ತಾನು ರಾಜಾಸ್ಥಾನಕ್ಕೆ ಹಿಂತಿರುಗಲೇಬೇಕಾಗಿದ್ದುದರಿಂದ ಪಿಸಾನಿಯೋ ಅವಳನ್ನು ಅನಿಶ್ಚಿತ ಭವಿಷ್ಯಕ್ಕೇ ಒಳಗಾಗಿಸಿ ಹಿಂತಿರುಗಬೇಕಾಯಿತು. ಆದರೆ ಹೊರಡುವ ಮುನ್ನ ಅವನು ರಾಣಿಯಿಂದ ತಾನು ಸರ್ವರೋಗಹರವೆಂದು ತಿಳಿದು ಪಡೆದುಕೊಂಡಿದ್ದ ಒಂದು ಪ್ರಚೋದಕ ಔಷಧಿಯ ಸೀಸೆಯನ್ನು ಇಮೋಜೆನಗೆ ಕೊಟ್ಟನು.

ಪಿಸಾನಿಯೋ, ಇಮೋಜೆನ್ ಮತ್ತು ಪೋಸ್ಥ್ಯುಮಸ್ ಇಬ್ಬರ ಮಿತ್ರನೂ ಆಗಿದ್ದುದರಿಂದ ರಾಣಿ ಅವನನ್ನು ದ್ವೇಷಿಸುತ್ತಿದ್ದಳು. ಅವಳು ಕೊಟ್ಟ ಔಷಧಿಯ ಸೀಸೆಯಲ್ಲಿ ವಿಷವಿರುವುದೆಂದು ಅವಳ ಭಾವನೆಯಾಗಿತ್ತು. ತನ್ನ ವೈದ್ಯನ ಬಳಿ, ಪ್ರಾಣಿಗಳ ಮೇಲೆ ಔಷಧದ ಪರಿಣಾಮವನ್ನು ಪರೀಕ್ಷಿಸುವುದಕ್ಕೆಂದು ಹೇಳಿ ರಾಣಿ ಆ ವಿಷದ ಸೀಸೆಯನ್ನು ಪಡೆದುಕೊಂಡಿದ್ದಳು. ಆದರೆ ಅವಳ ದುರುಳ ಮನೋಭಾವದ ಪೂರ್ಣ ಅರಿವು ವೈದ್ಯನಿಗಿತ್ತು. ಆದ್ದ

ರಿಂದಲೇ ಅವನು ಅವಳನ್ನು ನಂಬದೆ, ನಿಜವಾದ ವಿಷದ ಬದಲು, ನೋಟಕ್ಕೆ ಸಾವಿನಂತೆಯೇ ತೋರುವ ದೀರ್ಘನಿದ್ರೆಯನ್ನು ಉಂಟುಮಾಡುವ ಒಂದು ಔಷಧಿಯನ್ನು ಅವಳಿಗೆ ಕೊಟ್ಟಿದ್ದನು. ಇದನ್ನೇ ಪಿಸಾನಿಯೋ ದಿವ್ಯೌಷಧ ವೆಂದು ಭಾವಿಸಿದ್ದು, ಇಮೋಜೆ‌ನ್‌ಗಿತ್ತು ದಾರಿಯಲ್ಲೇನಾದರೂ ಅಸ್ವಸ್ಥತೆ ಯುಂಟಾದಲ್ಲಿ ಉಪಯೋಗಿಸಲು ಹೇಳಿದನು. ಹೀಗೆ, ಅವಳಿಗೆ ಸೌಖ್ಯ ಉಂಟಾಗಲೆಂದೂ, ಅಪಾತ್ರವಾಗಿ ಘಟಿಸಿದ್ದ ಅವಳ ಸಂಕಟಗಳೆಲ್ಲಾ ಬೇಗ ಸುಖಾಂತವಾಗಿ ಪರಿಹಾರವಾಗಲೆಂದೂ ಹಾರೈಸಿ ಪಿಸಾನಿಯೋ ಇಮೋಜೆ‌ನ್ ಳಿಂದ ಅಗಲಿದನು.

ವಿಧಿ, ಇಮೋಜೆ‌ನ್‌ಳನ್ನು ಬಾಲ್ಯದಲ್ಲಿಯೇ ಕದ್ದೊಯ್ಯಲ್ಪಟ್ಟಿದ್ದ ಅವಳ ಸೋದರರ ವಾಸಸ್ಥಾನಕ್ಕೇ ಎಳೆದೊಯ್ದಿತು. ಅವರನ್ನು ಕದ್ದೊಯ್ದಿದ್ದವನು, ರಾಜ ಸಿಂಬಿಲೈನನ ಆಸ್ಥಾನದಲ್ಲಿಯೇ ಇದ್ದ ಬೆಲೇರಿಯಸ್ ಎಂಬ ಒಬ್ಬ ಶ್ರೀಮಂತ. ಈ ಬೆಲೇರಿಯಸ್‌ನನ್ನು ರಾಜನು ದ್ರೋಹದ ಮಿಥ್ಯಾಪಾದನೆಯ ಮೇಲೆ ರಾಜಸ್ಥಾನದಿಂದ ಗಡೀಪಾರು ಮಾಡಿದ್ದನು. ಇದಕ್ಕೆ ಪ್ರತೀಕಾರ ರೂಪವಾಗಿ ಬೆಲೇರಿಯಸ್ ರಾಜನ ಇಬ್ಬರು ಪುತ್ರರನ್ನೂ ಕದ್ದೊಯ್ದನು. ಅವರನ್ನು ಒಂದು ಕಾಡಿನಲ್ಲಿ, ತಾನು ಗುಪ್ತವಾಗಿ ವಾಸಿಸುತ್ತಿದ್ದ ಗುಹೆಯಲ್ಲೇ ಪೋಷಿಸುತ್ತಿದ್ದನು. ಆತನೇನೋ ಆ ಮಕ್ಕಳನ್ನು ಸೇಡಿನಿಂದ ಕದ್ದು ತಂದಿದ್ದರೂ, ಸ್ವಲ್ಪ ದಿನಗಳಲ್ಲೇ ಅವನಿಗೆ ಅವರ ಮೇಲೆ ಅಪಾರ ವಿಶ್ವಾಸ ಬೆಳೆಯಿತು. ತನ್ನ ಸ್ವಂತ ಮಕ್ಕಳೆಂಬಷ್ಟೇ ಪ್ರೀತಿಯಿಂದ ಅವನು ಅವರನ್ನು ಸಲಹಿದ್ದನು. ಎಚ್ಚರಿಕೆಯಿಂದ ಅವರಿಗೆ ಶಿಕ್ಷಣ ಕೊಟ್ಟಿದ್ದನು. ಹೀಗೆ ಅವರು ಸುಂದರ ತರುಣರಾಗಿ ಬೆಳೆದರು. ರಾಜವಂಶ ಸಹಜವಾಗಿದ್ದ ಅವರ ಪ್ರವೃತ್ತಿ ಅವರನ್ನು ಎಷ್ಟೋ ಧೀರ ಸಾಹಸ ಕೃತ್ಯಗಳನ್ನೆಸಗಲು ಪ್ರೇರಿಸುತ್ತಿತ್ತು. ಬೇಟೆಯಾಡಿ ಜೀವನ ಸಾಗಿಸುತ್ತಿದ್ದುದರಿಂದ ಅವರು ಬಹು ಚಟುವಟಿಕೆ ಯುಳ್ಳವರೂ, ಶ್ರಮಜೀವಿಗಳೂ ಆಗಿದ್ದರು. ಅಲ್ಲದೆ ಅವರಿಬ್ಬರೂ ಸದಾ ತಮ್ಮ ಸಾಕುತಂದೆಯನ್ನು, ತಮ್ಮನ್ನು ಯುದ್ಧಭೂಮಿಗೆ ಕಳುಹಿಸಿಕೊಡ ಬೇಕೆಂದು ಪೀಡಿಸುತ್ತಿದ್ದರು.

ಈ ತರುಣರು ವಾಸಿಸುತ್ತಿದ್ದ ಗುಹೆಗೇ ಭಾಗ್ಯವಿಶೇಷದಿಂದ ಇಮೋಜೆ‌ನ್ ಬಂದು ಸೇರಿದಳು. ಮಿಲ್‌ಫೋರ್ಡ್ ಹೇವನ್‌ನಿಂದ ರೋಂಗೆ ಪ್ರಯಾಣ ಬೆಳೆಸಲುದ್ದೇಶಿಸಿ ಹೊರಟದ್ದಾಗ, ಮಾರ್ಗದಲ್ಲಿದ್ದ ದೊಡ್ಡ ಕಾಡೊಂದರಲ್ಲಿ ಅವಳಿಗೆ ದಾರಿ ತಪ್ಪಿಹೋಯಿತು. ಆಹಾರವನ್ನು ಒದಗಿಸುವಂತಹ ಯಾವ

ಸ್ಥಳವೂ ದೊರೆಯದೆ ಆಕೆ ಹಸಿವು ಆಯಾಸಗಳಿಂದ ಬಳಲಿ ಬೆಂಡಾಗಿದ್ದಳು. ಕೇವಲ ಪುರುಷ ವೇಷವನ್ನು ಧರಿಸಿದ ಮಾತ್ರಕ್ಕೇ ಸುಖಜೀವನದಲ್ಲಿ ಬೆಳೆದ ತರುಣಿಯಿಂದ ಏಕಾಂತವಾದ ನಿಬಿಡಾರಣ್ಯಗಳಲ್ಲಿ ಪುರುಷನಂತೆ ಅಲೆಯುವುದಾದೀತೆ ?

ಈ ಗುಹೆಯನ್ನು ಕಂಡು, ಒಳಗಿದ್ದವರಿಂದಲಾದರೂ ಆಹಾರ ಸಂಪಾದಿಸಬಹುದೇನೋ ಎಂಬ ಆಶಯದಿಂದ ಅವಳು ಒಳಹೊಕ್ಕಳು. ಗುಹೆಯಲ್ಲಿ ಆಗ ಯಾರೂ ಇರಲಿಲ್ಲ. ಆದರೆ ಸುತ್ತ ಕಣ್ಣು ಹೊರಳಿಸಿದಾಗ ಒಂದೆಡೆ ಹಸಿಯ ಮಾಂಸವಿದ್ದುದು ಕಣ್ಣಿಗೆ ಬಿದ್ದಿತು. ಹಸಿವಿನ ಬಾಧೆಯನ್ನು ತಾಳಲಾರದ್ದರಿಂದ ಆಕೆ ಯಾರ ಆಹ್ವಾನಕ್ಕೂ ಕಾಯದೇ, ಆ ಕೂಡಲೇ ಕುಳಿತು ತಿನ್ನಲು ಮೊದಲಿಟ್ಟಳು. ತನಗೆ ತಾನೇ ಮಾತನಾಡಿಕೊಳ್ಳುತ್ತಾ "ಅಬ್ಬ ! ಪುರುಷ ಜೀವನ ಬಹು ಕಷ್ಟತರ. ನಾನು ಅದೆಷ್ಟು ಬಳಲಿಹೋಗಿದ್ದೇನೆ ! ಎರಡು ರಾತ್ರಿ ಬರಿಯ ನೆಲವನ್ನೇ ಹಾಸಿಗೆಯಾಗಿ ಮಾಡಿಕೊಂಡಿದ್ದೆನಲ್ಲವೆ ? ನನ್ನ ದೃಢನಿಶ್ಚಯ ಮಾತ್ರ ಒತ್ತಾಸೆಯಾಗಿ ನಿಲ್ಲದಿದ್ದಲ್ಲಿ ನಾನಿಷ್ಟು ಹೊತ್ತಿಗೆ ಅಸ್ವಸ್ಥಳಾಗಿರಬೇಕಾಗಿತ್ತು. ಪಿಸಾನಿಯೋ ಪರ್ವತಶಿಖರದೆಡೆಯಿಂದ ಇದೇ ಮಿಲ್‌ಫೋರ್ಡ್ ಹೇವನ್ ಎಂದು ನನಗೆ ತೋರಿಸಿದಾಗ ನನಗದೆಷ್ಟು ಸಮೀಪವಾಗಿ ಕಂಡಿತು !" ಎಂದುಕೊಂಡಳು. ಆಗ ಅವಳ ಮನಸ್ಸಿನಲ್ಲಿ ಪತಿಯ ಮೂರ್ತಿಯೂ ಅವನ ಕ್ರೂರ ಶಾಸನವೂ ಸುಳಿದವು. ಅವಳು "ಓ ಪೋಸ್ಚುಮಸ್, ನೀನೆಂತಹ ಮೋಸಗಾರ !" ಎಂದುಕೊಳ್ಳುತ್ತಾ ನಿಡುಸುಯ್ದಳು.

ಈ ಹೊತ್ತಿಗೆ, ಸಾಕುತಂದೆಯೊಡನೆ ಬೇಟೆಯಾಡುತ್ತಿದ್ದ ಇಮೋಜೆನಳ ಸೋದರರಿಬ್ಬರೂ ಮನೆಗೆ ಹಿಂತಿರುಗಿದರು. ಬೇಲೇರಿಯಸ್ ಅವರಿಗೆ ಪಾಲಿಡೋರ್ ಮತ್ತು ಕೇಡ್ವಾಲ್ ಎಂಬ ಹೆಸರುಗಳನ್ನು ಕೊಟ್ಟಿದ್ದನು. ಅವರಿಗೂ ಹೆಚ್ಚೇನೂ ಅರಿವಿಲ್ಲದೆ, ಬೆಲೇರಿಯಸ್‌ನನ್ನೇ ತಮ್ಮ ತಂದೆಯೆಂದು ಭಾವಿಸಿಕೊಂಡಿದ್ದರು. ಆದರೆ ಈ ರಾಜಪುತ್ರರ ನಿಜವಾದ ನಾಮಧೇಯ ಗೈಡೀಯಸ್ ಮತ್ತು ಆರ್ವಿರೇಗಸ್ ಎಂದಾಗಿದ್ದವು.

ಮೊದಲು ಬೆಲೇರಿಯಸ್ ಗುಹೆಯನ್ನು ಪ್ರವೇಶಿಸಿದನು, ಆ ಕೂಡಲೇ ಮಕ್ಕಳಿಬ್ಬರನ್ನು ತಡೆಗಟ್ಟುತ್ತಾ "ನಿಲ್ಲಿ, ನಿಲ್ಲಿ, ಒಳಗೆ ಬರದಿರಿ ; ಓ, ಅದು ನಮ್ಮ ಆಹಾರವನ್ನು ತಿನ್ನುತ್ತಿದೆ. ಇಲ್ಲದಿದ್ದರೆ ಅದೊಂದು ವನದೇವತೆಯೆಂದೇ ನಾನು ಭ್ರಮಿಸುತ್ತಿದ್ದೆ" ಎಂದನು. ತರುಣರಿಬ್ಬರೂ ಆಶ್ಚರ್ಯದಿಂದ "ಏನಾಯಿತು ತಂದೆ ?" ಎಂದು ವಿಚಾರಿಸಿದನು. ಬೆಲೇರಿಯಸ್ ಪುನಃ "ದೇವರಾಣೆ

ಈ ಗುಹೆಯಲ್ಲಿರುವುದು ಸ್ವರ್ಗಲೋಕದಿಂದ ಬಂದ ದೇವತೆಯೇ ಇರಬೇಕು, ಇಲ್ಲವೇ ಈ ಭೂವಿಯ ಅನುಪಮ ವ್ಯಕ್ತಿಯೊಂದಾಗಿರಬೇಕು" ಎಂದನು. ಇಮೋಜೆನ್ ತನ್ನ ಪುರುಷ ವೇಷದಲ್ಲಿ ಅಷ್ಟು ಸುಂದರವಾಗಿ ಶೋಭಿಸುತ್ತಿದ್ದಳು.

ಅವರ ಕಂಠಧ್ವನಿಗಳನ್ನು ಕೇಳಿ ಇಮೋಜೆನ್ ಗುಹೆಯಿಂದ ಹೊರಗೆ ಬಂದಳು. ಅವರನ್ನು ಉದ್ದೇಶಿಸಿ "ಅಯ್ಯಾ ಸತ್ಪುರುಷರೇ, ನನ್ನನ್ನು ಯಾವ ತೊಂದರೆಗೂ ಈಡುಮಾಡದಿರಿ. ಈ ನಿಮ್ಮ ಗುಹೆಯನ್ನು ಪ್ರವೇಶಿಸುವ ಮುನ್ನ, ಈಗ ನಾನು ತಿಂದಿರುವಷ್ಟನ್ನು ಬೇಡಿಯೋ ಅಥವಾ ಹಣಕ್ಕೆ ಕೊಂಡೋ ಪಡೆಯಬೇಕೆಂದೇ ನಾನು ಯೋಚಿಸಿದ್ದೆ. ಸತ್ಯವಾಗಿಯೂ ನಾನಿಲ್ಲಿ ಏನನ್ನೂ ಕದ್ದಿಲ್ಲ, ಕದಿಯಬೇಕೆಂದೂ ಇಲ್ಲ. ನೆಲದ ಮೇಲೆಲ್ಲ ಚಿನ್ನ ಹರಡಿಬಿದ್ದಿದ್ದರೂ ಸಹ ಕದಿಯುವವನಲ್ಲ ನಾನು. ಇದೋ, ನಾನು ಸೇವಿಸಿದ ಆಹಾರದ ಸಲುವಾಗಿ ಹಣ ಇಲ್ಲಿದೆ. ಊಟವಾದ ನಂತರ ಇದನ್ನು ನಾನಿಲ್ಲಿಯೇ ಇಟ್ಟು, ನನಗೆ ಆಹಾರ ಒದಗಿಸಿದವರ ಸಲುವಾಗಿ ಪ್ರಾರ್ಥನೆಗಳನ್ನೂ ಸಲ್ಲಿಸಿ ತೆರಳುವವನಿದ್ದೆ" ಎಂದಳು. ಆ ಹಣವನ್ನು ಅವರೆಲ್ಲರೂ ಏಕಕಂಠದಿಂದ ನಿರಾಕರಿಸಿದರು. ಇಮೋಜೆನ್ ವಿನಮ್ರಳಾಗಿ "ನೀವು ನನ್ನ ಮೇಲೆ ಕೋಪಗೊಂಡಂತಿದೆ. ಆದರೆ, ಅಯ್ಯಾ, ನೀವೇನಾದರೂ ನನ್ನ ತಪ್ಪಿಗಾಗಿ ನನ್ನನ್ನು ಕೊಲ್ಲುವುದಾದರೆ, ಆ ತಪ್ಪನ್ನು ಮಾಡದಿದ್ದರೂ ಸಹ ನಾನು ಸಾವನ್ನಪ್ಪಬೇಕಾಗಿದ್ದಿತೆಂಬುದನ್ನು ನೆನಪಿನಲ್ಲಿಡಿ" ಎಂದಳು.

ಬೆಲೇರಿಯಸ್ ಅವಳನ್ನು "ನೀನೆಲ್ಲಿಗೆ ಹೊರಟಿರುವೆ? ನಿನ್ನ ಹೆಸರೇನು?" ಎಂದು ಕೇಳಿದನು.

ಇಮೋಜೆನ್ "ಫಿಡೇಲೆ ಎಂಬುದು ನನ್ನ ಹೆಸರು. ನನ್ನ ಬಂಧುವೊಬ್ಬನು ಇಟಲಿಗೆ ಹೋಗಲಿದ್ದನು. ಅವನು ಮಿಲ್‌ಫೋರ್ಡ್ ಹೇವನ್‌ನಿಂದ ಪ್ರಯಾಣ ಬೆಳಸಬೇಕಾಗಿತ್ತು. ಅವನಲ್ಲಿಗೆ ಹೋಗಲು ಹೊರಟಿದ್ದ ನಾನು, ಹಸಿವಿನಿಂದ ಕಂಗೆಟ್ಟು ಈ ರೀತಿಯ ಅಪಚಾರವನ್ನೆಸಗಬೇಕಾಯಿತು" ಎಂದಳು.

ವೃದ್ಧ ಬೆಲೇರಿಯಸ್ ಆಗ "ಅಯ್ಯಾ ಚೆಲುಯುವಕ, ನಿನ್ನಲ್ಲಿ ಇದೇ ನನ್ನ ಕೋರಿಕೆ: ದಯವಿಟ್ಟು ನಮ್ಮನ್ನು ಮರ್ಯಾದೆಗೇಡಿಗಳೆಂದು ಭಾವಿಸದಿರು. ನಮ್ಮ ಈ ರೂಕ್ಷ ವಾಸಸ್ಥಾನದಿಂದ ನಮ್ಮ ಮನೋವೃತ್ತಿಯನ್ನು ಹಳಿಯದಿರು. ನೀನು ಸರಿಯಾದ ಸ್ಥಳಕ್ಕೇ ಬಂದು ಸೇರಿರುವೆ. ಈಗಾಗಲೇ

ರಾತ್ರಿಯಾಗಿದೆ. ನೀನು ಹೊರಡುವುದಕ್ಕೆ ಮೊದಲು, ಇನ್ನೂ ಉತ್ತಮವಾದ ಆಹಾರವನ್ನು ಇಲ್ಲೇ ಉಳಿದುಕೊಂಡು ಸೇವಿಸಬೇಕೆಂಬುದು ನನ್ನ ಹಾರೈಕೆ. ಮಕ್ಕಳಿರಾ, ಇವನನ್ನು ಸ್ವಾಗತಿಸಿ" ಎಂದನು.

ಆಗ ಅವಳ ಸೋದರರಿಬ್ಬರೂ ಎಷ್ಟೋ ಸೌಹಾರ್ದ ನುಡಿಗಳಿಂದ ಅವಳನ್ನು ಸ್ವಾಗತಿಸಿದರು. ಅವಳನ್ನು–ಅಥವಾ ಅವನನ್ನು–ತಮ್ಮ ಸೋದರನೆಂದೇ ಭಾವಿಸಿ ಪ್ರೀತಿಸುವುದಾಗಿ ಹೇಳಿದರು. ಆ ನಂತರ ಎಲ್ಲರೂ ಗುಹೆಯೊಳಗೆ ಹೋದರು. ಅಲ್ಲಿ, ಅವರು ಬೇಟೆಯಾಡಿ ತಂದಿದ್ದ ಜಿಂಕೆಯ ಮಾಂಸದಿಂದ ರಾತ್ರಿಯೂಟವನ್ನು ಸಿದ್ಧಗೊಳಿಸಲು ಇಮೋಜೆ೯ ಸಹಾಯ ಮಾಡಿದಳು. ಕೆಲಸದಲ್ಲಿ ಅವಳು ತೋರಿದ ಕೌಶಲ, ಅಚ್ಚುಕಟ್ಟುತನಗಳಿಂದ ಅವರಿಗೆ ಬಹು ಸಂತೋಷವಾಯಿತು. ಈಗ ಉತ್ತಮ ಕುಲದ ತರುಣಿಯರು ಪಾಕವಿದ್ಯೆಯನ್ನು ಕಲಿಯುವ ಪದ್ಧತಿಯಲ್ಲಿಲ್ಲವಾದರೂ, ಆ ಕಾಲದಲ್ಲಿ ಈ ವಿದ್ಯೆ ಅವರಲ್ಲೂ ವಾಡಿಕೆಯಲ್ಲಿದ್ದಿತು. ಇಮೋಜೆ೯ ಈ ಉಪಯುಕ್ತ ಕಲೆಯಲ್ಲಿ ನಿಷ್ಣಾತಳಾಗಿದ್ದಳು. ಸೋದರರಿಬ್ಬರೂ ಅವಳ ಈ ಕೌಶಲ್ಯ ಮತ್ತು ಶ್ರದ್ಧೆಯ ಬಗ್ಗೆ ಮೆಚ್ಚುಗೆಯಿಂದ ಮಾತನಾಡಿಕೊಂಡರು. ಪಾಲಿಡೋರ್ ಸೋದರನ ಬಳಿ "ಅಲ್ಲದೆ, ಅವನು ಗಂಧರ್ವನಂತೆ ಅದೆಷ್ಟು ಮಧುರವಾಗಿ ಹಾಡುತ್ತಾನೆ!" ಎಂದನು.

ಫಿಡೇಲಿ ಅಷ್ಟು ಮಧುರವಾಗಿ ಮುಗುಳ್ನಗುತ್ತಿದ್ದರೂ ಸಹ ಅವನ ಚೆಲುಮೊಗ ವಿಷಣ್ಣತೆಯಿಂದ ಮುಸುಕಿ ಹೋಗಿರುವುದೆಂದೂ, ದುಃಖ, ಧೃತಿಗಳೆರಡೂ ಒಟ್ಟಿಗೆ ಅವನನ್ನು ವಶಪಡಿಸಿಕೊಂಡಿವೆಯೋ ಎಂಬಂತೆ ತೋರುವುದೆಂದೂ ಆ ಸೋದರರು ಮಾತನಾಡಿಕೊಂಡರು.

ಹೀಗೆ ಅವಳ ಸುಂದರ ಗುಣಗಳಿಗಾಗಿಯೋ, ಇಲ್ಲವೇ ಅವರರಿವಿಲ್ಲದೆಯೇ ಅವರಿಗಿದ್ದ ರಕ್ತಸಂಬಂಧದಿಂದಲೋ ಇಮೋಜೆ೯ ತನ್ನ ಸೋದರರಿಗೆ ಬಹು ಅಚ್ಚುಮೆಚ್ಚಾಗಿಹೋದಳು. ಅವಳಾದರೂ ಸಹ ಅವರನ್ನು ಬಹು ಅಕ್ಕರೆಯಿಂದ ಪ್ರೀತಿಸತೊಡಗಿದಳು. ಕೆಲವೊಮ್ಮೆಯಂತೂ, ಪೋಸ್ತ್ಯುಮಸನ ನೆನಪೊಂದಿಲ್ಲದಿದ್ದರೆ, ಆ ಗುಹೆಯಲ್ಲೇ ಆ ಕಾಡಿನ ತರುಣರೊಂದಿಗೆ ಬಾಳಿ ಸಾವನ್ನಪ್ಪಬಹುದೆಂದೂ ಅವಳು ಯೋಚನೆಮಾಡಿದ್ದಳು. ಪ್ರವಾಸದ ಶ್ರಮ ಕಳೆಯಲು ಸಾಕಷ್ಟು ವಿಶ್ರಾಂತಿ ಪಡೆದು ಮುಂದೆ ಮಿಲ್‌ಫೋರ್ಡ್ ಹೇವನ್ ಹಾದಿ ಹಿಡಿಯುವವರೆಗೂ ಅವರೊಂದಿಗೇ ಇರಲು ಅವಳು ಸಂತೋಷದಿಂದ ಸಮ್ಮತಿಸಿದಳು.

ಬೇಟೆಯಾಡಿ ತಂದಿದ್ದ ಜಿಂಕೆಯ ಮಾಂಸವೆಲ್ಲಾ ಮುಗಿದಾಗ ಅವರು ಮತ್ತಷ್ಟನ್ನು ತರಲು ಹೊರಗೆ ಹೊರಟರು. ಆದರೆ ಫಿಡೇಲೆಗೆ ಅಸ್ವಸ್ಥತೆಯುಂಟಾದ್ದರಿಂದ ಅವರೊಂದಿಗೆ ಹೋಗುವುದಾಗಲಿಲ್ಲ, ಪತಿಯ ಕ್ರೂರ ನಡವಳಿಕೆಯೂ ಅಲ್ಲದೆ ಕಾಡಿನಲ್ಲಿ ಅಲೆದಾಡಿದ ಶ್ರಮವೂ ಅವಳ ಅಸ್ವಾಸ್ಥ್ಯಕ್ಕೆ ಕಾರಣವಾಗಿದ್ದಿರಬೇಕು.

ಉಳಿದ ಮೂವರು ಅವಳಿಂದ ಬೀಳ್ಕೊಂಡು ಬೇಟೆಯಾಡಲು ಹೊರಟರು. ದಾರಿಯುದ್ದಕ್ಕೂ ಅವರಲ್ಲಿ ತರುಣ ಫಿಡೇಲೆಯ ಮಾತೇ ಸಾಗಿತ್ತು. ಅವನ ಕುಶಲತೆ, ಉತ್ತಮ ಮನೋಧರ್ಮ, ಮೋಹಕ ರೀತಿನೀತಿಗಳನ್ನು ಎಷ್ಟು ಹೊಗಳಿದರೂ ಅವರಿಗೆ ಸಾಲದಾಗಿತ್ತು.

ತಾನೊಬ್ಬಳೇ ಉಳಿದುಕೊಂಡಾಗ ಇಮೋಜೆನ್ ಪಿಸಾನಿಯೋ ತನಗೆ ಕೊಟ್ಟಿದ್ದ ಔಷಧಿಯನ್ನು ಜ್ಞಾಪಿಸಿಕೊಂಡು, ಆ ಕೂಡಲೇ ಅದನ್ನು ಕುಡಿದುಬಿಟ್ಟಳು. ಸ್ವಲ್ಪಹೊತ್ತಿನಲ್ಲಿಯೇ ಸಾವನ್ನೇ ಹೋಲುವ ದೀರ್ಘನಿದ್ರೆ ಅವಳನ್ನು ಆವರಿಸಿಬಿಟ್ಟಿತು.

ಬೆಲೇರಿಯಸ್ಸನೂ, ಅವಳ ಸೋದರರೂ ಬೇಟೆಯಿಂದ ಹಿಂದಿರುಗಿದರು. ಪಾಲಿಡೋರ್ ಮೊದಲು ಗುಹೆಯನ್ನು ಪ್ರವೇಶಿಸಿದವನು ಅವಳು ನಿದ್ರಿಸುತ್ತಿರುವಳೆಂದು ಭಾವಿಸಿದನು. ಅವಳು ಎಚ್ಚರಗೊಳ್ಳದಿರುವಂತೆ ಮೃದುವಾಗಿ ನಡೆದಾಡುವ ಉದ್ದಿಶ್ಯದಿಂದ ಪಾಲಿಡೋರ್ ತನ್ನ ಭಾರವಾದ ಪಾದರಕ್ಷೆಗಳನ್ನು ಕಳಚಿಟ್ಟನು. ಪರಿಶುದ್ಧವಾದ ವಾತ್ಸಲ್ಯ ಈ ವನ್ಯ ರಾಜಪುತ್ರರಲ್ಲಿ ಅಷ್ಟರಮಟ್ಟಿಗೆ ಚಿಗುರಿತ್ತು; ಆದರೆ, ಸ್ವಲ್ಪಹೊತ್ತಿನಲ್ಲಿಯೇ ಯಾವ ಶಬ್ದವೂ ಅವಳನ್ನು ಎಚ್ಚರಗೊಳಿಸಲಾರದೆಂದು ಅವನಿಗೆ ಕಂಡುಬಂದಿತು. ಅವಳು ಸತ್ತಿರಬೇಕೆಂದವನು ತೀರ್ಮಾನಿಸಿಬಿಟ್ಟನು. ಅದರಿಂದ ಪಾಲಿಡೋರ್‌ಗೆ ಉಂಟಾದ ದುಃಖ ಅವರ್ಣನೀಯ. ಶೈಶವ್ಯದಿಂದಲೂ ಅವಳನ್ನು ಅಗಲಿರದೆ ಸೋದರನಂತೆಯೇ ಅವನು ಅವಳಿಗಾಗಿ ಗೋಳಾಡಿದನು.

ಬೆಲೇರಿಯಸ್ಸನೂ, ಅವಳನ್ನು ಹೊರಗೆ ಕಾಡಿಗೊಯ್ದು, ಆಗಿನ ಪದ್ಧತಿಯಂತೆ ಗಾನ, ಪವಿತ್ರ ಶೋಕಗೀತೆಗಳೊಂದಿಗೆ ಅಂತ್ಯಸಂಸ್ಕಾರ ನಡೆಸಲು ನಿಶ್ಚಯಿಸಿದನು.

ಇಮೋಜೆನಳ ಸೋದರರಿಬ್ಬರೂ ಅವಳನ್ನು ತಂಪಾದ ನೆರಳಿನ ಪ್ರದೇಶಕ್ಕೊಯ್ದರು. ಅಲ್ಲಿ ಅವಳನ್ನು ಮೃದುವಾದ ಹುಲ್ಲಿನಮೇಲೆಮಲಗಿಸಿ, ಅಗಲಿದ ಅವಳ ಆತ್ಮಕ್ಕೆ ಶಾಂತಿಯನ್ನು ಕೋರಿ ಹಾಡಿದರು. ಹೂಗಳಿಂದಲೂ

ಎಲೆಗಳಿಂದಲೂ ಅವಳನ್ನು ಮುಚ್ಚಿ ಪಾಲಿಡೋರ್ "ಫಿಡೇಲೆ, ಬೇಸಿಗೆ ಇದ್ದು, ನಾನಿಲ್ಲಿ ಬದುಕಿರುವವರೆಗೂ ನಿನ್ನ ಗೋರಿಯಮೇಲೆ ಪ್ರತಿದಿನ ಹೂಗಳನ್ನು ಹರಡುತ್ತೇನೆ. ನಿನ್ನ ಮುಖವನ್ನೇ ಬಹುಮಟ್ಟಿಗೆ ಹೋಲುವ ಗೌರಪುಷ್ಪ, ನಿನ್ನ ಶುದ್ಧ ಧಮನಿಗಳಂತಹವೇ ಆದ ನೀಲಪುಷ್ಪ, ನಿನ್ನ ಉಸಿರಿಗಿಂತ ಮಧುರವಲ್ಲದ ಕಾಡುಗುಲಾಬಿ ಇವುಗಳೆಲ್ಲವನ್ನೂ ನಿನ್ನಮೇಲೆ ಹರಡುತ್ತೇನೆ. ಚಳಿಗಾಲದಲ್ಲಿ ಈ ನಿನ್ನ ಶವದಮೇಲೆ ಹರಡಲು ಯಾವ ಹೂವುಗಳೂ ಇಲ್ಲದಿರುವಾಗ, ತುಪ್ಪಟದಂತಿರುವ ಶೈವಲವನ್ನೇ ಹರಡುತ್ತೇನೆ" ಎಂದನು.

ಹೀಗೆ ಅವಳ ಅಂತ್ಯಸಂಸ್ಕಾರದ ಕರ್ಮಗಳನ್ನೆಲ್ಲಾ ಮುಗಿಸಿದಮೇಲೆ ಅವರು ಅಪಾರ ವ್ಯಥೆಯನ್ನು ಹೃದಯದಲ್ಲಿ ಹೊತ್ತು ಹಿಂತಿರುಗಿಹೋದರು.

ಸ್ವಲ್ಪ ಹೊತ್ತಿನಲ್ಲೇ ಔಷಧಿಯ ಗುಣದಿಂದ ವಿಮುಕ್ತಳಾದುದರಿಂದ ಇಮೋಜೆನ್ ಎಚ್ಚರಗೊಂಡಳು. ತನ್ನಮೇಲೆ ಅವರು ಹರಡಿದ್ದ ಎಲೆ, ಹೂಗಳ ಹಗುರಾದ ಹೊದ್ದಿಕೆಯನ್ನು ಸುಲಭವಾಗಿ ಕೊಡವಿಕೊಂಡು ಅವಳು ಮೇಲೆದ್ದಳು. ಸುತ್ತಲೂ ನೋಡಿದಾಗ ಅವಳಿಗೆ ದಿಗ್ಭ್ರಮೆಯುಂಟಾಯಿತು. ಇದೇನು ಕನಸೋ ಎಂದುಕೊಳ್ಳುತ್ತಾ ಅವಳು—"ನಾನೊಂದು ಗುಹೆಯ ನಿವಾಸಿಯಾಗಿದ್ದು, ಅಕ್ಕರೆಯ ವ್ಯಕ್ತಿಗಳಿಗೆ ಅಡಿಗೆಮಾಡಿ ಹಾಕುತ್ತಿದ್ದೆನೆಂದು ನಾನು ಭಾವಿಸಿದ್ದೆನಲ್ಲ! ನಾನಿಲ್ಲಿಗೆ ಈ ರೀತಿ ಹೂಗಳಿಂದ ಆವೃತವಾಗಿ ಬಂದಿರುವುದೆಂತು?" ಎಂದು ಆಶ್ಚರ್ಯಪಟ್ಟಳು. ಪುನಃ ಗವಿಗೆ ಹಿಂತಿರುಗುವುದು ಅವಳಿಗೆ ದುಸ್ಸಾಧ್ಯವಾಯಿತು. ತನ್ನ ಹೊಸ ಒಡನಾಡಿಗಳ ಯಾವ ಸುಳಿವೂ ಅವಳಿಗೆ ಸಿಕ್ಕಲಿಲ್ಲ. ಇದರಿಂದ ಅವಳು ತಾನು ಕಂಡುದೆಲ್ಲಾ ಕನಸೇ ಆಗಿರಬೇಕೆಂದು ತೀರ್ಮಾನಿಸಬೇಕಾಯಿತು. ಮತ್ತೊಮ್ಮೆ ಇಮೋಜೆನ್ ಕೊನೆಗಾದರೂ ಮಿಲ್‌ಫೋರ್ಡ್ ಹೇವನ್‌ನ ಸರಿಯಾದ ಹಾದಿ ಹಿಡಿದು ಅಲ್ಲಿಂದ ಇಟಲಿಗೆ ಹೋಗಲಿರುವ ಯಾವುದಾದರೊಂದು ಹಡಗಿನಲ್ಲಿ ಪ್ರಯಾಣ ಬೆಳಸಬೇಕೆಂದು ಉದ್ದೇಶಿಸಿದಳು. ತನ್ನ ಪ್ರಯಾಸದ ಪಯಣವನ್ನು ಕೈಗೊಂಡಳು. ಇನ್ನೂ ಅವಳ ಮನಸ್ಸು ಪತಿಯಲ್ಲೇ ನಿಮಗ್ನವಾಗಿತ್ತು. ಸೇವಕನ ವೇಷದಲ್ಲಿ ಅವನನ್ನು ಹುಡುಕಬೇಕೆಂದು ಅವಳು ನಿಶ್ಚಯಿಸಿದಳು.

ಆದರೆ ಈ ಹೊತ್ತಿಗೆ ಇಮೋಜೆನಳ ಅರಿವಿಗೇ ನಿಲುಕದಂತಹ ಮಹಾ ಘಟನೆಗಳು ದೇಶದಲ್ಲಿ ರೂಪುಗೊಳ್ಳುತ್ತಿದ್ದವು. ರೋಮನ್ ಚಕ್ರಾಧಿಪತಿ ಆಗಸ್ಟಸ್ ಸೀಸರನಿಗೂ ಬ್ರಿಟನ್ನಿನ ರಾಜ ಸಿಂಬಲೈನನಿಗೂ ಯುದ್ಧ ಮೊದಲಿಟ್ಟಿತ್ತು. ಬ್ರಿಟನ್ನಿಗೆ ಮುತ್ತಿಗೆ ಹಾಕಲು ರೋಮನ್ ಸೈನ್ಯವೊಂದು

ಬಂದಿಳಿದಿತ್ತು. ಈ ಸೈನ್ಯ ಇಮೋಜೆ೯ ಪ್ರಯಾಣಮಾಡುತ್ತಿದ್ದ ಕಾಡಿನ ಮೇಲೆಯೇ ಹಾಯ್ದು ಬಂದಿತು. ಈ ಸೈನ್ಯದಲ್ಲಿಯೇ ಪೋಸ್ತ್ಯುಮಸನೂ ಇದ್ದನು.

ಪೋಸ್ತ್ಯುಮಸ್ ರೋಮನ್ ಸೈನ್ಯದೊಡನೆ ಬ್ರಿಟನ್ನಿಗೆ ಬಂದರೂ ಸಹ, ಮಾತೃಭೂಮಿಯ ಮೇಲೆ ಯುದ್ಧ ಮಾಡಬೇಕೆಂಬುದು ಅವನ ಉದ್ದಿಶ್ಯವಾಗಿರಲಿಲ್ಲ. ಅವನು ಬ್ರಿಟನ್ನಿನ ಸೈನ್ಯಸೇರಿ, ತನ್ನನ್ನು ದೇಶಭ್ರಷ್ಟನನ್ನಾಗಿ ಮಾಡಿದ್ದ ರಾಜನ ಪರವಾಗಿಯೇ ಯುದ್ಧ ಮಾಡಲು ಇಚ್ಛಿಸಿದ್ದನು. ಅವನಿನ್ನೂ ಇಮೋಜೆ೯ ಅಪರಾಧಿ ಎಂಬ ಭಾವನೆಯಲ್ಲೇ ತೊಳಲಾಡುತ್ತಿದ್ದನು. ಆದರೂ ಸಹ, ತನಗೆ ಅಷ್ಟು ಪ್ರೇಮಪಾತ್ರಳಾಗಿದ್ದ ಆವಳ ಸಾವು ತನ್ನಿಂದಲೇ ಸಂಘಟಿಸಿತೆಂಬ ಭಾವನೆ ಅವನ ಹೃದಯವನ್ನು ಹಿಂಡುತ್ತಿತ್ತು. (ಪಿಸಾನಿಯೋ ತಾನು ಪೋಸ್ತ್ಯುಮಸನ ಆಜ್ಞೆಯನ್ನು ಪಾಲಿಸಿರುವುದಾಗಿಯೂ, ಇಮೋಜೆ೯ ಇನ್ನಿಲ್ಲವೆಂದೂ ಬರೆದು ತಿಳಿಸಿಬಿಟ್ಟಿದ್ದನು) ದುಃಖಿಯಾಗಿದ್ದ ಪೋಸ್ತ್ಯುಮಸ್ ಬ್ರಿಟನ್ನಿಗೆ ಹಿಂತಿರುಗಿ ಯುದ್ಧದಲ್ಲಿ ಸಾವನ್ನಪ್ಪುವುದರಿಂದಲೋ ಇಲ್ಲವೇ ದೇಶಭ್ರಷ್ಟನಾಗಿದ್ದೂ ಹಿಂತಿರುಗಿದ್ದಕ್ಕೆ ರಾಜನಿಂದ ಮರಣದಂಡನೆಗೆ ಒಳಗಾಗುವುದರಿಂದಲೋ ತನ್ನ ಬಾಳನ್ನು ಕೊನೆಗಾಣಿಸಿಕೊಳ್ಳಲು ಬಯಸಿಬಂದಿದ್ದನು.

ಇಮೋಜೆ೯ ಮಿಲ್‌ಫೋರ್ಡ್ ಹೇವನ್‌ಗೆ ತಲಪುವ ಮೊದಲೇ ರೋಮನ್ ಸೈನ್ಯಕ್ಕೆ ಸಿಕ್ಕಿಬಿದ್ದಳು. ಅಲ್ಲಿ ಅವಳ ಸ್ವರೂಪ, ನಡವಳಿಕೆಗಳಿಗೆ ಬಹು ಮೆಚ್ಚುಗೆ ದೊರೆತದ್ದರಿಂದ ಅವಳು ರೋಮನ್ ಸೇನಾನಿ ಲ್ಯೂಸಿಯಸನ ಸೇವಕನಾಗಿ ನಿಯಮಿತಳಾದಳು.

ಸಿಂಬಿಲೈನನ ಸೈನ್ಯ ಶತ್ರುವನ್ನು ಎದುರಿಸಲು ಮುನ್ನುಗ್ಗಿತು. ಸೈನ್ಯ ಅರಣ್ಯವನ್ನು ಪ್ರವೇಶಿಸಿದಾಗ, ಪಾಲಿಡೋರ್ ಮತ್ತು ಕೇಡ್ವಾಲ್ ಅದರೊಂದಿಗೆ ಸೇರಿಕೊಂಡರು. ಮೊದಲಿನಿಂದಲೂ ಅವರಿಬ್ಬರೂ ಸಾಹಸ ಕಾರ್ಯಗಳಲ್ಲಿ ಭಾಗಿಯಾಗಲು ಕಾತುರಪಡುತ್ತಿದ್ದವರು. ಆದರೀಗ ತಮ್ಮ ತಂದೆಯ ಪರವಾಗಿಯೇ ತಾವು ಯುದ್ಧ ಮಾಡಲಿರುವೆವೆಂಬ ಅರಿವು ಅವರಿಗಿರಲಿಲ್ಲ. ವೃದ್ಧ ಬೆಲೇರಿಯಸನೂ ಅವರೊಂದಿಗೆ ಯುದ್ಧಭೂಮಿಗೆ ಹೊರಟಿದ್ದನು. ರಾಜಪುತ್ರರನ್ನು ಕದ್ದೊಯ್ದು ತಾನು ರಾಜನಿಗೆಸಗಿದ್ದ ಅಪಚಾರಕ್ಕಾಗಿ ಅವನು ಎಷ್ಟೋ ದಿನಗಳಿಂದ ಪಶ್ಚಾತ್ತಾಪ ಪಡುತ್ತಿದ್ದನು. ಈಗ ಅದೇ ರಾಜನಿಗಾಗಿ ಯುದ್ಧಮಾಡುವ ಸಲುವಾಗಿ, ತಾರುಣ್ಯದಲ್ಲಿ ಉತ್ತಮ ಯೋಧನಾಗಿದ್ದ ಈ ವೃದ್ಧ ಸಂತೋಷದಿಂದ ಹೊರಟನು.

ಉಭಯ ಸೈನ್ಯಗಳಿಗೂ ಪ್ರಚಂಡ ಯುದ್ಧ ಪ್ರಾರಂಭವಾಯಿತು. ಅದರಲ್ಲಿ ಪೋಸ್ತ್ಯುಮಸ್, ಬೆಲೇರಿಯಸ್ ಮತ್ತು ಸೆಂಬಿಲೈನನ ಇಬ್ಬರು ಪುತ್ರರು, ಇಷ್ಟು ಮಂದಿ ತೋರಿದ ಸಾಹಸ, ಅದ್ಭುತ ಪರಾಕ್ರಮದ ಸಲುವಾಗಿ ಯಲ್ಲದಿದ್ದರೆ ಬ್ರಿಟಿಷರು ಸೋಲಬೇಕಾಗುತ್ತಿತ್ತು. ಸ್ವತಃ ಸಿಂಬಿಲೈನ್ ಮರಣಕ್ಕೊಳಗಾಗಬೇಕಾಗುತ್ತಿತ್ತು. ಆದರೆ ಇವರು ರಾಜನನ್ನು ಬಿಡುಗಡೆ ಮಾಡಿ ಅವನ ಪ್ರಾಣರಕ್ಷಣೆ ಮಾಡಿದ್ದೇ ಅಲ್ಲದೆ ಆ ದಿನದ ಅದೃಷ್ಟಗತಿಯನ್ನೇ ಬದಲಾಯಿಸಿ ಬ್ರಿಟಿಷರಿಗೆ ವಿಜಯವನ್ನು ದೊರಕಿಸಿದರು. ಆದರೆ ಪೋಸ್ತ್ಯುಮಸನಿಗೆ ಯುದ್ಧದಲ್ಲಿ ಅವನು ಬಯಸಿದ್ದ ಸಾವು ಮಾತ್ರ ದೊರೆಯ ಲಿಲ್ಲ. ಆದ್ದರಿಂದ ಅವನು ತಾನಾಗಿಯೇ ತೆರಳಿ ಸಿಂಬಿಲೈನನ ಅಧಿಕಾರಿಗಳ ಲ್ಲೊಬ್ಬನಿಗೆ ಕೈಸೆರೆ ಸಿಕ್ಕಿಬಿದ್ದನು. ದೇಶಭ್ರಷ್ಟನಾಗಿಯೂ ಹಿಂತಿರುಗಿದ್ದರಿಂದ ಮರಣದಂಡನೆ ವಿಧಿಸಲ್ಪಟ್ಟು ಸಾಯಬೇಕೆಂಬುದೇ ಅವನ ಆಕಾಂಕ್ಷೆಯಾಗಿತ್ತು. ಇಮೋಜೆ಼ನ್ ಮತ್ತು ಅವಳಿಂದ ಸೇವೆ ಸಲ್ಲಿಸಿಕೊಳ್ಳುತ್ತಿದ್ದ ರೋಮನ್ ಸೇನಾನಿ ಇಬ್ಬರೂ ಬಂದಿಗಳಾಗಿ ಸಿಂಬಿಲೈನನ ಎದುರಿಗೆ ಕರೆತರಲ್ಪಟ್ಟರು. ಇಮೋಜೆ಼ನಳ ಹಳೆಯ ದ್ವೇಷಿಯಾದ ಇಯಾಕಿಮೋ ಸಹ ರೋಮನ್ ಸೈನ್ಯದಲ್ಲಿ ಅಧಿಕಾರಿಯಾಗಿದ್ದುದರಿಂದ ಸೆರೆಯಾಳಾಗಿ ರಾಜನೆದುರು ಅವನನ್ನೂ ನಿಲ್ಲಿಸಲಾಗಿತ್ತು. ಈ ಎಲ್ಲ ಬಂದಿಗಳು ರಾಜನೆದುರು ನಿಂತಿದ್ದಾಗ ಪೋಸ್ತ್ಯುಮಸ ನನ್ನೂ ಮರಣದಂಡನೆ ವಿಧಿಸಲು ಅಲ್ಲಿಗೆ ಕರೆತಂದರು. ಈ ವಿಚಿತ್ರವಾದ ಸಂಧಿಕಾಲದಲ್ಲೇ, ಬೆಲೇರಿಯಸ್ಸನೂ, ಪಾಲಿಡೋರ್ ಮತ್ತು ಕೇಡ್ವಾಲರೂ ತಮ್ಮ ಧೈರ್ಯಸಾಹಸಗಳಿಂದ ರಾಜನಿಗೆ ಸಲ್ಲಿಸಿದ್ದ ಅಮೋಘ ಸೇವೆಗಾಗಿ ಬಹುಮಾನ ಸ್ವೀಕಾರ ಮಾಡಲು ಅಲ್ಲಿಗೆ ಬಂದರು. ರಾಜನ ಪರಿವಾರದಲ್ಲಿ ದ್ದುದರಿಂದ ಪಿಸಾನಿಯೋ ಸಹ ಅಲ್ಲಿಯೇ ಇದ್ದನು.

ಹೀಗೆ, ರಾಜನ ಸನ್ನಿಧಿಯಲ್ಲಿ ಆಗ ಒಟ್ಟಿಗೆ ಸೇರಿದ್ದರೂ, ತೀರಾ ಭಿನ್ನವಾದ ಆಕಾಂಕ್ಷೆ, ಭೀತಿಗಳೊಡಗೂಡಿ ನಿಂತಿದ್ದವರು ಇಷ್ಟು ಜನ: ಪೋಸ್ತ್ಯುಮಸ್ ಮತ್ತು ರೋಮನ್ ಸೇನಾನಿಯೊಂದಿಗಿದ್ದ ಇಮೋಜೆ಼ನ್, ಇತ್ತ ಪ್ರಾಮಾಣಿಕ ಅನುಚರನಾದ ಪಿಸಾನಿಯೋ, ಅತ್ತ ವಿಶ್ವಾಸದ್ರೋಹ ಬಗೆದ ಇಯಾಕಿಮೋ; ಸಿಂಬಿಲೈನನ ಕಳೆದು ಹೋಗಿದ್ದ ಪುತ್ರರು ಹಾಗೂ ಅವರನ್ನು ಕದ್ದೊಯ್ದಿದ್ದ ಬೆಲೇರಿಯಸ್.

ಇಷ್ಟು ಜನರಲ್ಲಿ ಮೊದಲು ಮಾತನಾಡಿದವನು ರೋಮನ್ ಸೇನಾನಿ.

ಉಳಿದವರೆಲ್ಲ ರಾಜನೆದುರು ಮೌನಧರಿಸಿ ನಿಂತಿದ್ದರೂ ಸಹ, ಅವರಲ್ಲಿ ಎಷ್ಟೋ ಹೃದಯಗಳು ವೇಗವಾಗಿ ಮಿಡಿಯುತ್ತಿದ್ದವು.

ಇಮೋಜೆ‌ರ್ನ ಪೋಸ್ತ್ಯುಮಸನನ್ನು ನೋಡಿದಳು. ಆತ ರೈತನ ವೇಷದಲ್ಲಿದ್ದರೂ ಅವನನ್ನು ಗುರುತಿಸಿದಳು. ಆದರೆ ಅವನು ಪುರುಷವೇಷದಲ್ಲಿದ್ದ ಅವಳನ್ನು ಗುರುತಿಸಲಿಲ್ಲ. ಇಮೋಜೆ‌ರ್ನ ಇಯಾಕಿಮೋನನ್ನೂ ಗುರುತಿಸಿದಳು. ಅಲ್ಲದೆ ಅವನ ಕೈ ಬೆರಳಿನಲ್ಲಿದ್ದ ತನ್ನ ಉಂಗುರವನ್ನೂ ಕಂಡಳು. ಅದು ತನ್ನದೇ ಎಂಬುದರಲ್ಲಿ ಅವಳಿಗೆ ಸಂಶಯ ಉಂಟಾಗಲಿಲ್ಲ. ಆದರೆ ತನ್ನ ಸಂಕಷ್ಟಗಳಿಗೆಲ್ಲಾ ಇಯಾಕಿಮೋ ಕರ್ತೃವೆಂಬುದನ್ನು ಅವಳು ಅರಿತಿರಲಿಲ್ಲ. ಇಮೋಜೆ‌ರ್ನ ಸ್ವಂತ ತಂದೆಯೆದುರು ಬಂದಿಯಾಗಿ ನಿಂತಿದ್ದಳು.

ಅವಳನ್ನು ಪುರುಷವೇಷ ಧರಿಸುವಂತೆ ಮಾಡಿದ್ದ ಪಿಸಾನಿಯೋ ಇಮೋಜೆ‌ರ್ನಳನ್ನು ಗುರುತಿಸಿದ್ದನು. ಅವನು "ಈಕೆ ನನ್ನೊಡತಿ; ಅವಳು ಈವರೆಗೆ ಜೀವಿಸಿರುವುದಂತೂ ವಿದಿತವಾಗಿದೆ; ಮುಂದೆ ಏನಾದರಾಗಲಿ; ಒಳಿತಾದರೂ ಸರಿ, ಕೆಡುಕಾದರೂ ಸರಿ" ಎಂದುಕೊಂಡನು. ಬೆಲೇರಿಯಸನೂ ಅವಳನ್ನು ಗುರುತಿಸಿ, ಮೆಲುದನಿಯಲ್ಲಿ ಕೇಡ್ವಾಲನೊಂದಿಗೆ "ಈ ತರುಣ ಸಾವಿನಿಂದ ಪುನರುಜ್ಜೀವಗೊಂಡಂತಿದೆ!" ಎಂದು ನುಡಿದನು. ಕೇಡ್ವಾಲ್ "ಸತ್ಯವಾಗಿ, ಈ ಚೆಲುಗುಲಾಬಿಯಂತಹ ಯುವಕ ಮೃತನಾದಾ ಫಿಡೇಲಿಯನ್ನು ಹೋಲುವಂತೆ ಒಂದು ಮರಳಿನ ಕಣ ಸಹ ಇನ್ನೊಂದನ್ನು ಹೋಲುವುದಿಲ್ಲ" ಎಂದನು. "ಅದೇ ಮೃತ ಸ್ವರೂಪ ಬದುಕಿ ಬಂದಿದೆ" ಎಂದನು ಪಾಲಿಡೋರ್. ಬೆಲೇರಿಯಸ್ "ಶ್! ಶ್! ಅವನೇ ಇವನಾಗಿದ್ದರೆ ಖಂಡಿತವಾಗಿ ನಮ್ಮನ್ನು ಮಾತನಾಡಿಸುತ್ತಿರಲಿಲ್ಲವೆ?" ಎಂದನು. ಪಾಲಿಡೋರ್ ಪುನಃ "ಆದರವನು ಸತ್ತುದನ್ನು ನಾವು ನೋಡಿದೆವಲ್ಲ" ಎಂದು ಪಿಸುಗುಟ್ಟಿದನು. "ಸುಮ್ಮನಿರಿ, ಸುಮ್ಮನಿರಿ" ಎಂದನು ಬೆಲೇರಿಯಸ್.

ಪೋಸ್ತ್ಯುಮಸ್ ಮೌನ ತಳೆದು, ತನಗೆ ಬಹು ಸುಖಕರವೆಂದೆನಿಸುತ್ತಿದ್ದ ಮರಣದಂಡನೆಯ ತೀರ್ಪನ್ನೇ ಕಾಯುತ್ತಾ ನಿಂತಿದ್ದನು. ರಾಜನ ಪ್ರಾಣವನ್ನು ತಾನು ಉಳಿಸಿದೆನೆಂಬುದು ಹೊರಬಿದ್ದರೆ ಸಿಂಬಿಲೈನ್ ಎಲ್ಲಿ ಮನಕರಗಿ ತನ್ನನ್ನು ಕ್ಷಮಿಸಿಬಿಡುವನೋ ಎಂಬ ಭೀತಿಯಿಂದ ಅವನು ಅದನ್ನು ತಿಳಿಯಪಡಿಸಲೇ ಇಲ್ಲ.

ಹಿಂದೆಯೇ ಹೇಳಿದಂತೆ, ಈಗ ಇಮೋಜೆ‌ರ್ನಳ ರಕ್ಷಕನಾಗಿದ್ದ ರೋಮನ್ ಸೇನಾನಿ ಲ್ಯೂಸಿಯಸನೇ ರಾಜನೊಂದಿಗೆ ಮೊದಲು ಮಾತನಾಡಿದವನು.

ಆತ ಅಮಿತ ಪರಾಕ್ರಮಿಯೂ, ಧೀರ ಗಂಭೀರ ಸ್ವಭಾವದವನೂ ಆಗಿದ್ದನು. ರಾಜನನ್ನು ಕುರಿತು ಅವನು "ನೀನು ನಿನ್ನ ಬಂದಿಗಳಿಗೆ ಪರಿಹಾರ ಧನ ಸ್ವೀಕರಿಸದೆ, ಅವರನ್ನೆಲ್ಲಾ ಮರಣದಂಡನೆಗೊಳಪಡಿಸುವೆಯೆಂದು ನಾನು ಕೇಳಿದ್ದೇನೆ. ರೋಮನ್ನನಾಗಿರುವ ನಾನು, ರೋಮನ್ ಹೃದಯದಿಂದಲೇ ಸಾವನ್ನಪ್ಪುತ್ತೇನೆ. ಆದರೆ ನಿನ್ನಲ್ಲಿ ನನ್ನ ಬೇಡಿಕೆಯೊಂದಿದೆ" ಎಂದು ಹೇಳುತ್ತಾ, ಇಮೋಜೆನ್‌ಳನ್ನು ರಾಜನ ಮುಂದೆ ಕರೆತಂದು ನಿಲ್ಲಿಸಿ ಮುಂದು ವರಿಸಿದನು—"ಈ ತರುಣ ಬ್ರಿಟನ್ನಿನಲ್ಲಿ ಜನಿಸಿದವನು. ಇವನ ಸಲುವಾಗಿ ಪರಿಹಾರ ದ್ರವ್ಯವನ್ನು ನೀನು ಸ್ವೀಕರಿಸು. ಈತ ನನ್ನ ಸೇವಕ. ಹಿಂದೆ ಯಾವ ಒಡೆಯನಿಗೂ ಇಷ್ಟು ಗುಣಸಂಪನ್ನನಾದ ಸೇವಕನಿದ್ದಿರಲಿಲ್ಲವೆಂದು ನಾನು ಖಂಡಿತವಾಗಿ ಹೇಳಬಲ್ಲೆ. ಇಷ್ಟೊಂದು ಸ್ನೇಹಪರತೆ, ಕರ್ತವ್ಯ ಪರಾಯಣತೆಗಳೂ ಪ್ರಾಮಾಣಿಕ ಸೇವಾತತ್ಪರತೆಯೂ ಯಾರಲ್ಲಿಯೂ ಇರ ಲಾರದು. ರೋಮನ್‌ನೊಬ್ಬನಿಗೆ ಇವನು ಸೇವೆಸಲ್ಲಿಸಿದ್ದರೂ ಸಹ, ಬ್ರಿಟನ್ನಿಗೆ ಯಾವ ಅಪಚಾರವೂ ಇವನಿಂದ ನಡೆದಿಲ್ಲ. ನೀನು ಇನ್ನಾರನ್ನು ಉಳಿಸದಿದ್ದರೂ ಚಿಂತೆಯಿಲ್ಲ, ಇವನೊಬ್ಬನನ್ನು ಮಾತ್ರ ರಕ್ಷಿಸು ಎಂದನು.

ಸಿಂಬಿಲೈನ್ ಮಗಳನ್ನು ದೃಷ್ಟಿಸಿ ನೋಡಿದನು. ಆ ಛದ್ಮವೇಷದಲ್ಲಿ ಅವನಿಗೆ ಅವಳ ಗುರುತಾಗಲಿಲ್ಲ. ಆದರೆ ಸರ್ವಶಕ್ತವಾದ ನಿಸರ್ಗ ಅವನ ಹೃದಯದಲ್ಲಿ ಮಿಡಿದಿರಬೇಕು. ಎಂತಲೇ ಅವನು "ಸತ್ಯವಾಗಿಯೂ ನಾನಿವನನ್ನು ಹಿಂದೆ ನೋಡಿದ್ದೇನೆಂದು ಭಾಸವಾಗುತ್ತಿದೆ. ಈ ಮುಖ ನನಗೆ ಚಿರಪರಿಚಿತವಾಗಿ ತೋರುತ್ತಿದೆ. ಅಯ್ಯಾ ತರುಣ, ನಾನು ಏತಕ್ಕೆ, ಯಾವುದ ರಿಂದ ನಿನ್ನನ್ನು 'ಬದುಕು' ಎಂದು ಹೇಳುತ್ತಿರುವೆನೋ ನಾನರಿಯೆ. ಆದರೂ ನಾನು ನಿನಗೆ ಜೀವದಾನ ಮಾಡುವುದಂತೂ ಖಂಡಿತ. ಇದರೊಂದಿಗೆ ನಿನಗೆ ಬೇಕಾದ ಯಾವ ವರವನ್ನಾದರೂ ಕೇಳು, ಕೊಡುತ್ತೇನೆ. ನನ್ನ ಬಳಿ ಯಿರುವ ಅತಿ ಪ್ರಮುಖ ಬಂದಿಯ ಜೀವವನ್ನು ನೀನು ಬೇಡಿದರೂ ಸಹ ಕೊಡಲು ಸಿದ್ಧನಿದ್ದೇನೆ" ಎಂದನು.

"ಪ್ರಭುಗಳಿಗೆ ನನ್ನ ಅನಂತಾನಂತ ವಿನೀತ ವಂದನೆಗಳನ್ನು ಅರ್ಪಿಸು ತ್ತೇನೆ" ಎಂದಳು ಇಮೋಜೆನ್. ಆ ಕಾಲದಲ್ಲಿ ವರಪ್ರದಾನವೆಂದು ಹೇಳಿದರೆ ವಾಗ್ದಾನಕ್ಕೇ ಸಮನೆನಿಸಿತ್ತು. ಆ ಅನುಗ್ರಹಕ್ಕೆ ಪಾತ್ರರಾದವರು ಏನನ್ನು ಬೇಡಿದರೂ ಅದನ್ನು ಸಲ್ಲಿಸುವುದು ಪವಿತ್ರ ಪ್ರತಿಜ್ಞೆಯೆನಿಸುತ್ತಿತ್ತು. ಆದ್ದರಿಂದ ಅಲ್ಲಿದ್ದವರೆಲ್ಲ ಈ ಸೇವಕ ಯಾವ ವರವನ್ನು ಬೇಡುವನೋ ಎಂದು ಕಾತರ

ಗೊಂಡರು. ಅವಳೊಡೆಯ ಲ್ಯೂಸಿಯಸ್ ಇಮೋಜೆಳನ್ನು ಕುರಿತು "ಬಾಲಕ, ನಾನೇನೋ ನನ್ನ ಪ್ರಾಣವನ್ನು ಬೇಡುವುದಿಲ್ಲ. ಆದರೆ ನೀನ ದನ್ನೇ ಕೇಳಲಿರುವೆಯೆಂದು ನಾನು ಬಲ್ಲೆ" ಎಂದನು. "ಇಲ್ಲ ಇಲ್ಲ! ಒಡೆಯ, ನನ್ನ ಮನಸ್ಸಿನಲ್ಲಿರುವುದು ಬೇರೆ, ನಿಮ್ಮ ಪ್ರಾಣವನ್ನು ನಾನು ಬೇಡಲಾರೆ" ಎಂದಳು ಇಮೋಜೆ.

ತರುಣನಲ್ಲಿ ಕಂಡುಬಂದ ಈ ಕೃತಜ್ಞತೆಯ ಅಭಾವ ರೋಮನ್ ಸೇನಾನಿಯನ್ನು ಬೆರಗುಗೊಳಿಸಿತು.

ಇಮೋಜೆಳ ದೃಷ್ಟಿ ಇಯಾಕಿಮೋನಲ್ಲಿ ನೆಟ್ಟುಹೋಗಿತ್ತು. ಇಯಾಕಿಮೋ ತನ್ನ ಬೆರಳಿನಲ್ಲಿದ್ದ ಉಂಗುರವನ್ನು ಹೇಗೆ ಪಡೆದುಕೊಂಡ ನೆಂಬುದನ್ನು ಸಂಪೂರ್ಣವಾಗಿ ತಿಳಿಯಪಡಿಸಬೇಕೆಂಬುದೇ ಇಮೋಜೆ ಬೇಡಿದ ವರವಾಯಿತು.

ಸಿಂಬಿಲೈನ್ ಅವಳಿಗೀ ವರಪ್ರದಾನ ಮಾಡಿದನು. ಇಯಾಕಿಮೋ ಆ ಉಂಗುರದ ವಿಷಯವನ್ನು ಆಮೂಲಾಗ್ರವಾಗಿ ತಿಳಿಯಪಡಿಸದಿದ್ದಲ್ಲಿ ಚಿತ್ರಹಿಂಸೆಗೆ ಗುರಿಪಡಿಸುವುದಾಗಿ ರಾಜನು ಅವನನ್ನು ಬೆದರಿಸಿದನು.

ಆಗ ಇಯಾಕಿಮೋ ತನ್ನ ನೀಚಕಾರ್ಯಗಳೆಲ್ಲವನ್ನೂ ಸಂಪೂರ್ಣ ವಾಗಿ ನಿವೇದಿಸಿದನು. ನಾವು ಹಿಂದೆಯೇ ಹೇಳಿರುವಂತೆ, ತಾನು ಪೊಸ್ತ್ಯುಮಸನಲ್ಲಿ ಪಣ ತೊಟ್ಟಿದ್ದನ್ನೂ, ಕೊನೆಗೆ ಅವನನ್ನು ನಂಬಿಸಿ ಮೋಸ ಗೊಳಿಸಿದ್ದನ್ನೂ ತಿಳಿಸಿದನು.

ಪ್ರೇಯಸಿಯ ನಿರ್ದೋಷಿತ್ವದ ಬಗ್ಗೆ ಈ ನಿದರ್ಶನ ದೊರೆತಾಗ ಪೋಸ್ತ್ಯುಮಸ್ ಎಂತಹ ಭಾವನೆಗಳಿಗೆ ಸಿಲುಕಿದನೆಂಬುದನ್ನು ವರ್ಣಿಸುವುದು ಅಸಾಧ್ಯ. ಆ ಕೂಡಲೇ ಅವನು ಮುಂದೆ ಬಂದು, ತಾನು ರಾಜಪುತ್ರಿಯ ಮೇಲೆ ವಿಧಿಸಿದ್ದ ಕ್ರೂರ ದಂಡನೆಯನ್ನು ಸಿಂಬಿಲೈನನಿಗೆ ತಿಳಿಯಪಡಿಸಿದನು. ಹುಚ್ಚನಂತೆ "ಅಯ್ಯೋ, ಇಮೋಜೆ! ನನ್ನ ರಾಣಿಯೇ, ನನ್ನ ಪ್ರಾಣ ಪದಕವೇ, ಇಮೋಜೆ, ಇಮೋಜೆ" ಎಂದು ಪ್ರಲಾಪಿಸಿದನು.

ಇಮೋಜೆ ತನ್ನ ಪ್ರೇಮದ ಪತಿಯನ್ನು ಈ ದುಸ್ಥಿತಿಯಲ್ಲಿ ನೋಡ ಲಾರದೆಹೋದಳು. ಆ ಕೂಡಲೇ ಅವಳು ತನ್ನ ನಿಜರೂಪವನ್ನು ವ್ಯಕ್ತ ಪಡಿಸಿ, ಪೋಸ್ತ್ಯುಮಸನಿಗೆ ಅನಿರ್ವಚನೀಯ ಆನಂದವನ್ನುಂಟುಮಾಡಿದಳು. ಹೀಗೆ ಪೋಸ್ತ್ಯುಮಸ್ ಅಪರಾಧದ ಕಳಂಕ ಮತ್ತು ಕೊರಗಿನಿಂದ ಬಿಡುಗಡೆ

ಹೊಂದಿದನು. ತಾನು ಅಷ್ಟು ಕ್ರೂರವಾಗಿ ನಡೆಸಿಕೊಂಡಿದ್ದ ಪತ್ನಿಯ ಅನುಗ್ರಹಕ್ಕೂ ಹಿಂದಿನಂತೆಯೇ ಪಾತ್ರನಾದನು.

ಕಳೆದುಹೋಗಿದ್ದ ಮಗಳನ್ನು ಈ ವಿಲಕ್ಷಣ ರೀತಿಯಲ್ಲಿ ಮತ್ತೆ ಪಡೆದ ಸಿಂಬಿಲೈನ್ ಅಷ್ಟೇ ಮಟ್ಟಿನ ಆನಂದಾತಿರೇಕವನ್ನು ಅನುಭವಿಸಿದನು. ಮೊದಲಿನ ಪಿತೃಪ್ರೇಮದಿಂದಲೇ ಮಗಳನ್ನು ಆದರಿಸಿದನು. ಅಲ್ಲದೆ ಅವಳ ಪತಿ ಪೋಸ್ಥ್ಯುಮಸನಿಗೆ ಜೀವದಾನ ಮಾಡಿ ಅವನನ್ನು ಅಳಿಯನೆಂದು ಅಂಗೀಕರಿಸಲೂ ಸಹ ಸಮ್ಮತಿಸಿದನು.

ಬೆಲೇರಿಯಸ್ ಈ ಸಂತೋಷದ ಸಮಯದಲ್ಲೇ ತಾನು ಮಾಡಿದ್ದ ತಪ್ಪನ್ನು ಸರಿಪಡಿಸಲು ಮುಂದೆಬಂದನು. ಪಾಲಿಡೋರ್ ಮತ್ತು ಕೇಡ್ವಾಲರನ್ನು ರಾಜನೆದುರು ಕರೆತಂದು, ಅವರೇ ಕಳೆದುಹೋಗಿದ್ದ ರಾಜಪುತ್ರರಾದ ಗೈಡಿರಿಯಸ್ ಮತ್ತು ಆರ್ವಿರೇಗಸ್ ಎಂದು ಹೇಳಿ ರಾಜನಿಗೆ ಒಪ್ಪಿಸಿದನು.

ಸಿಂಬಿಲೈನ್ ವೃದ್ಧ ಬೆಲೇರಿಯಸನನ್ನು ಕ್ಷಮಿಸಿಬಿಟ್ಟನು. ಯಾರು ತಾನೇ ಅಂತಹ ಅಭೂತಪೂರ್ವ ಆನಂದದ ಸಮಯದಲ್ಲಿ ಶಿಕ್ಷೆ ವಿಧಿಸುವ ಯೋಚನೆ ಮಾಡಬಹುದು? ರಾಜಪುತ್ರಿ ಬದುಕಿದ್ದಳು. ಕಳೆದುಹೋಗಿದ್ದ ರಾಜಪುತ್ರರು ದೊರಕಿದ್ದೇ ಅಲ್ಲದೆ, ತನ್ನ ಪರವಾಗಿ ಅನುಪಮ ಸಾಹಸದಿಂದ ತನ್ನ ಕಣ್ಣೆದುರಿನಲ್ಲೇ ಹೋರಾಡಿ ತನ್ನ ಪ್ರಾಣ ರಕ್ಷಣೆ ಮಾಡಿದ್ದರು. ಇದಕ್ಕಿಂತ ಸಿಂಬಿಲೈನನಿಗೆ ಅನಿರೀಕ್ಷಿತ ಆನಂದ ಉಂಟೆ?

ಇಮೋಜೆನ್ ಈಗ ತನ್ನ ಹಳೆಯ ಒಡೆಯನಾದ ರೋಮನ್ ಸೇನಾನಿ ಲ್ಯೂಸಿಯಸನಿಗೆ ಸೇವೆ ಸಲ್ಲಿಸಬಹುದಾಯಿತು. ಅವಳ ತಂದೆ ಅವಳ ಕೋರಿಕೆಯ ಮೇರೆಗೆ ಸೇನಾನಿಯು ಪ್ರಾಣದಾನ ಮಾಡಲು ಮನಃಪೂರ್ವಕವಾಗಿ ಸಮ್ಮತಿಸಿದನು. ಅಲ್ಲದೇ ಇದೇ ಲ್ಯೂಸಿಯಸನ ಮಧ್ಯಸ್ಥಿಕೆಯಿಂದ ರೋಮ್ ಮತ್ತು ಬ್ರಿಟನ್ ನಡುವೆ ಶಾಂತಿ ಸಂಧಾನ ನಡೆದು ಒಡಂಬಡಿಕೆಯಾಯಿತು. ಈ ರೀತಿಯಲ್ಲಿ ಸ್ಥಾಪಿತವಾದ ಶಾಂತಿ ಹಲವಾರು ವರ್ಷಗಳವರೆಗೂ ಅವಿಚಲಿತವಾಗಿದ್ದಿತು.

ಈ ಸುಖಾಂತದ ಉಪಸಂಹಾರದ ನಡುವೆ ಬರಬಾರದ ಕೆಲವು ದುರಂತ ಘಟನೆಗಳೆಂದರೆ ಸಿಂಬಿಲೈನನ ದುರುಳ ರಾಣಿಯು ಮತ್ತು ಅವಳ ಮಗ ಮೂಢ ಕ್ಲಾಟನನ ಮರಣ. ರಾಣಿ ತನ್ನ ಹಂಚಿಕೆಗಳು ಕೈಗೂಡದ್ದರಿಂದಲೂ, ಅಂತರಂಗದ ಪಶ್ಚಾತ್ತಾಪದ ಕೊರಗಿನಿಂದಲೂ ಅಸ್ವಸ್ಥಳಾದಳು. ಮಗ

ಕ್ಲಾಟನ್ ಸ್ವಪ್ರೇರಿತವಾದ ಕದನವೊಂದರಲ್ಲಿ ಮೃತಿಯನ್ನೈದಿದ್ದನ್ನು ನೋಡುವ ವರೆಗೂ ಆಕೆ ಬದುಕಿದ್ದು ನಂತರ ಸತ್ತಳು. ಇದರ ಬಗ್ಗೆ ಹೆಚ್ಚು ವಿಚಾರ ಅನವಶ್ಯಕ.

ಅರ್ಹರಾದವರೆಲ್ಲಾ ಸುಖವನ್ನು ಪಡೆದರೆಂಬುದಷ್ಟೇ ನಮಗೆ ಸಾಕು. ದ್ರೋಹಿಯಾದ ಇಯಾಕಿಮೋ ಸಹ, ಅವನ ನೀಚತನ ಗುರಿ ಮುಟ್ಟದಿದ್ದುದರ ಪರಿಣಾಮವಾಗಿ ಶಿಕ್ಷೆಯಿಲ್ಲದೆಯೇ ಬಿಡುಗಡೆ ಹೊಂದಿದನು.

# ಪೆರಿಕ್ಲಿಸ್

ಟೈರಿನ ರಾಜಕುವರ ಪೆರಿಕ್ಲಿಸನು ಹಿಂದೊಮ್ಮೆ ಗ್ರೀಸಿನ ದುರುಳ ಚಕ್ರವರ್ತಿ ಆಂಟಿಯೋಕಸನು ಗುಪ್ತವಾಗಿ ನಡೆಸಿದ್ದ ಭೀಕರ ಕೃತ್ಯವೊಂದನ್ನು ಬಯಲು ಮಾಡಿಬಿಟ್ಟಿದ್ದನು. ಇದರ ಪರಿಣಾಮವಾಗಿ, ಆ ಚಕ್ರವರ್ತಿ ಪ್ರತೀಕಾರ ರೂಪವಾಗಿ ಟೈರ್ ಪಟ್ಟಣಕ್ಕೂ ಅದರ ಪ್ರಜೆಗಳಿಗೂ ಘೋರ ಆಪತ್ತುಗಳನ್ನು ತಂದೊಡ್ಡುವುದಾಗಿ ಬೆದರಿಕೆ ತೋರಿಸಿದನು. ದೊಡ್ಡ ವ್ಯಕ್ತಿಗಳ ರಹಸ್ಯಾಪಚಾರವನ್ನು ಕೆದಕುವುದು ಯಾವಾಗಲೂ ಅಪಾಯಕರವಷ್ಟೆ? ಅಂತೆಯೇ ಈ ಅಪಾಯದಿಂದ ತಪ್ಪಿಸಿಕೊಳ್ಳಲು ಪೆರಿಕ್ಲಿಸ್ ತಾನಾಗಿಯೇ ರಾಜ್ಯಕೋಶಗಳನ್ನು ತೊರೆದು ಹೊರಡಬೇಕಾಯಿತು. ಆತ ರಾಜ್ಯಾಡಳಿತವನ್ನು ದಕ್ಷನೂ ಪ್ರಾಮಾಣಿಕನೂ ಆದ ಸಚಿವ ಹೆಲಿಕೇನಸನ ಕೈಗೊಪ್ಪಿಸಿದನು. ಪ್ರಬಲನಾದ ಆಂಟಿಯೋಕಸನ ಕ್ರೋಧ ಶಮನವಾಗುವವರೆಗೂ ಕಣ್ಣಿಗೆ ಬೀಳದಿರುವ ಉದ್ದಿಶ್ಯದಿಂದ ಟೈರ್ ಪಟ್ಟಣದಿಂದ ಸಮುದ್ರಯಾನ ಬೆಳಸಿದನು.

ರಾಜಕುವರನು ಮೊದಲು ಟಾರ್ಸಸ್ ಪಟ್ಟಣದೆಡೆಗೆ ಹೆಜ್ಜೆ ತಿರುಗಿಸಿದನು. ಆ ವೇಳೆಯಲ್ಲಿ ಟಾರ್ಸಸ್ ಪಟ್ಟಣವು ತೀವ್ರ ಕ್ಷಾಮಗೊಳಗಾಗಿದ್ದಿತೆಂದು ಕೇಳಿ ಅವನು ಅದರ ನೆರವಿಗಾಗಿ ತನ್ನೊಂದಿಗೆ ದವಸ–ಧಾನ್ಯಗಳನ್ನು ಕೊಂಡೊಯ್ದನು. ಅಲ್ಲಿಗೆ ಬಂದು ಸೇರಿದಾಗ, ಆ ಪಟ್ಟಣ ಬಹು ದುಸ್ಥಿತಿಯಲ್ಲಿದ್ದುದೇ ಆತನಿಗೆ ಕಂಡುಬಂದಿತು. ಅನಿರೀಕ್ಷಿತ ನೆರವಿನೊಂದಿಗೆ ದೇವದೂತನಂತೆ ಬಂದ ಪೆರಿಕ್ಲಿಸನನ್ನು ಟಾರ್ಸಸಿನ ಅಧಿಪತಿ ಕ್ಲಿಯಾನ್ ಅನಂತ ವಂದನೆಗಳೊಡನೆ ಸ್ವಾಗತಿಸಿದನು. ಆದರೆ ಪೆರಿಕ್ಲಿಸ್ ಅಲ್ಲಿ ನಿಂತು ಬಹಳ ದಿನಗಳಾಗಿರಲಿಲ್ಲ. ಆಗಲೇ ಅವನ ಸ್ವಾಮಿಭಕ್ತ ಮಂತ್ರಿಯಿಂದ ಪತ್ರ ಬಂದು, ಆಂಟಿಯೋಕಸ್ ಅವನ ವಾಸಸ್ಥಾನವನ್ನು ಗೊತ್ತುಹಚ್ಚಿರುವನೆಂದೂ, ಅವನ ಪ್ರಾಣಹರಣಕ್ಕಾಗಿ ಗುಪ್ತ ಬೇಹುಗಾರರನ್ನು ನಿಯಮಿಸಿರುವನೆಂದೂ

ಸುದ್ದಿ ತಿಳಿಸಿತು. ಅವನಿನ್ನು ಟಾರ್ಸಸಿನಲ್ಲಿ ಉಳಿದಿರುವುದು ಕ್ಷೇಮಕರವಲ್ಲವೆಂದು ಎಚ್ಚರಿಸಿತು. ಆದ್ದರಿಂದ ಪತ್ರ ಸೇರಿದ ಕೂಡಲೇ ಪೆರಿಕ್ಲಿಸ್ ಹೊರಡಲುದ್ಯುಕ್ತನಾದನು. ತನ್ನ ಉದಾರತೆಯಿಂದ ತಣಿಸಲ್ಪಟ್ಟಿದ್ದ ಆ ಜನತೆಯ ಶುಭಾಕಾಂಕ್ಷೆ ಮತ್ತು ಪ್ರಾರ್ಥನೆಗಳೊಳಗೂಡಿ ಪೆರಿಕ್ಲಿಸ್ ಪುನಃ ಸಮುದ್ರದ ಮೇಲೆ ಪ್ರಯಾಣ ಬೆಳೆಸಿದನು.

ಹಡಗಿನಲ್ಲಿ ಸ್ವಲ್ಪ ದೂರ ಸಾಗಿದ್ದಾಗಲೇ, ದೊಡ್ಡದೊಂದು ಬಿರುಗಾಳಿ ಎದ್ದಿತು. ಪೆರಿಕ್ಲಿಸನನ್ನುಳಿದು ಹಡಗಿನಲ್ಲಿದ್ದವರೆಲ್ಲ ನಾಶವಾದರು. ಪೆರಿಕ್ಲಿಸ್ ಮಾತ್ರ ಸಾಗರದಲೆಗಳಿಂದ ಅಜ್ಞಾತವಾದ ತೀರಪ್ರದೇಶವೊಂದಕ್ಕೆ ತಳ್ಳಲ್ಪಟ್ಟನು. ಸ್ವಲ್ಪ ಹೊತ್ತು ಅಲ್ಲಿಯೇ ಅಲೆದಾಡುತ್ತಿದ್ದಾಗ ಅವನು ಕೆಲವು ಮಂದಿ ಬಡಬೆಸ್ತರನ್ನು ಸಂಧಿಸಿದನು. ಅವರು ಆತನನ್ನು ತಮ್ಮ ಮನೆಗೆ ಆಮಂತ್ರಿಸಿ, ಊಟ ಉಡಿಗೆಗಳನ್ನು ಒದಗಿಸಿದರು. ಆ ಬೆಸ್ತರಿಂದಲೇ ಆತನು ಆ ದೇಶದ ವಿಷಯುಗಳೆಲ್ಲವನ್ನೂ ಅರಿತುಕೊಂಡನು. ಅವರು ತಮ್ಮ ದೇಶದ ಹೆಸರು ಪೆಂಟಾಪೊಲಿಸ್ ಎಂದೂ, ಅಲ್ಲಿನ ರಾಜ ಸೈಮೊನೈಡ್ಸ್ ಎಂಬುವನು ಶಾಂತಿಯುತವಾದ ಉತ್ತಮ ರಾಜ್ಯಭಾರ ನಡೆಸುತ್ತಿದ್ದುದರಿಂದ ಎಲ್ಲರೂ ಆತನನ್ನು 'ಉತ್ತಮ ಸೈಮೊನೈಡ್ಸ್' ಎಂದು ಕರೆಯುವರೆಂದೂ ತಿಳಿಸಿದರು. ಈ ರಾಜ ಸೈಮೊನೈಡ್ಸನಿಗೆ ಅತಿಚೆಲುವೆಯಾದೊಬ್ಬ ಮಗಳಿರುವಳೆಂದೂ, ಮರುದಿನ ಅವಳ ವರ್ಧಂತಿ ಮಹೋತ್ಸವ ನಡೆಯಲಿರುವುದೆಂದೂ ಪೆರಿಕ್ಲಿಸನಿಗೆ ತಿಳಿಯಬಂದಿತು. ಆ ದಿನದಂದು ರಾಜಸ್ಥಾನದಲ್ಲಿ ದೊಡ್ಡದೊಂದು ಕ್ರೀಡಾ ಸ್ಪರ್ಧೆ ಏರ್ಪಾಡಾಗಿತ್ತು. ಸುಂದರ ರಾಜಪುತ್ರಿ ಥಯಾಸಾಳ ಪ್ರೇಮವನ್ನು ಗಳಿಸುವ ಸಲುವಾಗಿ ತಮ್ಮ ತಮ್ಮ ಕೈಚಳಕವನ್ನು ಪ್ರದರ್ಶಿಸಲು ದೇಶದೇಶಗಳಿಂದ ಅನೇಕ ರಾಜಪುತ್ರರೂ, ಶೂರಪುರಷರೂ ಬಂದಿಳಿದಿದ್ದರು. ಇವನ್ನೆಲ್ಲ ಕೇಳಿದಾಗ ನಮ್ಮ ರಾಜಕುವರ ಶ್ರೇಷ್ಠವಾದ ತನ್ನ ಆಯುಧಗಳನ್ನು ಸಮುದ್ರದಲ್ಲಿ ಕಳೆದುಕೊಂಡುದಕ್ಕಾಗಿ ಮನಸ್ಸಿನಲ್ಲಿಯೇ ಬಹು ವ್ಯಥೆಪಟ್ಟನು. ಇಷ್ಟರಲ್ಲಿಯೇ ಅಲ್ಲಿಗೆ ಮತ್ತೊಬ್ಬ ಬೆಸ್ತನ ಆಗಮನವಾಯಿತು. ಆತ ಸಮುದ್ರದಲ್ಲಿ ಮೀನು-ಬಲೆಯೊಡ್ಡಿದಾಗ ಅದರೊಳಗೆ ಸಿಕ್ಕಿಕೊಂಡಿತೆಂದು ಹೇಳಿ ತಾನು ತಂದಿದ್ದ ಹಲವಾರು ಆಯುಧ ಸಾಮಗ್ರಿಗಳನ್ನು ತಂದೊಪ್ಪಿಸಿದನು. ಅದು ಬೇರಾವುದೂ ಆಗಿರದೆ ತಾನು ಕಳೆದುಕೊಂಡ ಆಯುಧದ ಜೋಡಿಯೇ ಎಂದರಿತಾಗ ಪೆರಿಕ್ಲಿಸನಿಗುಂಟಾದ ಆನಂದವನ್ನು ಹೇಳಬೇಕೆ! ಪೆರಿಕ್ಲಿಸ್ ಅವನ್ನೇ ನೋಡುತ್ತಾ "ಅದೃಷ್ಟವೇ, ನಿನಗೆ ಅನಂತಾನಂತ ವಂದನೆಗಳು!

ನನಗುಂಟಾದ ಆಪತ್ತುಗಳೆಲ್ಲವನ್ನು ಮರೆಸಲೋ ಎಂಬಂತೆ ನೀನಿದನ್ನು ನನಗೆ ನೀಡುತ್ತಿರುವೆ. ಈ ಆಯುಧ ನನ್ನ ಪ್ರೇಮಪಾತ್ರ ತಂದೆಯಿಂದ ನನಗೆ ಬಂದಿರುವ ಬಳುವಳಿ. ಆತನ ಪ್ರೇಮದ ಸಲುವಾಗಿಯೇ ಇದು ನನಗೆ ಅಷ್ಟು ಅಚ್ಚುಮೆಚ್ಚಾಗಿತ್ತು, ನಾನೆಲ್ಲಿ ಹೋದರಲ್ಲಿ ಇದನ್ನು ಕೊಂಡೊಯ್ಯುತ್ತಿದ್ದೆ. ನನ್ನಿಂದ ಇದನ್ನು ಅಗಲಿಸಿದ ಕ್ರೂರಸಾಗರವೇ ಈಗ ಪ್ರಶಾಂತವಾಗಿ ನನಗಿದನ್ನು ಹಿಂತಿರುಗಿಸಿದೆಯಲ್ಲವೆ? ಇದಕ್ಕಾಗಿ ಆ ಸಾಗರವನ್ನು ನಾನು ವಂದಿಸುತ್ತೇನೆ; ನನ್ನ ತಂದೆ ನನಗಿತ್ತಿದ್ದ ಈ ಬಳುವಳಿ ಪುನಃ ದೊರೆತಿರುವುದರಿಂದ, ಆ ನೌಕಾಘಾತವನ್ನು ನಾನೊಂದು ದುರದೃಷ್ಟವೆಂದು ಪರಿಗಣಿಸುವುದೇ ಇಲ್ಲ" ಎಂದನು.

ಮರುದಿನ ಪೆರಿಕ್ಲಿಸ್ ಧೀರನಾದ ತನ್ನ ತಂದೆಯ ಆಯುಧಗಳನ್ನು ಧರಿಸಿ ಸೈಮೊನೈಡ್ಸ್‌ನ ರಾಜಾಸ್ಥಾನಕ್ಕೆ ಹೊರಟನು. ಅಲ್ಲಿನ ಕ್ರೀಡಾ ಸ್ಪರ್ಧೆಗಳಲ್ಲಿ ಆತ ನಡೆಸಿದ ಚಮತ್ಕಾರಗಳೆಲ್ಲ ಅದ್ಭುತವಾಗಿದ್ದವು. ಇದರ ಫಲವಾಗಿಯೇ ಅವನು ಅಲ್ಲಿ ತನ್ನೊಂದಿಗೆ ಥಯಸಾಳ ಪ್ರೇಮಾಕಾಂಕ್ಷಿಗಳಾಗಿ ಸೆಣಸಾಡಿದ ಎಲ್ಲ ಧೀರಪುರುಷರನ್ನೂ, ಶೂರ ರಾಜಪುತ್ರರನ್ನೂ ಸುಲಭವಾಗಿ ಸೋಲಿಸಿಬಿಟ್ಟನು. ಆ ಕಾಲದಲ್ಲಿ ಧೀರಯೋಧರು ರಾಜಪುತ್ರಿಯರ ಪ್ರೇಮಗಳಿಸುವ ಸಲುವಾಗಿ ರಾಜಾಸ್ಥಾನದ ಕ್ರೀಡಾಸ್ಪರ್ಧೆಗಳಲ್ಲಿ ಸ್ಪರ್ಧಿಸುವುದು ಪದ್ಧತಿಯಾಗಿದ್ದಿತು. ಅಂತೆಯೇ ಈ ಕ್ರೀಡಾಸ್ಪರ್ಧೆಗಳಲ್ಲಿ, ಯಾರಾದರೊಬ್ಬ ಶೂರ ಉಳಿದವರೆಲ್ಲರನ್ನೂ ಏಕಾಕಿಯಾಗಿ ಸೋಲಿಸಿ ಮೆರೆದಲ್ಲಿ, ಈ ಎಲ್ಲ ಸಾಹಸಕೃತ್ಯಗಳ ಪ್ರೇರಕ ಶಕ್ತಿಯಾಗಿದ್ದ ಶ್ರೇಷ್ಠ ರಮಣಿ ತನ್ನೆಲ್ಲ ಗೌರವಾದರಗಳನ್ನು ಆ ಶೂರಾಗ್ರಣಿಗೆ ಸಲ್ಲಿಸುವುದೂ ಪದ್ಧತಿಯಾಗಿದ್ದಿತು. ರಾಜಪುತ್ರಿ ಥಯಸಾ ಸಹ ಈ ಪದ್ಧತಿಯನ್ನು ದೂರಮಾಡಲಿಲ್ಲ. ಆಕೆ ಪೆರಿಕ್ಲಿಸನಿಂದ ಸೋಲಿಸಲ್ಪಟ್ಟ ಉಳಿದೆಲ್ಲ ರಾಜಪುತ್ರರನ್ನೂ ಶೂರಪುರುಷರನ್ನೂ ಕಡೆಗಣಿಸಿ, ಪೆರಿಕ್ಲಿಸನನ್ನೇ ಪ್ರತ್ಯೇಕ ಆದರ ಗೌರವಗಳಿಂದ ಮನ್ನಿಸಿ, ಆತನಿಗೆ ವಿಜಯಮಾಲಿಕೆಯನ್ನು ಅರ್ಪಿಸಿದಳು. ಪೆರಿಕ್ಲಿಸ್, ಈ ಸುಂದರ ರಾಜಪುತ್ರಿಯ ಮೇಲೆ ತನ್ನ ದೃಷ್ಟಿ ಬಿದ್ದ ಕ್ಷಣದಿಂದಲೇ ಅವಳಲ್ಲಿ ಗಾಢಾನುರಕ್ತನಾಗಿ ಹೋಗಿದ್ದನು.

ಉತ್ತಮ ಸೈಮೊನೈಡ್ಸ್ ಬಹು ವಿದ್ಯಾಪರಿಣತನೂ, ಉತ್ತಮ ಕಲಾಕೋವಿದನೂ ಆದ ಪೆರಿಕ್ಲಿಸನ ಧೈರ್ಯಶೌರ್ಯಗಳನ್ನೂ ಮತ್ತಿತರ ಶ್ರೇಷ್ಠ

ಗುಣಗಳನ್ನೂ ಬಹುವಾಗಿ ಮೆಚ್ಚಿಕೊಂಡನು. ಪೆರಿಕ್ಲಿಸ್ ಆಂಟಿಯೋಕಸನ ಭಯದಿಂದ ತನ್ನ ನಿಜ ನಾಮಧೇಯವನ್ನು ಮರೆಸಿ, ತಾನು ಟೈರ್‌ಪಟ್ಟಣದ ಗಣ್ಯ ಪುರುಷನೊಬ್ಬನೆಂದು ಮಾತ್ರ ಹೇಳಿಕೊಂಡಿದ್ದನು. ಇಷ್ಟಾದರೂ, ರಾಜಪುರುಷನಾದ ಈ ಅಪರಿಚಿತನ ಪದವಿಯ ಅರಿವೇ ತನಗಿಲ್ಲದಿದ್ದರೂ ಸಹ, ಸೈಮೊನೈಡ್ಸ್ ತನ್ನ ಮಗಳ ಪ್ರೇಮಕಟಾಕ್ಷವು ದೃಢವಾಗಿ ಈತನಲ್ಲಿ ನಾಟಿರುವುದನ್ನು ಕಂಡಾಗ, ಧೀರ ಪೆರಿಕ್ಲಿಸನನ್ನು ತನ್ನ ಅಳಿಯನನ್ನಾಗಿ ಅಂಗೀಕರಿಸಲು ಹಿಂದೆಗೆಯಲಿಲ್ಲ.

ಪೆರಿಕ್ಲಿಸ್ ಥಯಸಾಳನ್ನು ಮದುವೆಯಾಗಿ ಬಹು ದಿನಗಳು ಕಳೆಯುವ ಮುನ್ನವೇ ಅವನ ಶತ್ರು ಆಂಟಿಯೋಕಸ್ ಸತ್ತುಹೋದನೆಂಬ ಸುದ್ದಿ ಬಂದಿತು. ಅದರೊಂದಿಗೇ ಟೈರ್‌ಪಟ್ಟಣದಲ್ಲಿದ್ದ ಅವನ ಪ್ರಜೆಗಳೆಲ್ಲ ಪೆರಿಕ್ಲಿಸನ ದೀರ್ಘ ನಿರ್ಗಮನದಿಂದ ಬೇಸತ್ತು ದಂಗೆಯೇಳುವುದಾಗಿ ಬೆದರಿಸುತ್ತಿರುವು ದಲ್ಲದೆ, ತೆರವಾಗಿದ್ದ ಸಿಂಹಾಸನದ ಮೇಲೆ ಮಂತ್ರಿ ಹೆಲಿಕೇನಸನನ್ನು ಕೂರಿ ಸುವ ಮಾತನ್ನಾಡುವರೆಂದೂ ತಿಳಿಯಬಂದಿತು. ಈ ವಾರ್ತೆ ಬೇರಾರಿಂದಲೂ ಅಲ್ಲದೆ ಸ್ವತಃ ಹೆಲಿಕೇನಸನಿಂದಲೇ ಪೆರಿಕ್ಲಿಸನ ಕಿವಿ ಮುಟ್ಟಿತು. ಆತ ತನ್ನ ರಸನಿಗೆ ದ್ರೋಹ ಬಗೆಯಲಿಚ್ಛಿಸದ ಸ್ವಾಮಿಭಕ್ತ ಪ್ರಜೆಯಾಗಿದ್ದನು. ಆದ್ದ ರಿಂದಲೇ ತನಗವರು ನೀಡಲಿದ್ದ ಗೌರವವನ್ನು ನಿರಾಕರಿಸಿ, ಪೆರಿಕ್ಲಿಸನು ಅವರ ಉದ್ದೇಶವನ್ನರಿತು ಸ್ವದೇಶಕ್ಕೆ ಹಿಂತಿರುಗಿ ತನ್ನ ಅಧಿಕಾರವನ್ನು ವಹಿಸಕೊಳ್ಳ ಲೆಂದು ಬಯಸಿ ಆತನಿಗೆ ಸುದ್ದಿ ಕಳುಹಿಸಿದನು. ತನ್ನ ಅಳಿಯ ಗೂಢ ವೀರಾ ಗ್ರಣಿಯೆಂದು, ಪ್ರಸಿದ್ಧವಾದ ಟೈರಿನ ರಾಜಕುವರನೆಂದು ಅರಿತ ಸೈಮೊನೈಡ್ಸ್ ಆನಂದಾಶ್ಚರ್ಯಗಳಿಗೆ ಮಿತಿಯೇ ಇರಲಿಲ್ಲ! ಆದರೆ ಆತ ಮರುಕ್ಷಣದಲ್ಲಿ, ತಾನೆಣಿಸಿದ್ದಂತೆ ಸಾಮಾನ್ಯ ಪುರುಷನೇ ಆಗಲಿಲ್ಲವೇಕೆಂದು ಹಂಬಲಿಸತೊಡಗಿ ದನು. ಏಕೆಂದರೆ ಈಗ ಅವನು ತನ್ನ ಮೆಚ್ಚುಗೆಯ ಅಳಿಯನಿಂದ ಮಾತ್ರ ವಲ್ಲದೆ, ಯಾರನ್ನು ಸಮುದ್ರ ಪ್ರಯಾಣದ ಆಪತ್ತುಗಳಿಗೊಳಪಡಿಸಲು ತಾನು ಹೆದರುತ್ತಿದ್ದನೋ ಆ ಪ್ರೇಮದ ಪುತ್ರಿಯಿಂದಲೂ ಅಗಲಬೇಕಾದುದು ಅನಿ ವಾರ್ಯವಾಯಿತು. ಪೆರಿಕ್ಲಿಸನೇನೋ ಸ್ವತಃ ಪತ್ನಿಯನ್ನು ಅವಳ ತಂದೆಯ ಬಳಿಯಲ್ಲಿ ಬಿಟ್ಟುಹೋಗಲು ಸಿದ್ಧನಿದ್ದನು. ಆದರೆ ಆಕೆ ಪತಿಯೊಂದಿಗೆ ಹೋಗಲೇಬೇಕೆಂದು ಬಹು ಉತ್ಕಂಠಿತಳಾಗಿ ಬಯಸಿದ್ದರಿಂದ, ನಿರ್ವಾಹ ವಿಲ್ಲದೆ ಅವರು ಒಪ್ಪಬೇಕಾಯಿತು. ಶೀಘ್ರದಲ್ಲೇ ದಂಪತಿಗಳು ಟೈರ್ ಪಟ್ಟಣ ವನ್ನು ಸೇರಲೆಂಬ ಹಾರೈಕೆ ಎಲ್ಲರಲ್ಲೂ ಮೂಡಿತು.

ನಿರ್ಭಾಗ್ಯ ಪೆರಿಕ್ಲಿಸನ ಮಟ್ಟಿಗೆ ಸಾಗರ ಸ್ನೇಹಪರ ವಸ್ತುವಾಗಿರಲಿಲ್ಲ; ಅವರು ಟೈರ್‌ನಗರವನ್ನು ಸೇರುವುದಕ್ಕೆ ಬಹು ಮುನ್ನವೇ ಇನ್ನೊಂದು ಭಯಂಕರ ಬಿರುಗಾಳಿ ಎದ್ದುಬಿಟ್ಟಿತು. ಅದರಿಂದ ಅತಿ ಭೀತಿಗೊಂಡ ಥಯಸಾ ವ್ಯಾಧಿಗ್ರಸ್ತಳಾದಳು. ಸ್ವಲ್ಪ ಹೊತ್ತಿನಲ್ಲೇ ಆಕೆಯ ದಾದಿ ಲೈಕಾರ್ಡಿಯಾ ಚಿಕ್ಕಮಗುವನ್ನೊಂದೆತ್ತಿಕೊಂಡು ಪೆರಿಕ್ಲಿಸನೆಡೆಗೆ ಬಂದು ಆತನ ರಾಣಿ ಶಿಶು ಜನನವಾದ ಮರುಕ್ಷಣದಲ್ಲೇ ಮೃತಳಾದಳೆಂದು ತಿಳಿಸಿದಳು. ಮಗುವನ್ನು ತಂದೆಯೆದುರು ಹಿಡಿಯುತ್ತಾ, ಲೈಕಾರ್ಡಿಯಾ, "ಇಂತಹ ಸ್ಥಳಕ್ಕೆ ಸರಿಯೆನಿಸದ ಅತಿ ಚಿಕ್ಕ ಮಗುವಿದು. ಮೃತಳಾದ ನಿಮ್ಮ ರಾಣಿಯ ಮಗು" ಎಂದಳು. ಪತ್ನಿ ಮೃತಳಾದಳೆಂದು ಕೇಳಿದ ಪೆರಿಕ್ಲಿಸನ ಅವಸ್ಥೆಯನ್ನು ಯಾವ ನಾಲಿಗೆ ತಾನೇ ವರ್ಣಿಸಬಲ್ಲುದು? ಯಾತನೆಯನ್ನು ಮಾತಿನ ಮೂಲಕ ಹೊರಗೆ ಹಾಕಲು ಸಾಧ್ಯವೆಂದೆನಿಸಿದೊಡನೆಯೇ ಅವನು–"ಅಯ್ಯೋ ದೇವತೆಗಳೇ! ನಿಮ್ಮ ಶ್ರೇಷ್ಠ ವಸ್ತುಗಳನ್ನು ನಾವು ಪ್ರೀತಿಸುವಂತೆ ಮಾಡಿ, ನಂತರ ಆ ವಸ್ತುಗಳನ್ನು ನಮ್ಮಿಂದ ಕಿತ್ತುಕೊಳ್ಳುವಿರೇಕೆ?" ಎಂದು ಹಲುಬಿದನು. ಲೈಕಾರ್ಡಿಯಾ—"ಸೈರಿಸಿ, ಮಹಾಪ್ರಭು! ನಿಮ್ಮ ಮೃತರಾಣಿಯಲ್ಲಿ ಜೀವಂತವಾಗಿರಬಹುದಾದುದೆಲ್ಲ ಇಲ್ಲಿ, ಈ ಚಿಕ್ಕ ಮಗುವಿನಲ್ಲಿದೆ. ನಿಮ್ಮ ಮಗುವಿಗೋಸ್ಕರವಾಗಿಯಾದರೂ ಪೌರುಷ ತಾಳಿರಿ. ಸೈರಿಸಿ ಮಹಾಪ್ರಭು; ಈ ಅಮೂಲ್ಯ ನಿಧಿಯ ಸಲುವಾಗಿಯಾದರೂ ಸೈರಿಸಿ" ಎಂದಳು. ಪೆರಿಕ್ಲಿಸ್, ಆಗತಾನೇ ಹುಟ್ಟಿದ್ದಾ ಮಗುವನ್ನು ತೋಳುಗಳಲ್ಲೆತ್ತಿಕೊಂಡು "ಯಾವ ಮಗುವಿಗೂ ಇಷ್ಟೊಂದು ತಳಮಳದ ಜನನವಾಗಿರಲಿಲ್ಲ. ಕಂದಾ, ಇನ್ನು ಮುಂದಾದರೂ ನಿನ್ನ ಜೀವನ ಶಾಂತವಾಗಿರಲಿ! ರಾಜಶಿಶುವಿಗೆ ಸಲ್ಲಬಹುದಾದ ಅತ್ಯಂತ ಕ್ರೂರಸ್ವಾಗತ ನಿನಗಿಂದು ದೊರೆತಿದೆಯಲ್ಲ, ನಿನ್ನ ಮುಂದಿನ ಸ್ಥಿತಿಯಾದರೂ ಶಾಂತವಾಗಿರಲಿ, ಸೌಮ್ಯವಾಗಿರಲಿ! ಪಂಚಭೂತಗಳು ಒದಗಿಸಬಹುದಾದ ಅತಿ ನಿಂದಕ ಜನನ ನಿನ್ನದಾಗಿರುವುದರಿಂದ, ಮುಂದೆ ಸಂಭವಿಸುವಂತಹುದೆಲ್ಲ ಸುಖದಾಯಕವಾಗಿರಲಿ. ಪ್ರಥಮದಲ್ಲಿಯೇ ನಿನಗುಂಟಾಗಿರುವ ಈ ನಷ್ಟವನ್ನು, ಆಗಂತುಕಳಾಗಿ ನೀನು ಕಾಲಿಟ್ಟಿರುವ ಈ ಜಗತ್ತಿನ ಯಾವ ಸುಖ ತಾನೇ ಪೂರೈಸಬಲ್ಲದು? ಎಂದು ನುಡಿದನು.

ಬಿರುಗಾಳಿಯಿನ್ನೂ ಕ್ರೋಧೋನ್ಮತ್ತವಾದಂತೆ ಪ್ರಚಂಡವಾಗಿ ಬೀಸುತ್ತಿತ್ತು. ನಾವಿಕರಲ್ಲಾದರೋ, ಹಡಗಿನಲ್ಲಿ ಮೃತದೇಹವೊಂದಿರುವವರೆಗೂ ಬಿರುಗಾಳಿ ನಿಲ್ಲುವುದೇ ಇಲ್ಲವೆಂಬ ಅಂಧಶ್ರದ್ಧೆ ಬೇರೂರಿದ್ದಿತು. ಆದ್ದರಿಂದ ರಾಣಿ

ಯನ್ನು ಹಡಗಿನಿಂದಾಚೆಗೆ ಸಮುದ್ರಕ್ಕೆಸೆದುಬಿಡಬೇಕೆಂದು ಕೇಳಲು ಅವರೆಲ್ಲ ಪೆರಿಕ್ಲಿಸನ ಬಳಿಗೆ ಬಂದರು. "ನಿಮಗದೆಂತಹ ಧೈರ್ಯ, ಪ್ರಭು! ದೇವರೇ ನಿಮ್ಮನ್ನು ಕಾಪಾಡಬೇಕಷ್ಟೆ" ಎಂದರವರು. ದುಃಖಿಸುತ್ತಿದ್ದ ಆ ರಾಜಕುವರನು "ಸಾಕಷ್ಟು ಧೈರ್ಯವಿದೆ; ಬಿರುಗಾಳಿಗೆ ನಾನು ಹೆದರುವುದಿಲ್ಲ. ಅದರಿಂದ ನನಗೆಷ್ಟು ಕೆಡಕಾಗಬಹುದೋ ಅಷ್ಟೂ ಆಗಿಹೋಗಿದೆ. ಆದರೂ ಸಹ ಈ ನಿರ್ಭಾಗ್ಯ ಮಗುವಿನ ಮೇಲಣ ಪ್ರೇಮದಿಂದ ಈ ಬಿರುಗಾಳಿ ನಿಲ್ಲಲೆಂದು ನಾನು ಅಶಿಸುತ್ತಿದ್ದೇನೆ" ಎಂದನು. ನಾವಿಕರೆಲ್ಲ "ನಿಮ್ಮ ರಾಣಿಯನ್ನು ಸಮುದ್ರಕ್ಕೆಸೆಯಲೇ ಬೇಕು, ಪ್ರಭು. ಸಾಗರ ಮೇಲೆ ಮೇಲೆ ಉಬ್ಬುತ್ತಿದೆ. ಬಿರುಗಾಳಿ ಮಹಾಧ್ವನಿಗೈಯುತ್ತಿದೆ. ಹಡಗಿನಿಂದ ಮೃತರಾದವರನ್ನು ಹೊರಗೆ ಹಾಕಿದ ಹೊರತು ಈ ಚಂಡಮಾರುತ ಶಮನವಾಗುವುದಿಲ್ಲ" ಎಂದರು. ಈ ಅಂಧಶ್ರದ್ಧೆ ಎಷ್ಟು ನಿರ್ಬಲ ಹಾಗೂ ನಿರಾಧಾರವಾದುದೆಂಬ ಅರಿವಿದ್ದರೂ ಸಹ ಪೆರಿಕ್ಲಿಸ್ ನಮ್ರನಾಗಿ ಅದಕ್ಕೆ ತಲೆಬಾಗುತ್ತಾ "ನಿಮ್ಮಿಚ್ಛೆಯಂತಾಗಲಿ. ಅತಿನಿರ್ಭಾಗ್ಯೆ ರಾಣಿಯಾದೀಕೆ ಸಮುದ್ರವನ್ನೇ ಸೇರಲಿ" ಎಂದನು. ಮುಂದಭಾಗಿಯಾದ ರಾಜಕುವರನು ನಂತರ ತನ್ನ ಪ್ರಿಯಪತ್ನಿಯ ಅಂತ್ಯದರ್ಶನ ಪಡೆಯಲು ಹೋದನು. ಥಯಸಳನ್ನು ನೋಡುತ್ತಾ ಅವನು "ಎಂತಹ ಭೀಕರ ಅದೃಷ್ಟ ನಿನ್ನದಾಯಿತು, ಪ್ರಿಯೆ! ಬೆಳಕಿಲ್ಲ, ಬೆಂಕಿಯಿಲ್ಲ. ಸ್ನೇಹಪರವಲ್ಲದಾವಸ್ತುಗಳು ನಿನ್ನನ್ನು ಸಂಪೂರ್ಣವಾಗಿ ಮರೆತವಲ್ಲ! ನನಗಾದರೂ ಸಹ ಸಮಾಧಿಯೊಂದನ್ನಗೆದು ನಿನ್ನನ್ನು ಮಣ್ಣು ಮಾಡುವಷ್ಟು ವ್ಯವಧಾನವಿಲ್ಲದೆ, ಉಚಿತ ಶವದಪೆಟ್ಟಿಗೆ ಸಹ ಇಲ್ಲದೆ ನಿನ್ನನ್ನು ಈ ಸಮುದ್ರಕ್ಕೆಸೆಯಬೇಕಾಗಿದೆ. ಅಲ್ಲಾದರೋ ಭೋರ್ಗರೆಯುವ ಸಾಗರ ನಿನ್ನ ಅಸ್ಥಿಗಳ ಮೇಲೆ, ಇಲ್ಲಿನ ಸಾಮಾನ್ಯ ಕಪ್ಪೆಚಿಪ್ಪುಗಳೊಂದಿಗೆ ಬಿದ್ದಿರುವ ನಿನ್ನ ಶವದ ಏಕಮಾತ್ರ ಸ್ಮಾರಕವಾಗಿ ಹರಿದು ತೋಯಿಸುವುದಷ್ಟೆ! ಓ ಲೈಕಾರ್ಡಿಯಾ! ಸುಗಂಧ ವಸ್ತುಗಳೊಂದಿಗೆ, ಶಾಯಿ ಮತ್ತು ಕಾಗದವನ್ನೂ, ನನ್ನ ಸಂಪುಟ ಮತ್ತು ಆಭರಣಗಳನ್ನೂ ತರುವಂತೆ ನೆಸ್ಟರನಿಗೆ ಹೇಳು. ರೇಷ್ಮೆಯ ವಸ್ತ್ರದಿಂದ ಆವೃತವಾದ ಶವದ ಪೆಟ್ಟಿಗೆಯನ್ನು ತರಲು ನಿಕೇಂಡರನಿಗೆ ಹೇಳು. ಮಗುವನ್ನು ಆ ದಿಂಬಿನ ಮೇಲೆ ಮಲಗಿಸಿ, ಈಗಲೇ ಹೊರಡು ಲೈಕಾರ್ಡಿಯಾ! ಅಷ್ಟರಲ್ಲಿ ನಾನಿತ್ತ ನನ್ನ ಥಯಸೆಯಿಂದ ಉಪಾಸನಾ ಪೂರ್ವಕವಾಗಿ ಬೀಳ್ಕೊಳ್ಳುತ್ತೇನೆ" ಎಂದನು.

ಅವರು ಪೆರಿಕ್ಲಿಸನಿಗೆ ದೊಡ್ಡ ಪೆಟ್ಟಿಗೆಯೊಂದನ್ನು ತಂದಿತ್ತರು. ಅವನು ತನ್ನ ರಾಣಿಯನ್ನು ರೇಷ್ಮೆಯ ಮೇಲೆ ಹೊದಿಕೆಯಿಂದ ಮುಚ್ಚಿ ಅದರಲ್ಲಿ ಮಲಗಿಸಿದನು. ಮಧುರ ಪರಿಮಳ ಬೀರುವ ಸುಗಂಧ ವಸ್ತುಗಳನ್ನು ಆಕೆಯ ಮೇಲೆ ಹರಡಿದನು. ಪಕ್ಕದಲ್ಲಿ ಅಮೂಲ್ಯವಾದ ಆಭರಣಗಳು ಕೆಲವನ್ನೂ ಇಟ್ಟನು. ಜೊತೆಗೆ ಒಂದು ಕಾಗದದಲ್ಲಿ ಆಕೆ ಯಾರೆಂಬುದನ್ನು ಬರೆದು ತಿಳಿಸಿ, ಪತ್ನಿಯ ಶವವನ್ನು ಹೊತ್ತ ಆ ಪೆಟ್ಟಿಗೆ ಸಂದರ್ಭವಶಾತ್ ಯಾರಿಗಾದರೂ ಸಿಕ್ಕಿದಲ್ಲಿ ಅವರು ದಯೆತೋರಿ ಆ ದೇಹಕ್ಕೆ ಅಂತ್ಯಸಂಸ್ಕಾರ ನೆರವೇರಿಸಬೇಕೆಂದು ಕೋರಿದನು. ಆ ತರುವಾಯ, ಪೆರಿಕ್ಲಿಸ್ ಸ್ವತಃ ತನ್ನ ಕೈಗಳಿಂದಲೇ ಪೆಟ್ಟಿಗೆಯನ್ನು ಸಮುದ್ರಕ್ಕೆಸೆದನು.

ಬಿರುಗಾಳಿ ನಿಂತಿತು. ಆಗ ಪೆರಿಕ್ಲಿಸ್ ಹಡಗನ್ನು ಟಾರ್ಸಸಿನೆಡೆಗೆ ತಿರುಗಿಸುವಂತೆ ನಾವಿಕರಿಗೆ ಆಜ್ಞಾಪಿಸಿ, – "ನಾವು ಟೈರ್ ನಗರವನ್ನು ಸೇರುವವರೆಗೂ ಈ ಮಗು ತಾಳಿಕೊಂಡಿರಲಾರದು. ಆದ್ದರಿಂದ ಇದನ್ನು ನಾನು ಟಾರ್ಸಸಿನಲ್ಲಿ ದಕ್ಷ ಪೋಷಣೆಗೆ ಒಪ್ಪಿಸುತ್ತೇನೆ" ಎಂದನು.

ಯಾವ ರಾತ್ರಿಯಲ್ಲಿ ಥಯಸೆಯನ್ನು ಸಮುದ್ರಕ್ಕೆಸೆಯಲಾಯಿತೋ, ಆ ಬಿರುಗಾಳಿಯ ರಾತ್ರಿ ಕಳೆಯಿತು; ಬೆಳಕಿನ್ನೂ ಪೂರ್ಣವಾಗಿ ಹರಿದಿರಲಿಲ್ಲ; ಆಗ ಎಫೀಸಸ್ ನಗರದ ಗಣ್ಯ ಪುರುಷನೂ, ಪರಿಣತ ವೈದ್ಯನೂ ಆಗಿದ್ದ ಸೆರಿಮೋನ್ ಸಮುದ್ರತೀರದಲ್ಲಿ ನಿಂತಿದ್ದನು. ಆ ಸಮಯದಲ್ಲಿ, ಅವನ ಕೆಲವು ಸೇವಕರು ಪೆಟ್ಟಿಗೆಯೊಂದನ್ನು ಆತನ ಬಳಿ ತಂದರು. ಸಮುದ್ರದಲೆಗಳು ಅದನ್ನು ದಡಕ್ಕೆ ತಂದುಹಾಕಿದವೆಂದು ತಿಳಿಸಿದರು. ಅವರಲ್ಲೊಬ್ಬನು "ಇದನ್ನು ನಮ್ಮ ದಡಕ್ಕೆಸೆದಂತಹ ದೊಡ್ಡ ಅಲೆಯನ್ನು ನಾನೆಂದೂ ಕಂಡಿರಲಿಲ್ಲ" ಎಂದನು. ಸೆರಿಮೋನ್ ಆ ಪೆಟ್ಟಿಗೆಯನ್ನು ತನ್ನ ಮನೆಗೇ ಕೊಂಡೊಯ್ಯುವಂತೆ ಆಜ್ಞಾಪಿಸಿದನು. ಅಲ್ಲಿ ಅದನ್ನು ತೆಗೆದು ನೋಡಿದಾಗ, ತರುಣಿಯೂ ಸುಂದರಿಯೂ ಆದ ಸ್ತ್ರೀಯೊಬ್ಬಳ ಶರೀರ ಆತನ ಆಶ್ಚರ್ಯಭರಿತ ದೃಷ್ಟಿಗೆ ಗೋಚರಿಸಿತು. ಅಲ್ಲಿದ್ದ ಸುಗಂಧವಸ್ತುಗಳಿಂದಲೂ, ಆಭರಣಗಳ ಸಂಪುಟದ ಸಿರಿಯಿಂದಲೂ ಅವನು, ಇಷ್ಟು ವಿಲಕ್ಷಣ ರೀತಿಯಲ್ಲಿ ಸಮಾಧಿಗೊಳಿಸಲ್ಪಟ್ಟಿದ್ದಾಕೆ ಯಾರೋ ಉಚ್ಚದರ್ಜೆಯ ವ್ಯಕ್ತಿಯೇ ಆಗಿರಬೇಕೆಂದು ತೀರ್ಮಾನಿಸುವಂತಾಯಿತು. ಇನ್ನೂ ಮುಂದೆ ಹುಡುಕಲಾಗಿ ಕಾಗದವೊಂದು ಆತನ ಕಣ್ಣಿಗೆ ಬಿತ್ತು. ಅದರಿಂದ ತನ್ನೆದುರಿಗಿದ್ದ ಮೃತ ಶರೀರ ಒಬ್ಬ ರಾಣಿಯುದೆಂದು, ಟೈರಿನ ರಾಜಕುವರ ಪೆರಿಕ್ಲಿಸನ ಪತ್ನಿಯ

ದೆಂದು, ತಿಳಿಯಪಟ್ಟಿತು. ಅವನು ಈ ಆಕಸ್ಮಿಕ ಘಟನೆಯ ಚೋದ್ಯಕ್ಕೆ ಕೌತುಕಪಡುತ್ತಾ, ಆ ಚೆಲುವೆಯಾದ ತರುಣಿಯನ್ನು ಕಳೆದುಕೊಂಡಿದ್ದ ಪತಿಯ ಬಗೆಗೆ ಕನಿಕರಪಡುತ್ತಾ ನುಡಿದನು—"ಓ ಪೆರಿಕ್ಲಿಸ್! ನೀನಿನ್ನೂ ಜೀವಿಸಿರುವೆಯಾದರೆ, ನಿನ್ನ ಹೃದಯ ಕೊರಗಿನಿಂದ ಸೀಳಿಹೋಗುತ್ತಿರ ಬೇಕು." ನಂತರ ಅವನು ಥಯಸೆಯ ಮುಖವನ್ನೇ ದೃಷ್ಟಿಸಿ ನೋಡಲಾಗಿ, ಅವಳ ಸ್ವರೂಪ, ಮುಖಭಾವಗಳು ಬಹು ನವೀನವಾಗಿ, ಯಾವ ರೀತಿ ಯಲ್ಲೂ ಮೃತ್ಯುಗ್ರಸ್ತವಾಗಿಲ್ಲವೆಂಬಂತೆ ತೋರಿದವು. ಆಗವನ ಬಾಯಿಂದ "ನಿನ್ನನ್ನು ಸಮುದ್ರಕ್ಕೆಸೆದವರು ಬಹು ಆತುರದ ಕೆಲಸ ಮಾಡಿದರಷ್ಟೆ!" ಎಂಬ ಉದ್ಗಾರ ಹೊರಬಿದ್ದಿತು. ಆಕೆ ಸತ್ತಿರುವಳೆಂದು ಅವನು ನಂಬದಿದ್ದುದೇ ಇದಕ್ಕೆ ಕಾರಣ! ಅವನು ಆ ಕೂಡಲೇ ಅಲ್ಲಿ ಬೆಂಕಿಯನ್ನು ಸಿದ್ಧಗೊಳಿಸು ವಂತೆಯೂ, ಉಚಿತ ಉತ್ತೇಜಕೌಷಧಿಗಳನ್ನು ತಂದಿಟ್ಟು, ಮೃದುಮಧುರ ಗಾಯನವನ್ನು ನುಡಿಸುವಂತೆಯೂ ಆಜ್ಞಾಪಿಸಿದನು. ಈ ಮೂಲಕ, ಒಂದು ವೇಳೆ ಆಕೆ ಪುನರುಜ್ಜೀವಗೊಂಡಲ್ಲಿ ಅವಳ ಚೇತನ ತಳೆಯಬಹುದಾದ ಕೌತುಕ-ಭ್ರಮೆಗಳನ್ನು ಶಾಂತಗೊಳಿಸುವುದೇ ಅವನ ಉದ್ದಿಶ್ಯವಾಗಿದ್ದಿತು. ತನ್ನ ಸುತ್ತಲೂ ಗುಂಪುಗೂಡಿ, ಆಶ್ಚರ್ಯದಿಂದ ನೋಡುತ್ತ ನಿಂತಿದ್ದ ಜನರಿಗೆ ಅವನು "ಮಹನೀಯರೇ, ದಯಮಾಡಿ ಆಕೆಯ ಬಳಿ ಗಾಳಿಯಾಡಲು ಅವಕಾಶ ಕೊಡಿ; ಈ ರಾಣಿ ಬದುಕುತ್ತಾಳೆ. ಈಕೆ ಪೆಟ್ಟಿಗೆಯಲ್ಲಿ ಸೇರಿ ಇನ್ನೂ ಐದುಗಂಟೆಗಳ ಕಾಲವೂ ಕಳೆದಿಲ್ಲ. ನೋಡಿ, ನೋಡಿ, ಆಕೆಯ ಜೀವದ ಮುಗುಳು ಪುನಃ ಅರಳುತ್ತಿದೆ; ಅರಳುತ್ತಿದೆ; ಅವಳ ಕಣ್ಣೆವೆ ಅಲು ಗಾಡುತ್ತಿವೆ, ನೋಡಿ! ಈ ಚೆಲುವೆ ಬದುಕುತ್ತಾಳೆ, ತನ್ನ ಕರುಣಕತೆಯಿಂದ ನಮ್ಮೆಲ್ಲರನ್ನೂ ಅಳಿಸಲಿದ್ದಾಳೆ" ಎಂದನು.

ವಾಸ್ತವವಾಗಿ ಥಯಸಾ ಮೃತಳಾಗಿರಲೇ ಇಲ್ಲ. ಶಿಶು ಜನನವಾದ ಮೇಲೆ ಅವಳನ್ನಾವರಿಸಿದ್ದ ದೀರ್ಘಮೂರ್ಛೆಯಿಂದ ನೋಡಿದವರೆಲ್ಲಾ ಆಕೆ ಸತ್ತಿರುವಳೆಂದೇ ಭಾವಿಸಿ ಬಿಟ್ಟಿದ್ದರು. ಈಗ ಈ ದಯಾಳುವಾದ ಪುರುಷನ ಶುಶ್ರೂಷೆಯಿಂದ ಥಯಸಾ ಪುನಃ ಬೆಳಕನ್ನು ಜೀವನವನ್ನು, ಕಂಡಳು. ಕಣ್ಣುಗಳನ್ನು ತೆರೆಯುತ್ತಾ "ಆಕೆ ನಾನೆಲ್ಲಿದ್ದೇನೆ? ನನ್ನ ಸ್ವಾಮಿಯೆಲ್ಲಿ? ನಾನಿರುವ ಈ ಜಗತ್ತಾವುದು?" ಎಂದಳು. ಕ್ರಮ ಕ್ರಮವಾಗಿ ಸೆರಿಮೋನ್ ಆಕೆಗೊದಗಿದ್ದ ಸಂಘಟನೆಗಳನ್ನೆಲ್ಲಾ ತಿಳಿಯಪಡಿಸಿದನು. ಅವಳು ಸಾಕಷ್ಟು ಚೇತರಿಸಿಕೊಂಡಿರುವಳೆಂದು ತೋರಿಬಂದಮೇಲೆ ಅವನು

ಅವಳ ಪತಿ ಬರೆದಿದ್ದ ಕಾಗದವನ್ನೂ ಆಭರಣಗಳನ್ನೂ ತೋರಿಸಿದನು. ಅವಳು ಆ ಕಾಗದವನ್ನು ನೋಡಿ "ಇದು ನನ್ನ ಸ್ವಾಮಿಯದೇ ಬರವಣಿಗೆ. ನಾನು ಸಮುದ್ರಯಾನ ಹೊರಟದ್ದು ನನಗೆ, ಚೆನ್ನಾಗಿ ನೆನಪಿದೆ. ಆದರೆ ಅಲ್ಲಿ ನನ್ನ ಶಿಶು ಜನಿಸಿತೆಂಬುದನ್ನು, ದೇವರಾಣೆಯಾಗಿಯೂ, ನಾನು ಖಚಿತವಾಗಿ ಹೇಳಲಾರೆ. ಅಯ್ಯೋ! ಆದರಿನ್ನೆಂದೂ ನನ್ನ ವಿವಾಹಿತ ಸ್ವಾಮಿಯನ್ನು ನಾನು ನೋಡಲಾರೆನಷ್ಟೆ! ಆದ್ದರಿಂದ ಪವಿತ್ರ ವಸ್ತ್ರಗಳನ್ನು ಧರಿಸಿ, ದುಃಖಭರಿತವಾದ ನನ್ನೀ ಉಳಿದ ಆಯುಷ್ಯವನ್ನು ಕಳೆಯುತ್ತೇನೆ" ಎಂದಳು. ಸೆರಿಮೋನ್ "ತಾಯಿ, ಇದೇ ನಿಮ್ಮ ಉದ್ದಿಶ್ಯವಾದಲ್ಲಿ, ಇದೋ ನೋಡಿ, ಇಲ್ಲಿಂದ ಅನತಿ ದೂರದಲ್ಲಿ ಡಯಾನಾ ದೇವಾಲಯವಿದೆ. ನೀವು ಪುನೀತರಾಗಿ ಅಲ್ಲಿಯೇ ಇರಬಹುದು. ಅಲ್ಲದೆ, ನೀವಿಚ್ಛಿಸುವುದಾದಲ್ಲಿ, ನಿಮ್ಮನ್ನು ಅಲ್ಲಿ ನನ್ನ ಸಂಬಂಧಿಯೊಬ್ಬಳು ನೋಡಿಕೊಳ್ಳುವಳು" ಎಂದನು. ಥಯಸಾ ಧನ್ಯವಾದಗಳೊಂದಿಗೆ ಈ ಸಲಹೆಯನ್ನು ಅಂಗೀಕರಿಸಿದಳು. ಅವಳು ಪೂರ್ಣ ಗುಣಹೊಂದಿದ ತರುವಾಯ ಸೆರಿಮೋನ್ ಅವಳನ್ನು ಡಯಾನಾ ದೇವಾಲಯಕ್ಕೆ ಕರೆದೊಯ್ದನು. ಅಲ್ಲಿ ಆಕೆ ಆ ದೇವತೆಯ ಅರ್ಚಕಳಾಗಿ ನಿಂತಳು. ನಾಶವಾದನೆಂದೇ ತಾನೆಣಿಸಿದ್ದ ಪತಿಯ ಸಲುವಾಗಿ ವ್ಯಥೆಪಡುತ್ತ, ಆಗಿನ ಕಾಲದಲ್ಲಿ ಪ್ರಚಲಿತವಾಗಿದ್ದ ಧರ್ಮಾಭ್ಯಾಸದಲ್ಲಿ ನಿರತಳಾಗಿರುತ್ತ ಕಾಲ ತಳ್ಳತೊಡಗಿದಳು.

ಪೆರಿಕ್ಲಿಸ್ ತನ್ನ ಚಿಕ್ಕ ಮಗಳನ್ನು ಟಾರ್ಸಸಿಗೆ ಕರೆದೊಯ್ದನು. ಸಮುದ್ರದ ಮೇಲೆ ಜನಿಸಿದ್ದರಿಂದಾಗಿ, ಅವಳಿಗೆ ಆತ ಮೆರೀನಾ ಎಂದು ಹೆಸರಿಟ್ಟಿದ್ದನು. ಮಗಳನ್ನು ಆ ನಗರದ ಅಧಿಕಾರಿ ಕ್ಲಿಯಾನ್ ಮತ್ತು ಅವನ ಪತ್ನಿ ಡಯೋನಿಷಿಯಾ ಬಳಿ ಬಿಟ್ಟಿರುವುದು ಅವನ ಉದ್ದಿಶ್ಯವಾಗಿತ್ತು. ಅವರಿಗೆ ಕ್ಷಾಮವೊದಗಿದ್ದಾಗ ತಾನೆಸಗಿದ್ದ ಸತ್ಕಾರ್ಯದಿಂದಾಗಿ ಅವರು ತನ್ನ ಮಾತೃವಿಹೀನ ಮಗುವಿನಲ್ಲಿ ಪ್ರೇಮ ತೋರಿಸುವರೆಂದು ಆತ ನಂಬಿಕೊಂಡಿದ್ದನು. ಕ್ಲಿಯಾನ್ ರಾಜ ಪೆರಿಕ್ಲಿಸನನ್ನು ನೋಡಿ, ಅವನಿಗೊದಗಿದ ಮಹಾ ದುಃಖವನ್ನು ಕೇಳಿ ಅರಿತಾಗ, "ಅಯ್ಯೊ, ನಿಮ್ಮ ಪ್ರೇಮದ ರಾಣಿ! ಆಕೆಯನ್ನು ನೀವಿಲ್ಲಿ ಕರೆತಂದು ಆಕೆಯ ದರ್ಶನದಿಂದ ನಮ್ಮ ಕಣ್ಣಿಗೆ ಹಬ್ಬವನ್ನುಂಟುಮಾಡುವುದು ದೈವೇಚ್ಛೆಯಲ್ಲಿದ್ದಿದ್ದರೆ!" ಎಂದು ಉದ್ಗಾರ ತೆಗೆದನು. ಪೆರಿಕ್ಲಿಸ್ "ನಮ್ಮ ಮೇಲಿನ ಹಿರಿದಾದ ಶಕ್ತಿಗೆ ನಾವು ತಲೆಬಾಗಲೇ ಬೇಕು. ನನ್ನ ಥಯಾಸಾ ಈಗೆಲ್ಲಿ ಬಿದ್ದಿರುವಳೋ ಆ ಸಾಗರದಷ್ಟೇ ಕುಪಿತನಾಗಿ

ನಾನೀಗ ಗರ್ಜಿಸಿದರೂ ಸಹ, ಆಗಿಹೋದುದೇನೂ ಬದಲಾಗುವುದಿಲ್ಲವಷ್ಟೆ! ಇದೋ, ಇಲ್ಲಿರುವವಳು ನನ್ನ ಮುದ್ದುಮಗು ಮೆರೀನಾ. ಇವಳಿಗಾಗಿ ನಿಮ್ಮ ಧರ್ಮಬುದ್ಧಿಯುಳ್ಳ ಅನುಕಂಪದ ಶುಲ್ಕವನ್ನು ನಾನು ಕೋರಬೇಕಾಗಿದೆ. ಈ ಮಗುವನ್ನು ನಿಮ್ಮ ರಕ್ಷಣೆಯಲ್ಲಿ ಬಿಟ್ಟು, ಅವಳಿಗೆ ರಾಜಯೋಗ್ಯ ಶಿಕ್ಷಣ ಕೊಡುವಂತೆ ನಿಮ್ಮನ್ನು ಬೇಡುತ್ತೇನೆ" ಎಂದನು. ನಂತರ ಅವನು ಕ್ಲಿಯಾನನ ಪತ್ನಿ ಡಯೋನಿಸಿಯಳೆಡೆಗೆ ತಿರುಗಿ–"ತಾಯೆ, ಈ ಮಗುವನ್ನು ಪೋಷಿಸಿ ಬೆಳೆಸುವುದರಿಂದಾಗಿ ನನ್ನನ್ನು ಧನ್ಯನನ್ನಾಗಿ ಮಾಡಿ" ಎಂದು ಬೇಡಿದನು. ಆಕೆ "ಪ್ರಭುವೆ, ನನಗೆ ಸ್ವಂತ ಮಗಳೊಬ್ಬಳಿದ್ದಾಳೆ. ಅವಳು ನಿಮ್ಮ ಮಗಳಿಗಿಂತ ಹೆಚ್ಚಾಗಿ ನನ್ನ ಗೌರವಾದರಗಳಿಗೆ ಪಾತ್ರಳಾಗುವುದಿಲ್ಲವೆಂದು ಮಾತುಕೊಡುತ್ತೇನೆ" ಎಂದು ಉತ್ತರಿಸಿದಳು. ಕ್ಲಿಯಾನ್ ಸಹ ಅಂತಹುದೇ ಪ್ರಮಾಣ ಮಾಡುತ್ತಾ "ರಾಜ ಪೆರಿಕ್ಲಿಸ್, ನಿಮ್ಮ ದವಸಧಾನ್ಯಗಳಿಂದ ನನ್ನ ಜನತೆಯನ್ನು ಉಣಿಸಿ, ತಣಿಸಿದ ನಿಮ್ಮ ಉದಾತ್ತ ಕೃತಿಗಳಿಗಾಗಿ ಅವರೆಲ್ಲ ಇಂದಿಗೂ ನಿಮ್ಮನ್ನು ಪ್ರತಿನಿತ್ಯ ಸ್ಮರಿಸುತ್ತಾರೆ. ಆ ನಿಮ್ಮ ಕೃತಿಗಳನ್ನು ಈ ಮಗುವಿನಲ್ಲಿ ನಾವು ಉಳಿಸಿಕೊಂಡು ಬರಬೇಕಾಗಿದೆ. ಒಂದು ವೇಳೆ ನಾನು ನಿಮ್ಮ ಮಗುವಿನ ಪಾಲನೆಯಲ್ಲಿ ಅಲಕ್ಷ್ಯ ತೋರಿದರೆ ನಿಮ್ಮಿಂದ ಉದ್ಧೃತವಾಗಿರುವ ನನ್ನ ಈ ಇಡೀ ಜನತೆ ಒತ್ತಾಯಪೂರ್ವಕವಾಗಿ ನನ್ನಿಂದ ಕರ್ತವ್ಯವನ್ನು ಮಾಡಿಸುತ್ತದೆ. ಅದಕ್ಕಾಗಿ ನನಗೆ ಪ್ರೇರಕವೊಂದು ಅಗತ್ಯವಾಗುವ "ಸಂದರ್ಭ ಬಂದಲ್ಲಿ, ನನಗೂ ನನ್ನದೆನ್ನಿಸುವ ಎಲ್ಲಕ್ಕೂ ಪರಂಪರಾನುಗತವಾಗಿ ದೇವತೆಗಳ ಕ್ರೋಧ ತಗುಲಲಿ" ಎಂದನು. ಇದೆಲ್ಲದರಿಂದ ತನ್ನ ಮಗು ಉತ್ತಮ ಪೋಷಣೆಗೆ ಒಳಪಡುವುದೆಂಬ ನಂಬಿಕೆ ತಳೆದ ಪೆರಿಕ್ಲಿಸ್ ಮಗಳನ್ನು ಕ್ಲಿಯಾನ್ ಮತ್ತು ಅವನ ಪತ್ನಿ ಡಯೋನಿಸಿಯಾಳ ವಶಕ್ಕೊಪ್ಪಿಸಿ, ದಾದಿ ಲೈಕಾರ್ಡಿಯಾಳನ್ನೂ ಅಲ್ಲಿಯೇ ಇರಿಸಿದನು. ಅವನು ಅಲ್ಲಿಂದ ತೆರಳುವಾಗ ಚಿಕ್ಕ ಮೆರೀನಾಳಿಗೆ ತನಗೆ ಸಂಭವಿಸುತ್ತಿದ್ದ ನಷ್ಟದ ಅರಿವಿರಲಿಲ್ಲ. ಆದರೆ ಲೈಕಾರ್ಡಿಯಾ, ರಾಜಪುರುಷನಾದ ತನ್ನೊಡೆಯನಿಂದ ಅಗಲುವಾಗ ದುಃಖದಿಂದ ರೋದಿಸಿದಳು. ಪೆರಿಕ್ಲಿಸ್ "ಕೂಡದು! ಲೈಕಾರ್ಡಿಯಾ, ಕಂಬನಿ ಕೂಡದು! ನಿನ್ನ ಚಿಕ್ಕ ಒಡತಿಯನ್ನು ನೋಡಿಕೋ. ಇಲ್ಲಿಂದ ಮುಂದೆ ಅವಳ ನಲವು, ಅನುಗ್ರಹಗಳೇ ನಿನ್ನ ಆಧಾರ" ಎಂದನು.

ಪೆರಿಕ್ಲಿಸ್ ಸುರಕ್ಷಿತವಾಗಿ ಟೈರ್ ನಗರವನ್ನು ಸೇರಿ ಪುನಃ ಶಾಂತಿಯುತವಾಗಿ ರಾಜ್ಯಾಡಳಿತವನ್ನು ವಹಿಸಿಕೊಂಡನು. ಇತ್ತ ಆತನ ಅಭಾಗಿನಿಯಾದ

ರಾಣಿ, ಅವನಿಂದ ಮೃತಳೆಂದು ತಿಳಿಯಲ್ಪಟ್ಟು, ಎಫೀಸಸ್‌ನಲ್ಲೇ ಉಳಿದು ಕೊಂಡಿದ್ದಳು. ಆ ನತದೃಷ್ಟ ತಾಯಿ ನೋಡಿಯೇ ಇರದಿದ್ದ ಚಿಕ್ಕ ಮಗು ಮೆರೀನಾಳಾದರೋ ಕ್ಲಿಯಾನನ ಬಳಿ ತನ್ನ ಉಚ್ಚ ಕುಲಕ್ಕೆ ಅನುಗುಣವಾದ ರೀತಿಯಲ್ಲೇ ಬೆಳೆಯುತ್ತಿದ್ದಳು. ಕ್ಲಿಯಾನ್ ಅವಳಿಗೆ ಅತಿಲಕ್ಷ್ಯವಿಟ್ಟು ಶಿಕ್ಷಣ ಕೊಡಿಸಿದ್ದನು. ಇದರಿಂದಾಗಿ ಮೇರೀನಾಳಿಗೆ ಹದಿನಾಲ್ಕು ವರ್ಷ ವಯಸ್ಸು ತುಂಬುವ ವೇಳೆಗೆ, ವಿದ್ವನ್ಮಣಿಗಳೆನಿಸಿಕೊಂಡವರಿಗೂ ಸಹ ಆಗಿನ ಕಾಲದ ವಿದ್ಯೆಗಳಲ್ಲಿ ಅವಳಷ್ಟು ಉತ್ತಮ ಪ್ರೌಢಿಮೆ ಇರದಂತಾಗಿತ್ತು. ಅವಳು ದಿವ್ಯ ಗಂಧರ್ವಕನ್ನಿಕೆಯಂತೆ ಹಾಡುತ್ತಿದ್ದಳು. ಅಪ್ಸರೆಯಂತೆ ನರ್ತಿಸುತ್ತಿದ್ದಳು. ಇನ್ನೂ ಕಸೂತಿ ಕೆಲಸದಲ್ಲಂತೂ ಅವಳ ನೈಪುಣ್ಯ ಅತಿಶಯ–ಆಕೆ ತಾನು ಹೆಣೆ ಯುವ ಪಕ್ಷಿಗಳು, ಫಲಗಳು ಅಥವಾ ಹೂಗಳಿಂದ ಸ್ವಯಂ ಪ್ರಕೃತಿಯ ಕೃತಿಗ ಳನ್ನೇ ರೂಪಿಸುವಳೋ ಎನಿಸುತ್ತಿತ್ತು. ನೈಜ ಗುಲಾಬಿಗಳು ಸಹ ಮೆರೀನಾ ರೇಷ್ಮೆಯಲ್ಲಿ ಹೆಣೆದ ಹೂಗಳನ್ನು ಹೋಲುವಂತೆ ತಮ್ಮಲ್ಲೇ ಒಂದನ್ನೊಂದು ಹೋಲುತ್ತಿರಲಿಲ್ಲ. ಆದರೆ ಉತ್ತಮ ಶಿಕ್ಷಣದಿಂದ ಮೆರೀನಾ ಈ ಎಲ್ಲ ಪ್ರೌಢಿಮೆಗಳನ್ನು ಪಡೆದು ಎಲ್ಲರ ಕಣ್ಣಿನಲ್ಲೂ ಅಮೋಘವಸ್ತುವೆಂದೆನಿಸಿದಾಗ, ಕ್ಲಿಯಾನಿನ ಪತ್ನಿ ಡಯೋನಿಷಿಯಾ ಮಾತ್ಸರ್ಯದ ದೆಸೆಯಿಂದಾಗಿ ಆಕೆಯ ಬದ್ಧವೈರಿಯಾಗಿ ಪರಿಣಮಿಸಿದಳು. ಇದಕ್ಕೆ ಮಂದಮತಿಯಾಗಿದ್ದ ಅವನ ಮಗಳು, ಮೆರೀನಾ ತಳೆದಿದ್ದ ಪರಿಪೂರ್ಣತೆಯನ್ನು ನಿಲುಕಲಾರದಿದ್ದುದೇ ಕಾರಣವಾಗಿತ್ತು. ವಯೋ ತಾರತಮ್ಯವಿಲ್ಲದೆ, ಆಸಕ್ತಿ ತಾರತಮ್ಯವಿಲ್ಲದೆ (ಆದರೆ ಸಿದ್ಧಿ ತಾರತಮ್ಯದೊಂದಿಗೆ) ಶಿಕ್ಷಿತಳಾಗಿದ್ದ ತನ್ನ ಮಗಳು, ಎಲ್ಲ ಬಗೆಯ ಶ್ಲಾಘನೆ, ಅನುಗ್ರಹಗಳಿಗೆ ಪಾತ್ರಳಾಗುತ್ತಿದ್ದ ಮೆರೀನಾಳೆದುರು ಕಡೆಗಣಿಸಲ್ಪ ಡುತ್ತಿದ್ದುದು ಡಯೋನಿಷಿಯಾಗೆ ಕಂಡುಬಂದಿತು. ಆಗ ಅವಳು ಮೆರೀನಾ ಳನ್ನು ಮುಂದೆಂದೂ ಕಾಣಿಸಿಕೊಳ್ಳದಂತೆ ಮಾಡಿಬಿಟ್ಟರೆ ಮೂರ್ಖಳಾದ ತನ್ನ ಮಗಳು ಇನ್ನೂ ಹೆಚ್ಚು ಗೌರವಕ್ಕೆ ಪಾತ್ರಳಾಗಬಹುದೆಂಬ, ನಿರರ್ಥಕ ಆಲೋಚನೆಯಿಂದ, ಮೆರೀನಾಳನ್ನು ಮಾರ್ಗದಿಂದ ಹೊರದೂಡಲು ಹಂಚಿಕೆ ಯೊಂದನ್ನು ಹೂಡಿದಳು. ಈ ಹಂಚಿಕೆಯನ್ನು ಕಾರ್ಯರೂಪಕ್ಕೆ ತರಲು ಆಕೆಯಿಟ್ಟ ಮೊದಲ ಹೆಜ್ಜೆಯೆಂದರೆ ಮೆರೀನಾಳನ್ನು ಕೊಲೆಗೈಯಲು ಒಬ್ಬ ಮನುಷ್ಯನನ್ನು ನಿಯಮಿಸಿದುದು. ಅಲ್ಲದೆ ತನ್ನ ದುಷ್ಟ ಹಂಚಿಕೆಯನ್ನು ಕೈಗೂಡಿಸಲು ಅವಳು ಸ್ವಾಮಿಭಕ್ತೆ ಲೈಕಾರ್ಡಿಯಾ ಅದೇ ತಾನೇ ಮೃತಳಾಗಿ ದ್ದಂತಹ ಸದವಕಾಶವನ್ನೇ ಆರಿಸಿದಳು. ಡಯೋನಿಷಿಯಾ ಈ ಕೊಲೆ ನಡೆಸಲು

ತಾನು ನಿಯಮಿಸಿದ್ದ ಪುರುಷನೊಂದಿಗೆ ಮಾತನಾಡುತ್ತಿದ್ದಾಗ, ತರುಣಿ ಮೆರೀನಾ ಮೃತಳಾದ ಲೈಕಾರ್ಡಿಯಾಳ ಬಳಿ ಕುಳಿತು ರೋದಿಸುತ್ತಿದ್ದಳು. ಈ ದುಷ್ಟ ಕಾರ್ಯಕ್ಕೆ ನಿಯೋಜಿತನಾಗಿದ್ದ ಪುರುಷ ಲಿಯೋನೈನನನ್ನು ಕಾರ್ಯ ಕೈಗೊಳ್ಳುವಂತೆ ಮಾಡುವುದು ಕಷ್ಟವೇ ಆಗಿತ್ತು—ಮೆರೀನಾ ಅಷ್ಟರಮಟ್ಟಿಗೆ ಎಲ್ಲರ ಹೃದಯಗಳನ್ನು ಗೆದ್ದಿದ್ದಳು. ಅವನು–"ಅವಳು ದೇವತಾ ಸ್ತ್ರೀಯಂತಹ ಜೀವಿ" ಎಂದನು. ಆದರೆ ನಿಷ್ಠುರಳಾಗಿದ್ದ ಅವಳ ಶತ್ರು–"ಹಾಗಿದ್ದಲ್ಲಿ ಅವಳು ದೇವತೆಗಳನ್ನೇ ಸೇರುವುದು ಉಚಿತ" ಎಂದು ಹೇಳುತ್ತಾ–"ಇದೋ ದಾದಿ ಲೈಕಾರ್ಡಿಯಾಳ ಮರಣಕ್ಕಾಗಿ ಸಂತಪಿಸುತ್ತಾ ಅವಳಿಲ್ಲೇ ಬರುತ್ತಿದ್ದಾಳೆ. ನೀನು ನನ್ನಾಜ್ಞೆಯನ್ನು ನಡೆಸಲು ಸಿದ್ಧನೋ ಇಲ್ಲವೋ?" ಎಂದಳು. ಲಿಯೋನೈನ್ ಅವಳ ಆಜ್ಞೆಯನ್ನು ಉಲ್ಲಂಘಿಸಲು ಹೆದರುತ್ತಾ "ಸಿದ್ಧ" ಎಂದು ಉತ್ತರಿಸಿ ಬಿಟ್ಟನು. ಈ ಒಂದು ಚಿಕ್ಕಮಾತಿನಿಂದಲೇ ಅಪ್ರತಿಮಳಾದಾ ಮೆರೀನಾಳ ಅಕಾಲಮೃತ್ಯು ಸಿದ್ಧವಾಗಿಹೋಯಿತು. ಕೈಯಲ್ಲಿ ಹೂಗಳ ಬುಟ್ಟಿಯೊಂದನ್ನು ಹಿಡಿದು ಸಮೀಪಿಸಿದ ಮೆರೀನಾ ಪ್ರತಿದಿನವೂ ಆ ಹೂಗಳನ್ನು ಲೈಕಾರ್ಡಿಯಾಳ ಗೋರಿಯಮೇಲೆ ತಾನು ಹರಡುವುದಾಗಿ ಹೇಳಿದಳು. ನೇರಿಳೆಬಣ್ಣದ ವೈಲೆಟ್ ಹೂವುಗಳೂ, ಸ್ವರ್ಣವರ್ಣದ ಮೆರೀಗೋಲ್ಡ್ ಹೂವುಗಳೂ, ಬೇಸಿಗೆಯಿರುವವರೆಗೂ ಅವಳ ಗೋರಿಯಮೇಲೆ ರತ್ನಗಂಬಳಿಯಂತೆ ತೂಗಾಡುತ್ತಿರಬೇಕೆಂದಳು. ಮೆರೀನಾ–"ಅಯ್ಯೋ, ನನ್ನಂತಹ ನಿರ್ಭಾಗ್ಯ ಕನ್ಯೆಯಿನ್ನಿಲ್ಲ! ಬಿರುಗಾಳಿಯ ಮಧ್ಯೆ ಹುಟ್ಟಿ, ಆಗಲೇ ತಾಯಿಯನ್ನು ಕಳೆದುಕೊಂಡೆ! ಈಗ ಈ ಜಗತ್ತೇ ಮಿತ್ರರಿಂದ ನನ್ನನ್ನು ಶೀಘ್ರವಾಗಿ ಬೇರ್ಪಡಿಸುವ ನಿರಂತರ ಚಂಡಮಾರುತನಂತಿದೆ" ಎಂದಳು. ವಂಚಕಿಯಾದ ಡಯೋನಿಷಿಯಾ–"ಓಹೋ, ಇದೇನು ಮೆರೀನಾ? ನೀನೊಬ್ಬಳೇ ಅಳುತ್ತಿರುವೆಯೇನು? ನನ್ನ ಮಗಳು ನಿನ್ನೊಂದಿಗಿಲ್ಲದಿರುವುದೆಂತು! ಲೈಕಾರ್ಡಿಯಾಳಿಗಾಗಿ ನೀನು ವ್ಯಥೆಪಡದಿರು. ನಾನೇ ನಿನಗೊಬ್ಬ ದಾದಿಯಾಗಿಲ್ಲವೆ? ಈ ನಿರರ್ಥಕ ವ್ಯಸನದಿಂದಾಗಿ ನಿನ್ನ ಚೆಲುವೆಲ್ಲಾ ಕಂಗೆಟ್ಟು ಹೋಗಿದೆ. ಎಲ್ಲಿ! ನಿನ್ನ ಹೂಗಳನ್ನು ನನಗೆ ಕೊಡು. ಸಮುದ್ರದೆಡೆಯ ಗಾಳಿ ಅವುಗಳನ್ನು ಹಾಳುಮಾಡಿಬಿಡುತ್ತದೆ ಹೋಗು, ಲಿಯೋನೈನ್ ಜೊತೆಗೆ ಸುತ್ತಾಡಿ ಬಾ. ಹೊರಗೆ ಗಾಳಿ ಉತ್ತಮವಾಗಿದೆ, ನಿನಗೆ ಹೊಸ ಚೇತನವನ್ನು ಕೊಡುತ್ತದೆ–ಹೋಗು, ಲಿಯೋನೈನ್, ಅವಳನ್ನು ನಡೆಸಿಕೊಂಡು ಸುತ್ತಾಡಿ ಬಾ" ಎಂದಳು. ಮೆರೀನಾ–"ಇಲ್ಲ ಇಲ್ಲ, ತಾಯಿ ಕ್ಷಮಿಸಿ; ನನ್ನಿಂದ ನಿಮಗೇಕೆ

ಈಗ ಸೇವಕನಿಲ್ಲದಂತಾಗಬೇಕು?" ಎಂದಳು. ಲಿಯೋನ್ಯೈನ್ ಡಯೋನಿಷಿಯಾಳ ಆಪ್ತ ವ್ಯೈಗಾವಲಿನ ಸೇವಕನೆಂಬುದು ಅವಳಿಗೆ ತಿಳಿದಿದ್ದಿತು. ಕಪಟಯಾಗಿದ್ದಾ ಹೆಂಗಸು ಅವಳೊಬ್ಬಳನ್ನೇ ಲಿಯೋನ್ಯೈನನೊಂದಿಗೆ ಬಿಡಲು ನೆಪವೊಂದನ್ನು ಬಯಸುತ್ತಿದ್ದುದರಿಂದ-"ತೆಗೆ ತೆಗೆ; ರಾಜನಾದ ನಿಮ್ಮ ತಂದೆಯ ಬಗೆಗೂ, ನಿನ್ನ ಬಗೆಗೂ ನನಗೆ ಪ್ರೇಮವಿಲ್ಲವೇನು! ದಿನದಿನವೂ ನಾವು ನಿನ್ನ ತಂದೆಯ ಬರವನ್ನೇ ನಿರೀಕ್ಷಿಸುತ್ತಿದ್ದೇವೆ. ಆತನಿಲ್ಲಿಗೆ ಬಂದಾಗ, ನಾವು ವರದಿಮಾಡುವಂತೆ ಅನುಪಮ ಸೌಂದರ್ಯಶಾಲಿಯಾಗಿರಪೆ ನೀನು ಶೋಕದಿಂದ ಈ ರೀತಿ ಬದಲಾಗಿರುವುದನ್ನು ನೋಡಿದಲ್ಲಿ ನಾವು ನಿನ್ನನ್ನು ಯೋಗ್ಯ ರೀತಿಯಲ್ಲಿಸಲಹಲಿಲ್ಲವೆಂದವರು ಭಾವಿಸುವರಷ್ಟೇ! ಹೋಗು ನಿನ್ನನ್ನು ಕೇಳಿಕೊಳ್ಳುತ್ತೇನೆ. ಸುತ್ತಾಡಿ ಬಂದು ಪುನಃ ಮೊದಲಿನಂತೆ ಉಲ್ಲಾಸ ತಳೆ. ಆಬಾಲವೃದ್ಧರೆಲ್ಲರ ಹೃದಯಗಳನ್ನು ಗೆದ್ದ ನಿನ್ನಾ ಮನೋಹರ ಮುಖವನ್ನು ಎಚ್ಚರದಿಂದ ರಕ್ಷಿಸಬೇಕಲ್ಲವೆ?" ಎಂದಳು. ಈಬಗೆಯ ಆಗ್ರಹದಿಂದಾಗಿ ಮೆರೀನಾ-"ಸರಿ, ಹಾಗಿದ್ದರೆ ಹೋಗುವೆ; ಆದರೆ ನನಗೇನೋ ಅದರಲ್ಲಿ ಇಚ್ಛೆಯಿಲ್ಲ" ಎಂದಳು. ಡಯೋನಿಷಿಯಾ ಅಲ್ಲಿಂದ ಹೋಗುತ್ತಾ, ಲಿಯೋನ್ಯೈನನನ್ನು ಕುರಿತು-"ನಾನು ಹೇಳಿದುದು ನೆನಪಿನಲ್ಲಿರಲಿ" ಎಂಬ ಭೀಕರ ಪದಗಳನ್ನು ನುಡಿದಳು. ಭೀಕರವೇಕೆಂದರೆ, ಅವರ ಅರ್ಥ ಅವನು ಮೆರೀನಾಳನ್ನು ಕೊಲ್ಲುವುದನ್ನು ನೆನಪಿನಲ್ಲಿಡಬೇಕೆಂಬುದಾಗಿತ್ತು!

ಮೆರೀನಾ ತನ್ನ ಜನ್ಮಸ್ಥಾನವಾಗಿದ್ದ ಸಾಗರದೆಡೆಗೆ ನೋಡುತ್ತಾ "ಈಗ ಬೀಸುತ್ತಿರುವ ಗಾಳಿ ಪಶ್ಚಿಮ ದಿಕ್ಕಿನದೇ?" ಎಂದಳು. ಲಿಯೋನ್ಯೈನ್ "ನೈಋತ್ಯ ದಿಕ್ಕಿನದು" ಎಂದುತ್ತರಿಸಿದನು. "ನಾನು ಜನಿಸಿದಾಗ ಉತ್ತರ ದಿಕ್ಕಿನ ಗಾಳಿ ಬೀಸುತ್ತಿತ್ತು" ಎಂದಳವಳು. ಆಗವಳ ಮನಃಪಟಲದ ಮೇಲೆ, ಗಾಳಿ-ಬಿರುಗಾಳಿಗಳೂ. ತನ್ನ ತಂದೆಯ ಶೋಕ ಮತ್ತು ತಾಯಿಯ ಮರಣಗಳ ಸ್ಪಷ್ಟವಾದ ಪೂರ್ಣ ಚಿತ್ರವೂ ಸುಳಿಯತೊಡಗಿದವು. ಅವಳು— "ಲೈಕಾರ್ಡಿಯಾ ಹೇಳಿದ ಮೇರೆಗೆ ನನ್ನ ತಂದೆ ಸ್ವಲ್ಪವೂ ಭೀತಿ ತೋರ್ಪಡಿಸದೆ ತಾನೂ ಸಹ ತನ್ನ ರಾಜಹಸ್ತಗಳಿಂದ ಹಗ್ಗವನ್ನು ಹಿಡಿದು, ಅದರಿಂದ ಗಾಯಗೊಳ್ಳುತ್ತಲಿದ್ದರೂ ನಾವಿಕರಿಗೆ 'ಧೈರ್ಯ ತಾಳಿ' ಎಂದು ಕೂಗಿ ಹೇಳುತ್ತಿದ್ದನಂತೆ. ಅಲ್ಲದೆ ಪಟಸ್ತಂಭವನ್ನು ಭದ್ರವಾಗಿ ಹಿಡಿದು ನಿಂತು, ಹಡಗನ್ನೇ ಚೂರು-ಚೂರು ಮಾಡುವಂತಹ ಸಾಗರವನ್ನು ಎದುರಿಸಿ ಸೈರಿಸಿದನಂತೆ" ಎಂದಳು. ಲಿಯೋನ್ಯೈನ್ "ಇದು ನಡೆದುದಾವಾಗ?" ಎಂದನು. ಮೆರೀನಾ-

"ನಾನು ಜನಿಸಿದಾಗ ; ಹಿಂದೆಂದೂ ಸಾಗರದಲೆಗಳೂ ಬಿರುಗಾಳಿಯೂ ಅಷ್ಟು ಕ್ರೋಧೋನ್ಮತ್ತವಾಗಿರಲಿಲ್ಲ" ಎಂದಳು. ನಂತರ ಅವಳು ಆ ಬಿರುಗಾಳಿಯನ್ನೂ, ನಾವಿಕರ ಓಡಾಟವನ್ನೂ, ದೋಣಿಗಾರ ಸಿಳ್ಳುಹಾಕುತ್ತಿದ್ದುದನ್ನೂ, ನಾಯಕನ ಉಚ್ಚಕಂಠದ ಕೂಗನ್ನೂ ವರ್ಣಿಸುತ್ತಾ—"ಅವೆಲ್ಲಾ ಹಡಗಿನ ಗಲಿಬಿಲಿಯನ್ನು ಮುಪ್ಪುರಿಗೊಳಿಸಿದ್ದವು" ಎಂದಳು. ಮೆರೀನಾಳ ಬಳಿ ಲೈಕಾರ್ಡಿಯಾ ಆಕೆಯ ನತದೃಷ್ಟ ಜನನ ವೃತ್ತಾಂತವನ್ನು ಅದೆಷ್ಟು ಬಾರಿ ವರ್ಣಿಸಿದ್ದಳೆಂದರೆ, ಆ ಘಟನೆಗಳೆಲ್ಲಾ ಮೆರೀನಾಳ ಆಲೋಚನಾ ಸರಣಿಯಲ್ಲಿ ಎಂದೆಂದಿಗೂ ಸ್ಥಿರವಾಗಿ ಉಳಿದಿರುವಂತೆ ತೋರುತ್ತಿತ್ತು. ಈ ಹೊತ್ತಿಗೆ ಲಿಯೋನೈನ್ ಅವಳಿಗಡ್ಡ ಬಂದು, ಆಕೆ ಬೇಗ ಕೊನೆಯ ಪ್ರಾರ್ಥನೆಯನ್ನು ಸಲ್ಲಿಸಬೇಕೆಂದು ಹೇಳಿದನು. "ಹಾಗೆಂದರೇನು ?" ಎಂದಳು ಮೆರೀನಾ, ತನಗೇ ಅರಿವಿಲ್ಲದ ಕಾರಣದಿಂದ ಭೀತಿಗೊಳ್ಳುತ್ತಾ. ಲಿಯೋನೈನ್–"ಪ್ರಾರ್ಥನೆ ಸಲ್ಲಿಸುವ ಸಲುವಾಗಿ ನಿನಗೆ ಸ್ವಲ್ಪ ಕಾಲಾವಕಾಶ ಕೊಡಲು ಸಿದ್ಧನಿದ್ದೇನೆ. ಆದರೆ, ನೀನು ಹೊತ್ತುಗಳೆಯಕೂಡದು. ದೇವತೆಗಳಿಗೆ ಬೇಗಲೇ ಕಿವಿ ಕೇಳಿಸುತ್ತದೆ. ನಾನಾದರೋ ತ್ವರೆಯಿಂದ ನನ್ನ ಕಾರ್ಯ ಮುಗಿಸುವೆನೆಂದು ವಚನ ಕೊಟ್ಟಿದ್ದೇನೆ" ಎಂದನು. ಮೆರೀನಾ—"ನೀನು ನನ್ನನ್ನು ಕೊಲ್ಲುವೆಯೇನು ? ಅಯ್ಯೋ, ಏತಕ್ಕಾಗಿ ? ಏತಕ್ಕಾಗಿ ?" ಎಂದಳು. "ನನ್ನ ಒಡತಿಯನ್ನು ತೃಪ್ತಿಗೊಳಿಸುವ ಸಲುವಾಗಿ" ಎಂಬುದೇ ಲಿಯೋನೈನನ ಉತ್ತರವಾಯಿತು. ಮೆರೀನಾ—"ಅವಳು ನನ್ನನ್ನು ಕೊಲ್ಲಲಿಚ್ಛಿಸುವಳೇಕೆ ? ನನ್ನ ಜೀವನದಲ್ಲೆಂದೂ ಆಕೆಗೆ ನಾನು ನೋವುಂಟುಮಾಡಲಿಲ್ಲ ! ಯಾವ ಜೀವಂತ ಪ್ರಾಣಿಗೂ ನಾನು ಕೆಟ್ಟ ಮಾತಾಡಿಲ್ಲ, ಕೆಟ್ಟ ಕೆಲಸಕ್ಕೀಡು ಮಾಡಿಲ್ಲ. ನನ್ನನ್ನು ನಂಬು, ಒಂದೇ ಒಂದು ಜೀವಿಯನ್ನೂ ನಾನು ಕೊಂದಿಲ್ಲ, ಒಂದು ಹುಳುವನ್ನೂ ನೋಯಿಸಿಲ್ಲ. ಅನಪೇಕ್ಷಿತವಾಗಿ ಒಮ್ಮೆ ನಾನು ಹುಳುವೊಂದನ್ನು ತುಳಿದಿದ್ದೆ ; ಆದರೆ ಅದರ ಸಲುವಾಗಿ ನಾನಾ ಮೇಲೆ ಬಹುವಾಗಿ ಅತ್ತೆ. ಈಗ ನಾನು ಹೇಗೆ ಅಪರಾಧಿಯೆನಿಸುವೆ ?" ಎಂದಳು.

ಕೊಲೆಗಡುಕನು—"ಕೃತ್ಯದ ಕಾರಣವನ್ನು ಚರ್ಚಿಸುವ ಭಾರ ನನ್ನದಲ್ಲ. ಅದನ್ನು ನಡೆಸುವುದಷ್ಟೇ ನನ್ನ ಪಾಲಿನ ಕರ್ತವ್ಯ" ಎನ್ನುತ್ತಾ ಅವಳನ್ನು ಕೊಲ್ಲಲುದ್ಯುಕ್ತನಾದನು. ಆ ಕ್ಷಣಕ್ಕೆ ಸರಿಯಾಗಿ, ಅಕಸ್ಮಾತ್ ಹಲವು ಕಡಲುಗಳ್ಳರು ಹಡಗಿನಿಂದ ಅಲ್ಲಿ ಬಂದಿಳಿದರು. ಮೆರೀನಾಳನ್ನು ನೋಡಿ ಅವರು ಅವಳನ್ನು ಸಂಭಾವನೆಯಾಗಿ ತಮ್ಮ ಹಡಗಿಗೆ ಕರೆದೊಯ್ದರು.

ಮೆರೀನಾಳನ್ನು ಕದ್ದೊಯ್ದ ಕಡಲುಗಳ್ಳನು ಅವಳನ್ನು ಮಿಟಲೇನ್ ನಗರಕ್ಕೆ ಕರೆದೊಯ್ದು ಗುಲಾಮಳನ್ನಾಗಿ ಮಾರಿಬಿಟ್ಟನು. ಅಲ್ಲಿ ಅವಳು ಆ ಹೀನಸ್ಥಿತಿಯಲ್ಲಿದ್ದಾಗ್ಯೂ ಸಹ ತನ್ನ ಸೌಂದರ್ಯ ಸದ್ಗುಣಗಳಿಂದ ಇಡೀ ಮಿಟಲೇನ್ ನಗರದಲ್ಲೇ ಪ್ರಸಿದ್ಧಿ ಪಡೆದಳು. ಅವಳನ್ನು ಮಾರಾಟದಲ್ಲಿ ಕೊಂಡಿದ್ದವನು ಆಕೆ ಸಂಪಾದಿಸಿಕೊಟ್ಟ ಹಣದಿಂದಲೇ ಧನಿಕನಾಗಿ ಹೋದನು. ಅವಳು ಗಾಯನ, ನರ್ತನಗಳನ್ನೂ, ಉತ್ತಮ ಕಸೂತಿ ಕೆಲಸವನ್ನೂ ಕಲಿಸಿಕೊಡುತ್ತಿದ್ದು ತನ್ನ ಪಾಂಡಿತ್ಯದಿಂದ ಆರ್ಜಿತವಾದ ಹಣವನ್ನೆಲ್ಲಾ ತನ್ನ ಒಡೆಯ ಒಡೆತಿಯರಿಗೆ ಒಪ್ಪಿಸುತ್ತಿದ್ದಳು. ಅವಳ ಪ್ರೌಢಿಮೆ ಹಾಗೂ ಮಹಾ ಉದ್ಯಮದ ಕೀರ್ತಿ ಮಿಟಲೇನಿನ ತರುಣ ಅಧಿಪತಿಯಾಗಿದ್ದ ಗಣ್ಯ ಲೇಸಿಮೇಕಸನ ಕಿವಿಯನ್ನೂ ಮುಟ್ಟಿತು. ಇಡೀ ನಗರವೇ ಮುಕ್ತ ಕಂಠದಿಂದ ಹೊಗಳುತ್ತಿದ್ದ ಈ ಅನುಪಮ ಗುಣೋತ್ಕರ್ಷವನ್ನು ನೋಡುವ ಸಲುವಾಗಿ ಲೈಸಿಮೇಕಸನೇ ಸ್ವತಃ ಮೆರೀನಾಳ ವಾಸಸ್ಥಳಕ್ಕೆ ಹೋದನು. ಅವಳ ಸಂಭಾಷಣೆ ಲೈಸಿಮೇಕಸನನ್ನು ಮೇರೆಯೇ ಇಲ್ಲದಂತೆ ಮುದಗೊಳಿಸಿತು. ಈ ಕೀರ್ತಿಶಾಲಿನಿಯಾದ ಕನ್ಯೆಯ ಬಗ್ಗೆ ಅವನು ಬಹಳವಾಗಿ ಕೇಳಿ ತಿಳಿದಿದ್ದರೂ ಸಹ, ಮೆರೀನಾ ತನಗೀಗ ಕಂಡಷ್ಟು ಬುದ್ಧಿಶಾಲಿನಿಯೂ, ಗುಣವತಿಯೂ, ಉತ್ತಮಳೂ ಆಗಿರಬಹುದೆಂದು ಆತನೆಣಿಸಿರಲಿಲ್ಲ. ಅವಳಿಂದ ಅಗಲುವಾಗ ಅವನು ಅವಳಿನ್ನು ಮುಂದೆಯೂ ತನ್ನ ಸಚ್ಚರಿತ್ರ ಹಾಗೂ ಉದ್ಯಮಶೀಲ ಮಾರ್ಗದಲ್ಲೇ ಕಷ್ಟ ಸಹಿಷ್ಣುವಾಗಿ ಮುಂದುವರಿಯಲೆಂದು ತಾನು ಆಶಿಸುವುದಾಗಿ ಹೇಳಿದನು. ಮುಂದೆಂದಾದರೂ ಆಕೆಗೆ ಅವನಿಂದ ಸುದ್ದಿ ಬಂದಲ್ಲಿ ಅದು ನಿಸ್ಸಂದೇಹವಾಗಿ ಅವಳಿಗೆ ಶುಭವಾರ್ತೆಯೇ ಆಗಿರುವುದೆಂದು ನುಡಿದು ಅಲ್ಲಿಂದ ತೆರಳಿದನು. ಲೈಸಿಮೇಕಸ್ ಮೆರೀನಾಳನ್ನು ಬುದ್ಧಿ, ಶೀಲ, ಶ್ರೇಷ್ಠಗುಣಗಳೇ ಅಲ್ಲದೆ ಸೌಂದರ್ಯವೇ ಮುಂತಾದ ಬಾಹ್ಯ ಸೊಬಗುಗಳೆಲ್ಲವೂ ಏಕೀಭವಿಸಿರುವಂತಹ ಅಪೂರ್ವ ವ್ಯಕ್ತಿಯೆಂದು ಭಾವಿಸಿದ್ದನು. ಆಕೆಯನ್ನು ವಿವಾಹವಾಗಲು ಆಶಿಸಿದನು. ಅಲ್ಲದೆ ಆಕೆಯ ಹೀನದೆಶೆಯ ಅರಿವು ತನಗಿದ್ದರೂ ಸಹ, ಅವಳ ಜನನ ಉತ್ತಮಕುಲದಲ್ಲೇ ಆಗಿದ್ದಿರಬೇಕೆಂದು ಅವನಿಗೆನಿಸಿತು. ಆದರೆ ಅವಳನ್ನು ಮಾತ್ರ ಯಾರಾದರೂ ತಂದೆ ತಾಯಿಗಳ ಬಗ್ಗೆ ವಿಚಾರಿಸಿದಲ್ಲಿ ಆಕೆ ಮಾತಿಲ್ಲದೆ ಕುಳಿತು ಅಳತೊಡಗುತ್ತಿದ್ದಳು.

*

ಇತ್ತ ಟಾರ್ಸಸಿನಲ್ಲಿ ಕೊಲೆಗಡುಕ ಲಿಯೋನೈನ್, ಡಯೋನಿಷಿಯಾಳ ಕ್ರೋಧದ ಭಯದಿಂದ ಅವಳ ಬಳಿ, ತಾನು ಮೆರೀನಾಳನ್ನು ಕೊಂದು ದಾಗಿಯೇ ಹೇಳಿಬಿಟ್ಟನು. ಆ ದುರುಳೆ, ಮೆರೀನಾ ಸತ್ತುಹೋದಳೆಂದು ಎಲ್ಲೆಡೆಗೂ ಸುದ್ದಿ ಮುಟ್ಟಿಸಿ, ಅವಳಿಗೆ ಅಂತ್ಯಸಂಸ್ಕಾರಗಳನ್ನು ನಡೆಸುವಂತೆ ಸೋಗು ಹಾಕಿದಳು. ಅವಳಿಗಾಗಿ ಭವ್ಯ ಸ್ಮಾರಕವೊಂದನ್ನೂ ಕಟ್ಟಿಸಿ ದ್ದಾಯಿತು ! ಇದಾದ ಸ್ವಲ್ಪ ಕಾಲದಲ್ಲೇ, ಪೆರಿಕ್ಲಿಸ್ ತನ್ನ ಮಗಳನ್ನು ನೋಡಿ ಜೊತೆಗೇ ಕರೆದೊಯ್ಯುವ ಉದ್ದೇಶದಿಂದ ಟೈರ್ ನಗರದಿಂದ ಟಾರ್ಸಸಿಗೆ ಸಮುದ್ರ ಪ್ರಯಾಣ ಬೆಳಸಿ ಬಂದನು. ಆತನೊಂದಿಗೆ ಸ್ವಾಮಿಭಕ್ತ ಸಚಿವ ಹೆಲಿಕೇನಸನೂ ಇದ್ದನು. ಚಿಕ್ಕ ಮಗುವಾಗಿದ್ದ ಮಗಳನ್ನು ಕ್ಲಿಯಾನ್ ಮತ್ತು ಅವನ ಪತ್ನಿಯ ರಕ್ಷಣೆಗೊಪ್ಪಿಸಿ ಹೋದಾಗಿನಿಂದರೂ ಅವಳನ್ನು ನೋಡಿಯೇ ಇರದಿದ್ದ ಆ ರಾಜನಿಗೆ ಗತಿಸಿದ ತನ್ನ ರಾಣಿಯ ಈ ಪ್ರೇಮ ಪುತ್ರಿಯನ್ನು ಕಾಣುವೆನೆಂಬ ಆಲೋಚನೆಯಿಂದಲೇ ಎಷ್ಟು ಹರ್ಷವಾಗಿರ ಬೇಡ ! ಆದರೆ ಮೆರೀನಾ ಸತ್ತಳೆಂದು ಅವರು ಅವನಿಗೆ ತಿಳಿಸಿದಾಗ, ಅವಳಿ ಗಾಗಿ ನಿರ್ಮಿತವಾಗಿದ್ದ ಸ್ಮಾರಕವನ್ನು ಅವನಿಗೆ ತೋರಿದಾಗ, ಈ ನತದೃಷ್ಟ ತಂದೆ ಅನುಭವಿಸಿದ ದುಃಖ ವರ್ಣನೆಗೆ ನಿಲುಕದಂತಹುದು. ಅವನ ಕಡೆಯ ಆಶಾತಂತು, ಅವನ ಪ್ರೇಮದ ಫಯಸೆಯ ಏಕಮಾತ್ರ ಸ್ಮಾರಕ, ಮಣ್ಣು ನೂಡಲ್ಪಟ್ಟಿದ್ದಂತಹ ಆ ದೇಶವನ್ನು ಕಣ್ಣಿನಿಂದ ನೋಡಲಾಗಲಿಲ್ಲ ಆತನಿಗೆ. ಆ ಕೂಡಲೇ ಅವನು ಹಡಗನ್ನೇರಿ ತ್ವರೆಯಿಂದ ಟಾರ್ಸಸನ್ನು ಬಿಟ್ಟು ತೆರಳಿ ದನು. ಹಡಗನ್ನು ಪ್ರವೇಶಿಸಿದ ದಿನದಿಂದ ಆತನ ಮೇಲೆ ಗಾಢವಿಷಣ್ಣತೆಯು ಮಂಕುತನ ಕವಿದುಕೊಂಡಿತು. ಅವನು ಮಾತನಾಡುವುದನ್ನೇ ಬಿಟ್ಟನು. ಸುತ್ತಲಿನ ಪ್ರಪಂಚದ ಯಾವ ಪರಿವೆಯೂ ಸಂಪೂರ್ಣವಾಗಿ ಇಲ್ಲದವನಂತೆ ವರ್ತಿಸತೊಡಗಿದನು.

ಟಾರ್ಸಸಿನಿಂದ ಟೈರ್ ಪಟ್ಟಣದೆಡೆಗೆ ಸಾಗುತ್ತಿದ್ದ ಹಡಗು ಮಾರ್ಗದಲ್ಲಿ ಮೆರೀನಾ ವಾಸಿಸುತ್ತಿದ್ದ ಮಿಟಲೇನ್ ನಗರವನ್ನು ಹಾದುಹೋಗಬೇಕಾಗಿ ದ್ದಿತು. ಅಲ್ಲಿನ ಅಧಿಕಾರಿ ಲೈಸಿಮೇಕಸ್, ದಡದಿಂದಲೇ ಈ ರಾಜನಾವೆ ಯನ್ನು ನೋಡಿ ಒಳಗಿರುವವರು ಯಾರೆಂದು ತಿಳಿಯಲು ಬಯಸಿದನು. ಕುತೂಹಲವನ್ನು ನೀಗುವ ಸಲುವಾಗಿ ದೋಣಿಯೊಂದನ್ನೇರಿ ಹಡಗಿನತ್ತ ಸಾಗಿ ಬಂದನು. ಮಂತ್ರಿ ಹೆಲಿಕೇನಸ್ ಆತನನ್ನು ಮರ್ಯಾದೆಯಿಂದ ಸ್ವಾಗತಿಸಿ, ಹಡಗು ಟೈರ್ ಪಟ್ಟಣದಿಂದ ಬಂದಿರುವುದಾಗಿಯೂ ಅದರಲ್ಲಿ

ತಮ್ಮ ರಾಜ ಪೆರಿಕ್ಲಿಸನನ್ನು ಕರೆದೊಯ್ಯುತ್ತಿರುವುದಾಗಿಯೂ ತಿಳಿಸಿದನು. ರಾಜನ ವಿಷಯವನ್ನು ಹೇಳುತ್ತಾ ಹೆಲಿಕೇನಸ್—"ಸ್ವಾಮಿ, ಆತ, ಕೇವಲ ಕೊರಗಿನಲ್ಲಿ ಮುಳುಗಿ ಹೋಗಿ, ಈ ಮೂರು ತಿಂಗಳಿನಿಂದ ಒಂದೇ ಒಂದು ಮಾತನ್ನಾಡದೆ, ಜೀವಾಧಾರವಾಗಿ ಏನನ್ನೂ ಸೇವಿಸದೆ ಇದ್ದಾನೆ. ಆತನ ವಿಕಲ್ಪಿತ ಮನಃಸ್ಥಿತಿಯ ಕಾರಣವನ್ನು ಪೂರ್ಣವಾಗಿ ತಿಳಿಸಹೋದಲ್ಲಿ ನಿಮಗೆ ಬೇಸರವಾದೀತು. ಆದರೆ ವಿಶೇಷವಾಗಿ ಈ ಆಘಾತ ಉಂಟಾಗಿರುವುದು ಅಕ್ಕರೆಯ ಪುತ್ರಿ ಮತ್ತು ಪತ್ನಿಯ ಅಗಲಿಕೆಯಿಂದ" ಎಂದು ತಿಳಿಸಿದನು. ಲೈಸಿಮೇಕಸ್ ಈ ದುಃಖಿತ ರಾಜನನ್ನು ನೋಡಲು ಅನುಮತಿ ಕೋರಿದನು. ಪೆರಿಕ್ಲಿಸನನ್ನು ನೋಡಿದಾಗ ಆತ ಹಿಂದೊಮ್ಮೆ ಭವ್ಯವ್ಯಕ್ತಿಯಾಗಿದ್ದಿರಬೇಕೆಂಬ ಅರಿವು ಲೈಸಿಮೇಕಸನಿಗುಂಟಾಯಿತು. ಅವನು ಪೆರಿಕ್ಲಿಸನನ್ನು ಕುರಿತು—"ಮಹಾರಾಜನೆ, ಶುಭವಾಗಲಿ ನಿನಗೆ; ದೇವತೆಗಳು ನಿನ್ನನ್ನು ರಕ್ಷಿಸಲಿ; ರಾಜಪುರುಷನೆ, ನಿನಗೆ ಮಂಗಳವಾಗಲಿ" ಎಂದನು. ಆದರವನು ವ್ಯರ್ಥವಾಗಿ ಮಾತನಾಡಿದಂತಾಯಿತು. ಪೆರಿಕ್ಲಿಸ್ ಉತ್ತರಕೊಡಲಿಲ್ಲ. ಅಪರಿಚಿತನೊಬ್ಬ ತನ್ನ ಬಳಿ ನಿಂತಿರುವನೆಂಬ ಅರಿವೂ ಆತನಿಗುಂಟಾದಂತೆ ತೋರಲಿಲ್ಲ. ಆಗ ಲೈಸಿಮೇಕಸನಿಗೆ ಅಪ್ರತಿಮಳಾದ ಮೆರೀನಾಳ ನೆನಪು ಬಂದು, ಅದೃಷ್ಟವಶಾತ್ ಆಕೆ ತನ್ನಿನಿದನಿಯ ಸೊಲ್ಲಿನಿಂದ ಈ ಮೌನಿಯಾದ ರಾಜನನ್ನು ಮಾತನಾಡಿಸಲು ಸಾಧ್ಯವಾಗಬಹುದೇನೋ ಎಂದೆನಿಸಿತು. ಅವನು ಹೆಲಿಕೇನಸನ ಅನುಮತಿ ಪಡೆದು, ಮೆರೀನಾಳಿಗೆ ಕರೆ ಕಳುಹಿಸಿದನು. ಆಕೆ, ತನ್ನ ಸ್ವಂತ ತಂದೆ ಎಲ್ಲಿ ದುಃಖದಿಂದ ಅಚಲನಾಗಿ ಕುಳಿತಿದ್ದನೋ ಆ ಹಡಗನ್ನು ಪ್ರವೇಶಿಸಿದಾಗ, ಅಲ್ಲಿದ್ದವರೆಲ್ಲಾ ಆಕೆ ತಮ್ಮ ರಾಜಪುತ್ರಿಯೆಂಬುದನ್ನು ಅರಿತಿರುವಂತೆಯೇ ಅವಳನ್ನು ಸ್ವಾಗತಿಸಿದರು. "ನಿಜಕ್ಕೂ, ಇವಳು ಬಹು ಮನೋಹರ ಕನ್ನಿಕೆ" ಎಂದರು. ಅವರ ಹೊಗಳಿಕೆಯನ್ನು ಕೇಳಿ ಲೈಸಿಮೇಕಸನ ಮನ ಹಿಗ್ಗಿತು. ಅವನು—"ನಿಜ, ನಿಜ. ಅವಳು ಉತ್ತಮ ಕುಲ ಸಂಭೂತಳೆನ್ನುವುದೊಂದು ಖಚಿತವಾದಲ್ಲಿ ನಾನು ಇನ್ನೂ ಉತ್ತಮಳಾದವಳನ್ನು ಎಂದಿಗೂ ಬಯಸದೆ, ಇಂತಹ ಪತ್ನಿಯನ್ನು ಪಡೆಯಲು ನಾನೇ ಧನ್ಯನೆಂದು ಭಾವಿಸುವೆ" ಎಂದನು. ನಂತರ ಅವನು ಅವಳನ್ನು ಬಹು ಮರ್ಯಾದೆಯಿಂದ, ಹೀನಳಾಗಿ ತೋರುವ ಆ ಕನ್ನಿಕೆ ತಾನೆಣಿಸುವಂತಹ ಉತ್ತಮಕುಲ ಸಂಭೂತೆಯೇ ಆಗಿರುವಳೋ ಎಂಬಂತೆ ಸಂಬೋಧಿಸಿದನು. ಆ ಹಡಗಿನಲ್ಲಿದ್ದ ಮಹಾರಾಜನೊಬ್ಬನು ವಿಷಣ್ಣ ಮೌನದಿಂದ ಆವೃತನಾಗಿ

ಬಿಟ್ಟಿರುವನೆಂಬುದನ್ನು ತಿಳಿಸಿದನು. ಮೆರೀನಾ ಆನಂದ ಆರೋಗ್ಯ ಗಳನ್ನೀಯುವ ದಿವ್ಯಕನ್ನಿಕೆಯೋ ಎಂಬಂತೆ, ಆಕೆ ಅಲ್ಲಿದ್ದ ಅಪರಿಚಿತ ರಾಜ ಪುರುಷನನ್ನು ಗುಣಪಡಿಸುವ ಕಾರ್ಯವನ್ನು ಕೈಗೊಳ್ಳಬೇಕೆಂದು ಕೋರಿದನು. ಮೆರೀನಾ—"ಸ್ವಾಮಿ, ಆತನನ್ನು ಗುಣಪಡಿಸಲು ನನ್ನಿಂದಾಗುವಷ್ಟು ಕೌಶಲ್ಯದಿಂದ ಪ್ರಯತ್ನಿಸುತ್ತೇನೆ. ಅದರೆ ನನ್ನದೊಂದು ಬೇಡಿಕೆ. ಆತನ ಬಳಿ ನಾನು ಮತ್ತು ನನ್ನ ದಾಸಿಯು ಹೊರತು ಬೇರಾರೂ ಇರಕೂಡದು" ಎಂದಳು.

ಹಿಂದೆ ರಾಜವಂಶದವಳಾಗಿದ್ದ ತಾನು ಈಗ ಗುಲಾಮಳೆಂಬುದನ್ನು ಹೇಳಿಕೊಳ್ಳಲು ಲಜ್ಜೆಪಟ್ಟು ಅವಳು, ಮಿಟಲೇನಿನಲ್ಲಿ, ತನ್ನ ಜನನವೃತ್ತಾಂತ ವನ್ನು ಹೇಳದೆ ಮರೆಮಾಚಿದ್ದಳು. ಆದರೀಗ, ಪೆರಿಕ್ಲಿಸನ ಬಳಿ, ಪ್ರಥಮ ದಲ್ಲಿಯೇ ತನ್ನ ಭಾಗ್ಯ ಚಕ್ರದಲ್ಲಿನ ವಿಲಕ್ಷಣ ಮಾರ್ಪಾಟನ್ನು ತಿಳಿಸುತ್ತಾ ತಾನೆಂತಹ ಉತ್ತಮ ಸ್ಥಿತಿಯಿಂದ ಹೀನ ದೆಶೆಗಿಳಿದಿರುವಳೆಂಬುದನ್ನು ಹೇಳಿ ಕೊಂಡಳು. ರಾಜಪುರುಷನಾದ ತನ್ನ ತಂದೆಯೆದುರೇ ಮಾತನಾಡು ತ್ತಿರುವೆನೆಂಬ ಅರಿವು ಆಕೆಗಿದ್ದಿತೋ ಎಂಬಂತೆ ಅವಳು ಆಡಿದ ಮಾತು ಗಳೆಲ್ಲಾ ಅವಳ ಜೀವನ ವೃತ್ತಾಂತವೇ ಆಗಿದ್ದಿತು. ಆದರೆ ಅವಳು ಈ ರೀತಿ ಮಾಡಿದ್ದಕ್ಕೆ ಕಾರಣವಿಲ್ಲದಿರಲಿಲ್ಲ. ದುಃಖಿತರೆದುರು ಅವರ ದೌರ್ಭಾಗ್ಯಕ್ಕೆ ಸಮನೆನಿಸುವಂಹ ಇನ್ನೊಂದು ಆಪತ್ಪರಂಪರೆಯನ್ನು ವರ್ಣಿಸುವುದಕ್ಕಿಂತ ಪರಮೌಷಧಿ ಬೇರೊಂದಿಲ್ಲವೆಂದು ಆಕೆ ಗ್ರಹಿಸಿದ್ದಳು. ಅವಳ ಮಧುರ ಧ್ವನಿ ಕಿವಿಗೆ ಬಿದ್ದು, ಮೈಮರೆತಿದ್ದ ರಾಜನನ್ನು ಎಚ್ಚರಗೊಳಿಸಿತು. ಅಲ್ಲಿಯವರೆಗೂ ಅಲುಗಾಡದೆ ಸ್ಥಿರವಾಗಿದ್ದ ತನ್ನ ಕಣ್ಣುಗಳನ್ನು ಅವನೀಗ ಮೇಲಕ್ಕೆತ್ತಿದನು. ತಾಯಿಯದೇ ಪ್ರತಿರೂಪವಾಗಿದ್ದ ಮೆರೀನಾ ಆತನ ಆಶ್ಚರ್ಯಭರಿತ ದೃಷ್ಟಿಗೆ ಅವನ ಮೃತ ರಾಣಿಯ ಸ್ವರೂಪವನ್ನೇ ತಂದೊಡ್ಡಿ ದಂತೆ ತೋರಿತು. ದೀರ್ಘಮೌನಿಯಾಗಿದ್ದ ರಾಜನೀಗ ಪುನಃ ಮಾತನಾಡಿ ದುದನ್ನು ಅಲ್ಲಿದ್ದವರೆಲ್ಲ ಕೇಳಿದರು. ಜಾಗೃತನಾದ ಪೆರಿಕ್ಲಿಸ್–"ನನ್ನ ಪ್ರೇಮದ ಪತ್ನಿ ಈ ಕನ್ನಿಕೆಯಂತೆಯೇ ಇದ್ದಳು. ನನ್ನ ಮಗಳೂ ಹೀಗೆಯೇ ಇರಬಹುದಾಗಿತ್ತು. ನನ್ನ ರಾಣಿಯದೇ ಹುಬ್ಬುಗಳು, ಅವಳದೇ ನಿಲುವು, ಅಂತಹುದೇ ಎತ್ತರ, ಅಂತಹುದೇ ಇನಿದನಿ, ಅದೇ ಹೊಳಪು ಗಣ್ಣುಗಳು! ನೀನೆಲ್ಲಿ ವಾಸಿಸುವೆ, ಓ ಕನ್ನಿಕೆ! ನಿನ್ನ ಜನ್ಮವೃಂತಾಂತವನ್ನು ನನಗೆ ಹೇಳು. ನೀನು ತಪ್ಪಿನಿಂದ ಅನ್ಯಾಯಕ್ಕೊಳಗಾದವಳೆಂದೂ, ನನ್ನ

ದುಃಖದೊಂದಿಗೆ ಹೋಲಿಸಿದಲ್ಲಿ, ನಿನ್ನ ದುಃಖ ನನ್ನದಕ್ಕೆ ಸಮನೆನಿಸಬಹುದೆಂದೂ ನೀನೇನೋ ಹೇಳಿದಂತಿತ್ತಲ್ಲವೆ?" ಎಂದನು. ಮೆರೀನಾ— "ಹೌದು, ನಾನು ಅದೇ ಅರ್ಥಕೊಡುವ ಮಾತುಗಳನ್ನು ಹೇಳಿದ್ದು ನಿಜ ನನ್ನ ಭಾವನೆಗೆ ಸಂಭವನೀಯುವೆಂದು ತೋರಿದುದನ್ನು ನಾನು ನುಡಿದೆನಷ್ಟೆ" ಎಂದಳು. ಪೆರಿಕ್ಲಿಸ್—"ನಿನ್ನ ಕಥೆಯನ್ನು ನನಗೆ ಹೇಳು" ಎನ್ನುತ್ತಾ "ನನ್ನ ಕಷ್ಟಗಳಲ್ಲಿ ಸಾವಿರದ ಒಂದನೆಯ ಭಾಗವನ್ನಾದರೂ ನೀನು ಅರಿತಿರುವೆಯಾದರೆ ನೀನು ನಿನ್ನ ಕಷ್ಟ ಸುಖಗಳನ್ನು ಪುರುಷನಂತೆ ಎದುರಿಸಿರುವೆಯೆಂದೂ, ನಾನು ಹೆಂಗಸಿನಂತೆ ನನ್ನ ಕಷ್ಟ ಸಹಿಸಿರುವೆನೆಂದೂ ಭಾವಿಸುತ್ತೇನೆ. ನೀನಾದರೋ ಅರಸರ ಗೋರಿಯೆಡೆಗೆ ನೆಟ್ಟನೋಟದಿಂದ ನೋಡುವ ಸಹನೆಯೇ ಮೂರ್ತಿವೆತ್ತಂತೆ, ಅಡಚಣೆಗಳನ್ನೆಲ್ಲಾ ಎಳೆನಗುವಿನಿಂದಲೇ ತೊಡೆದುಹಾಕುವಂತೆ ತೋರುವೆ. ಮಗು, ನಿನ್ನ ಪದವಿಯನ್ನು ನೀನು ಕಳೆದುಕೊಂಡುದು ಹೇಗೆ? ಹೇಳು ಹೇಳು, ನಿನ್ನ ಕತೆಯನ್ನು ವಿವರಿಸು. ಬಾ, ನನ್ನ ಬಳಿಯೇ ಕುಳಿತುಕೋ" ಎಂದನು.

ಅವಳು ತನ್ನ ಹೆಸರು ಮೆರೀನಾ ಎಂದು ತಿಳಿಸಿದಾಗ, ಪೆರಿಕ್ಲಿಸನ ಆಶ್ಚರ್ಯ ಎಲ್ಲೆ ಮೀರಿತು. ಅದು ಸಾಮಾನ್ಯ ಹೆಸರಾಗಿರದೆ, ಸಮುದ್ರದ ಮೇಲೆ ಹುಟ್ಟಿದವಳೆಂಬುದನ್ನು ಸೂಚಿಸುವ ಸಲುವಾಗಿ ತಾನೇ ಮಗಳಿಗಾಗಿ ಕಲ್ಪಿಸಿದ್ದನಲ್ಲವೆ? ಅವನು "ಅಯ್ಯೋ! ಇದು ನನ್ನನ್ನು ಅಣಕವಾಡುವಂತಿದೆ ಜಗತ್ತೆಲ್ಲ ನನ್ನನ್ನು ನೋಡಿ ನಗಲೆಂದು, ಕ್ರೋಧೋದ್ದೀಪನಾದ ಯಾರೋ ದೇವತೆ ನಿನ್ನನ್ನಿಲ್ಲಿಗೆ ಕಳುಹಿಸಿರಬೇಕು" ಎಂದನು. ಮೆರೀನಾ-"ಸ್ವಾಮಿ ತಾಳ್ಮೆಯಿಂದ ಕೇಳಿರಿ. ಇಲ್ಲದಿದ್ದರೆ ನಾನಿಲ್ಲಿಗೇ ನಿಲ್ಲಿಸಬೇಕಾಗುವುದು" ಎಂದಳು. ಪೆರಿಕ್ಲಿಸ್-ಇಲ್ಲ ಇಲ್ಲ, ನಾನು ತಾಳ್ಮೆಯಿಂದಿರುತ್ತೇನೆ. ನಿನ್ನ ಹೆಸರು ಮೆರೀನಾ ಎಂದು ಹೇಳಿ ನೀನು ನನ್ನನ್ನೆಷ್ಟು ಚಕಿತಗೊಳಿಸಿರುವೆ ಎಂಬುದನ್ನು ನೀನರಿಯೆ" ಎಂದನು. ಅವಳು-"ಈ ಹೆಸರನ್ನು, ದೊಡ್ಡ ಅಧಿಕಾರದಲ್ಲಿದ್ದ ನನ್ನ ತಂದೆ, ರಾಜನಾಗಿದ್ದ ನನ್ನ ತಂದೆ, ನನಗೆ ಕೊಟ್ಟನು" ಎಂದಳು. "ಏನೇನು? ರಾಜನ ಮಗಳೇ? ಮೆರೀನಾ ಎಂದು ಹೆಸರೇ?" ನೀನು ನಿಜವಾಗಿಯೂ ದೇಹವುಳ್ಳ ಮಾನವಿಯೇನು? ನೀನೊಬ್ಬ ದೇವ ಕನ್ನಿಕೆಯಲ್ಲವಷ್ಟೆ? ಮುಂದೆ ಹೇಳು, ನೀನೆಲ್ಲಿ ಹುಟ್ಟಿದೆ? ಮೆರೀನಾ ಎಂದೇಕೆ ನಿನ್ನನ್ನು ಕರೆವರು?" ಎಂದನು ಪೆರಿಕ್ಲಿಸ್. ಅವಳು –"ನಾನು

ಸಮುದ್ರದ ಮೇಲೆ ಹುಟ್ಟಿದ್ದರಿಂದ ನನ್ನನ್ನು ಮೆರೀನಾ ಎಂದು ಕರೆದರು. ನನ್ನ ತಾಯಿ ಒಬ್ಬ ರಾಜಪುತ್ರಿಯಾಗಿದ್ದಳು. ನನ್ನ ದಾದಿ ಲೈಕಾರ್ಡಿಯಾ ಆಗಾಗ್ಯೆ ಅಳುತ್ತಾ ನನಗೆ ಹೇಳುತ್ತಿದ್ದಂತೆ, ನನ್ನ ತಾಯಿ ನಾನು ಜನಿಸಿದ ಕ್ಷಣದಲ್ಲೇ ಮೃತಳಾದಳು. ರಾಜನಾದ ನನ್ನ ತಂದೆ ನನ್ನನ್ನು ಟಾರ್ಸಸಿನಲ್ಲಿ ಬಿಟ್ಟಿದ್ದನು. ಅಲ್ಲಿ ಕ್ಲಿಯಾನನ ದುಷ್ಟ ಪತ್ನಿ ನನ್ನನ್ನು ಕೊಲ್ಲಲೆಳಸಿದಾಗ, ಕಡಲುಗಳ್ಳರ ಗುಂಪೊಂದು ಬಂದು ನನ್ನನ್ನು ರಕ್ಷಿಸಿ, ಮಿಟಲೇನಿಗೆ ತಂದುಬಿಟ್ಟಿತು. ಇದೇನು ಸ್ವಾಮಿ, ನೀವಳುವಿರೇಕೆ? ನಾನು ಮೋಸಗೊಳಿಸುತ್ತಿರುವನೆಂದು ನೀವು ತಿಳಿದಿರಬಹುದು. ಆದರೆ, ಇಲ್ಲ; ಸತ್ಯವಾಗಿಯೂ ನಾನು ರಾಜ ಪೆರಿಕ್ಲಿಸನ ಮಗಳು–ಆ ರಾಜ ಪೆರಿಕ್ಲಿಸ್ ಇನ್ನೂ ಜೀವಂತನಾಗಿದ್ದಲ್ಲಿ" ಎಂದಳು. ಪೆರಿಕ್ಲಿಸ್ ಹಠಾತ್ತಾಗಿ ಉಂಟಾದ ಈ ಆನಂದಾತಿರೇಕದಿಂದ ಭೀತಿಗೊಂಡು, ಅದು ಸತ್ಯವೇ ಎಂದು ಅನುಮಾನಿಸುತ್ತಾ, ಉಚ್ಚಕಂಠದಿಂದ ಸೇವಕರನ್ನು ಕೂಗಿ ಕರೆದನು. ಅವರು ತಮ್ಮ ಪ್ರೇಮದ ರಾಜನ ಧ್ವನಿಯನ್ನು ಮತ್ತೊಮ್ಮೆ ಕೇಳಿ ನಲಿದಾಡಿದರು. ಅವನು ಹೆಲಿಕೇನಸನನ್ನು ಕುರಿತು–"ಓ ಹೆಲಿಕೇನಸ್! ನನ್ನನ್ನು ಪ್ರಹರಿಸು; ಗಾಯಗೊಳಿಸು; ಯಾವುದಾದರೊಂದು ನೋವಿಗೆ ನನ್ನನ್ನು ಗುರಿಮಾಡು–ಇಲ್ಲದಿದ್ದಲ್ಲಿ ಈ ಆನಂದ ತರಂಗಗಳು ಮುನ್ನುಗ್ಗಿ, ಅದರ ಹೊಡೆತದಿಂದ ನನ್ನ ಜೀವದ ದಂಡೆಯೇ ಮುಳುಗಿಹೋಗಬಹುದು. ಓ, ಬಾ ಇಲ್ಲಿ! ಸಮುದ್ರದಲ್ಲಿ ಜನಿಸಿ, ಟಾರ್ಸಸಿನಲ್ಲಿ ಸಮಾಧಿಗೊಂಡು, ಪುನಃ ಸಮುದ್ರದಲ್ಲೇ ದೊರಕಿದ ನನ್ನ ಮಗುವೇ, ಇಲ್ಲಿ ಬಾ! ಹೆಲಿಕೇನಸ್, ಅಡ್ಡಬೀಳು, ದೇವತೆಗಳಿಗೆ ವಂದನೆಗಳನ್ನರ್ಪಿಸು! ಇವಳೇ ಮೆರೀನಾ. ನನ್ನ ಮಗುವೇ ನಿನಗನಂತ ಆಶೀರ್ವಾದಗಳು. ಹೆಲಿಕೇನಸ್, ನನ್ನ ಹೊಸ ಉಡುಪುಗಳನ್ನೇ ನನಗೆ ಕೊಡು: ಅವಳು ಆ ದುರುಳೆ ಡಯೋನಿಷಿಯಾಳಿಂದ ಟಾರ್ಸಸಿನಲ್ಲಿ ಸಾಯಬೇಕಾಗಿದ್ದಿತಂತೆ. ಆದರೆ ಸಾಯಲಿಲ್ಲ. ಅವಳೇ ನಿಮಗೆಲ್ಲವನ್ನೂ ಹೇಳುತ್ತಾಳೆ–ನೀವವಳೆದುರು ಮೊಣಕಾಲೂರಿ ಕುಳಿತು ಆಕೆಯನ್ನು ನಿಮ್ಮ ರಾಜಕುವರಿಯೆಂದು ಕರೆವಾಗ, ಅವಳೇ ಹೇಳುತ್ತಾಳೆ" ಎನ್ನುತ್ತಾ ಲೈಸಿಮೇಕಸನನ್ನು ಅದೇ ಮೊದಲಬಾರಿಗೆ ನೋಡಿ "ಇದಾರಿಲ್ಲಿ?" ಎಂದನು. ಹೆಲಿಕೇನಸ್ "ಪ್ರಭು, ಇವರು ಮಿಟಲೇನಿನ ಅಧಿಪತಿ; ನಿಮ್ಮ ದುಃಖವೃತ್ತಾಂತವನ್ನು ಕೇಳಿ ನಿಮ್ಮನ್ನು ನೋಡಲು ಬಂದಿದಾರೆ" ಎಂದು ತಿಳಿಸಿದನು. ಪೆರಿಕ್ಲಿಸ್–ಅಯ್ಯಾ, ನಾನು ನಿಮ್ಮನ್ನು ಆಲಂಗಿಸಿಕೊಳ್ಳುತ್ತಿದ್ದೇನೆ; ನನ್ನ ರಾಜ

ಪೋಷಾಕುಗಳನ್ನು ಕೊಡಿ, ಅಬ್ಬ! ನಾನು ನೋಡಲು ಹೇಗೆ ಕಾಣುತ್ತಿದ್ದೇನೆ! ಓ ದೇವರೇ, ನನ್ನ ಮಗಳನ್ನು ಅನುಗ್ರಹಿಸು; ಏನಿದು. ನಿಲ್ಲಿ ಅದಾವ ಗಾಯನ ನನಗೆ ಕೇಳಿಬರುತ್ತಿರುವುದು ?" ಎಂದನು. ಪೆರಿಕ್ಲಿಸನ ಕಿವಿಗೆ, ಆಗ ದಯಾಪರನೊಬ್ಬ ದೇವತೆ ಕಳುಹಿಸಿದನೆಂದೋ ಇಲ್ಲವೇ ಅನಂದಾತಿಶಯದಿಂದ ಆತನಿಗುಂಟಾಗಿದ್ದ ಭ್ರಾಂತಿಯಿಂದಲೋ. ಮೃದುಮಧುರ ಗಾಯನ ಕೇಳಿ ಬಂದಿತು. ಹೆಲಿಕೇನಸನು–"ಪ್ರಭು ! ನನಗಾವ ಗಾನವೂ ಕೇಳಿಬರುತ್ತಿಲ್ಲ" ಎಂದನು. "ಏನು ! ಇಲ್ಲವೆ ? ಏಕೆ, ಅದು ಸತ್ಯವಾಗಿಯೂ ಗಂಧರ್ವಲೋಕದ ದಿವ್ಯ ಗಾಯನ" ಎಂದನು ಪೆರಿಕ್ಲಿಸ್. ಅದರಲ್ಲಿ ಯಾವ ಗಾನವೂ ಕೇಳಿಬರುತ್ತಿರಲಿಲ್ಲವಾದ್ದರಿಂದ ಲೈಸಿಮೇಕಸ್ ಈ ಅನಿರೀಕ್ಷಿತ ಆನಂದ ರಾಜನನ್ನು ಭ್ರಾಂತಗೊಳಿಸಿರಬೇಕೆಂದು ತೀರ್ಮಾನಿಸಿದನು. ಅವನು "ಆತನನ್ನು ವಿರೋಧಿಸುವುದು ಒಳಿತಲ್ಲ; ಆತನಿಚ್ಛೆಯಂತೆಯೇ ಹೋಗಗೊಡಿ" ಎಂದನು. ಆಗ ಅವರೆಲ್ಲ ತಮಗೂ ಗಾನ ಕೇಳಿಬಂದಿತೆಂದರು. ನಂತರ ಪೆರಿಕ್ಲಿಸ್ ಮೈಮರೆಯಿಸುವ ನಿದ್ರೆ ತನ್ನನ್ನು ಆವರಿಸುತ್ತಿರುವುದೆಂದು ಹೇಳಿಕೊಂಡನು. ಆಗ ಲೈಸಿಮೇಕಸ್ ಅಗ್ರಹಪೂರ್ವಕವಾಗಿ ಆತನನ್ನು ಶಯ್ಯೆಯ ಮೇಲೊರಗಿಸಿ ವಿಶ್ರಮಿಸುವಂತೆ ಕೋರಿದನು. ಅಲ್ಲಿ, ಆತನು ಆನಂದಾತಿಶಯದಿಂದ ಮುಗ್ಧನಾಗಿ ಗಾಢನಿದ್ರೆಗೊಳಗಾದನು. ಮೆರೀನಾ ನೀರವವಾಗಿ ನಿದ್ರಿಸುತ್ತಿದ್ದ ತಂದೆಯ ಶಯ್ಯೆಯ ಬಳಿಯಲ್ಲೇ ಕಾಯುತ್ತ ಕುಳಿತಳು.

ಮಲಗಿದ್ದಾಗ ಪೆರಿಕ್ಲಿಸನಿಗೆ ಒಂದು ಕನಸಾಯಿತು. ಈ ಕನಸಿನಿಂದಲೇ ಅವನು ಎಫೀಸಸ್ ನಗರಕ್ಕೆ ಹೋಗಲು ನಿರ್ಧರಿಸುವಂತಾಯಿತು. ಆ ಕನಸಿನಲ್ಲಿ ಅವನಿಗೆ ಎಫೀಸಸ್‌ನವರ ಅಧಿದೇವತೆಯಾದ ಡಯಾನಾ ಕಾಣಿಸಿಕೊಂಡು ಅಲ್ಲಿದ್ದ ತನ್ನ ದೇವಾಲಯಕ್ಕವನು ತೆರಳಬೇಕೆಂದೂ ಅಲ್ಲಿ ತನ್ನ ಗರ್ಭಗುಡಿಯ ವೇದಿಕೆಯೆದುರು ಅವನ ಜೀವನ, ಕಷ್ಟಪರಂಪರೆಗಳ ಕತೆಯನ್ನು ನಿವೇದಿಸಬೇಕೆಂದೂ ಆಜ್ಞಾಪಿಸಿದಳು. ಅಲ್ಲದೆ ಆ ದೇವತೆ, ಅವನು ತನ್ನೀ ಆಜ್ಞೆಯನ್ನು ಪಾಲಿಸಿದಲ್ಲಿ, ತನ್ನ ಬೆಳ್ಳಿಯ ಬಿಲ್ಲಿನ ಸಾಕ್ಷಿಯಾಗಿಯೂ ಮುಂದೆ ಆತನಿಗೆ ಅಪೂರ್ವ ಆನಂದವನ್ನು ದಯಪಾಲಿಸುವುದಾಗಿ ವಚನವಿತ್ತಳು. ಕನಸಿನಿಂದ ಎಚ್ಚೆತ್ತಾಗ ಪೆರಿಕ್ಲಿಸನಿಗೆ ಅಪೂರ್ವ ಚೈತನ್ಯ ಪಡೆದಂತೆ ಭಾಸವಾಯಿತು. ಅವನು ಎಲ್ಲರಿಗೂ ತನ್ನ ಕನಸನ್ನು ತಿಳಿಸಿ, ಆ ದೇವತೆಯ ಆಜ್ಞಾನುಸಾರವಾಗಿ ನಡೆಯಲು ನಿರ್ಧರಿಸಿದನು.

ನಂತರ ಲೈಸಿಮೇಕಸ್, ತನ್ನ ನಗರದೊಳಗೆ ಬಂದು ಅಲ್ಲಿ ದೊರೆಯ್ಯ ಬಹುದಾದ ಮನರಂಜನೆಯನ್ನು ಪಡೆಯುವಂತೆ ಪೆರಿಕ್ಲಿಸನಿಗೆ ಆಮಂತ್ರಣ ವಿತ್ತನು. ಪೆರಿಕ್ಲಿಸ್ ಅವನ ಆಹ್ವಾನವನ್ನು ಅಂಗೀಕರಿಸಿ ಒಂದೆರಡು ದಿನ ಅಲ್ಲಿಯೇ ಉಳಿಯಲು ಸಮ್ಮತಿಸಿದನು. ಆಗ, ಅಜ್ಞಾತ ಸ್ಥಿತಿಯಲ್ಲಿದ್ದಾಗಲೇ ತಾನಷ್ಟು ಗೌರವಿಸಿದ್ದ ಪ್ರಿಯ ಮೆರೀನಾಳ ರಾಜಪಿತೃವಿನ ಸ್ವಾಗತಕ್ಕಾಗಿ, ಮಿಟಲೀನಿನ ಅಧಿಪತಿಯು ಏರ್ಪಡಿಸಿದ ಕಾರ್ಯಕ್ರಮಗಳ ವೈಭವವನ್ನು ನಾವೇ ಊಹಿಸಬಹುದಲ್ಲವೆ? ಪೆರಿಕ್ಲಿಸ್, ತನ್ನ ಮಗಳ ಹೀನದೆಶೆಯಲ್ಲಿ ಲೈಸಿಮೇಕಸ್ ಅವಳನ್ನು ಹೇಗೆ ಗೌರವಿಸಿದ್ದನೆಂಬುದನ್ನು ತಿಳಿದಾಗ, ಸ್ವತಃ ಮೆರೀನಾ ಅವನ ಪ್ರೇಮಾದರಗಳಿಗೆ ಅವಿರೋಧಿಯಾಗಿದ್ದಳೆಂದು ಅರಿತಾಗ, ತಾನೂ ಯಾವ ಬಗೆಯಲ್ಲೂ ಅಸಮ್ಮತಿ ಸೂಚಿಸಲಿಲ್ಲ. ಆದರೆ, ಅಂಗೀಕಾರ ಮುದ್ರೆಯನ್ನೊತ್ತುವ ಮೊದಲು, ಅವರು ತನ್ನೊಂದಿಗೆ ಎಫೀಸಸ್‌ನ ಡಯಾನಾ ದೇವಾಲಯವನ್ನು ಸಂದರ್ಶಿಸಬೇಕೆಂದು ಮಾತ್ರ ನಿಬಂಧನೆ ಯನ್ನೊಡ್ಡಿದನು. ಶೀಘ್ರದಲ್ಲಿಯೇ ಈ ಮೂವರೂ ದೇವಾಲಯವನ್ನು ಕುರಿತು ಸಮುದ್ರಯಾನ ಬೆಳಸಿದರು.

ಪೆರಿಕ್ಲಿಸನೂ, ಅವನ ಪರಿವಾರವೂ ದೇವಾಲಯವನ್ನು ಒಳಹೊಕ್ಕಾಗ ದೇವತೆಯ ವೇದಿಕೆಯ ಬಳಿ, ಪೆರಿಕ್ಲಿಸನ ಪತ್ನಿಯ ಜೀವದಾತನಾಗಿದ್ದ ಸೆರಿಮೋನ್ ನಿಂತಿದ್ದನು. ಆತನೀಗ ಬಹು ವೃದ್ಧನಾಗಿದ್ದನು. ಆ ದೇವಾಲಯ ದಲ್ಲೀಗ ಅರ್ಚಕಳಾಗಿದ್ದ ಥಯಿಸಾ ಸಹ ವೇದಿಕೆಯ ಮುಂದೆಯೇ ನಿಂತಿದ್ದಳು. ಅವಳ ನಷ್ಟದಿಂದಾದ ದೀರ್ಘಕೊರಗಿನಲ್ಲಿ ಮುಳುಗಿಹೋಗಿದ್ದುದರಿಂದ ಪೆರಿಕ್ಲಿಸ್ ಬಹುವಾಗಿ ಮಾರ್ಪಟ್ಟಿದ್ದರೂ ಸಹ, ಥಯೀಸೆಗೆ ತನ್ನ ಪತಿಯಃಮುಖ ಭಾವದ ಪರಿಚಯವಾದಂತೆಯೇ ತೋರಿತು. ಅವನು ವೇದಿಕೆಯನ್ನು ಸಮೀಪಿಸಿ ಮಾತನಾಡತೊಡಗಿದಾಗಲಂತೂ, ಅವಳು ಕಂಠಧ್ವನಿಯನ್ನು ನೆನಪು ಮಾಡಿಕೊಳ್ಳುತ್ತಾ, ಕೌತುಕದಿಂದ, ಆಶ್ಚರ್ಯಭರಿತ ಹರ್ಷೋತ್ಕರ್ಷದಿಂದ ಅವನ ಮಾತುಗಳನ್ನು ಆಲಿಸಿದಳು. ವೇದಿಕೆಯೆದುರು ನಿಂತ ಪೆರಿಕ್ಲಿಸ್— "ಡಯಾನಾ ದೇವತೆಯೇ, ನಿನಗೆ ವಿಜಯವಾಗಲಿ! ನಿನ್ನ ಆಜ್ಞೆಯನ್ನು ಶಿರಸಾವಹಿಸಿ ಬಂದಿದ್ದೇನೆ. ನಾನು ಟೈರಿನ ರಾಜಕುವರನೆಂದೂ, ಭೀತಿ ಯಿಂದ ದೇಶವನ್ನು ತೊರೆದುಹೋಗಿ, ಪೆಂಟಾಪೊಲಿಸಿನಲ್ಲಿ ಚೆಲುವೆ ಥಯಾಸಾಳನ್ನು ವಿವಾಹವಾದವನೆಂದೂ ಹೇಳಿಕೊಳ್ಳುತ್ತಿದ್ದೇನೆ. ಥಯಾಸಾ, ಸಮುದ್ರದಮೇಲೆ ಪ್ರಯಾಣಮಾಡುತ್ತಿದ್ದಾಗ ಮೃತಳಾದಳು. ಆದರೆ

ಹೋಗುವ ಮುನ್ನ ಮೆರೀನಾ ಎಂಬ ಹೆಸರಿನ ಹೆಣ್ಣುಮಗುವನ್ನು ನನಗಾಗಿ ಬಿಟ್ಟುಹೋದಳು. ಅವಳನ್ನು ಟಾರ್ಸಸಿನಲ್ಲಿ ಪೋಷಿಸುತಿದ್ದ ಡಯೋನಿಸಿಯಾ, ಅವಳಿಗೆ ಹದಿನಾಲ್ಕು ವರುಷ ವಯಸ್ಸಾಗಿದ್ದಾಗ ಅವಳನ್ನು ಕೊಲ್ಲಲು ಬಗೆದಳು. ಆದರವಳ ಅದೃಷ್ಟ ಆಕೆಯನ್ನು ಮಿಟಲೀನಿಗೆ ಕರೆದೊಯ್ದಿತು. ನಾನು ಹಡಗಿನಲ್ಲಿ ಆ ತೀರಪ್ರದೇಶವನ್ನು ಹಾಯ್ದುಹೋಗುತ್ತಿದ್ದಾಗ, ಈ ಕನ್ನಿಕೆಯನ್ನು ಅವಳ ಭಾಗ್ಯವಿಶೇಷವೇ ನನ್ನ ಹಡಗಿಗೆ ಕರೆತಂದಿತು. ಅಲ್ಲಿ ಅವಳು ತನ್ನ ಶುದ್ಧವಾದ ಸ್ಪಷ್ಟವಾದ ಸ್ಮರಣಶಕ್ತಿಯಿಂದ ತಾನೇ ನನ್ನ ಮಗ ಳೆಂಬುದನ್ನು ತಿಳಿಯಿಪಡಿಸಿದಳು" ಎಂದು ತನ್ನ ಜೀವನದ ಕರುಣಕತೆಯನ್ನು ನಿವೇದಿಸಿಕೊಂಡನು.

ಥಯಸಾ, ಆತನ ನುಡಿಗಳು ತನ್ನಲ್ಲೆಬ್ಬಿಸಿದ್ದ ಸಮ್ಮೋಹನೆಯನ್ನು ತಾಳಲಾರದೆ—"ನೀವು ! ನೀವು! ಓ ರಾಜ ಪೆರಿಕ್ಲಿಸ್!" ಎಂದು ಚೀರುತ್ತಾ ಮೂರ್ಛೆಹೋದಳು. "ಇದೇನಿನು, ಏನಾಯಿತೀಕೆಗೆ ? ಇವಳು ಸಾಯು ತ್ತಿರುವಳು, ಮಾನ್ಯರೆ, ನೋಡಿ, ಕಾಪಾಡಿ !" ಎಂದು ಕೂಗಿದನು ಪೆರಿಕ್ಲಿಸ್. ಆಗ ಸೆರಿಮೋನ್—"ಸ್ವಾಮಿ, ಡಯಾನಾಳ ವೇದಿಕೆಯುದುರು ನೀವು ಸತ್ಯ ನುಡಿದಿರುವಿರಾದಲ್ಲಿ ಈಕೆ ನಿಮ್ಮ ಪತ್ನಿ" ಎಂದನು. ಪೆರಿಕ್ಲಿಸ್—"ಪೂಜ್ಯರೇ ಅಲ್ಲ, ಅಲ್ಲ; ಇದೇ ತೋಳುಗಳಿಂದ ನನ್ನ ಪ್ರಿಯೆಯನ್ನು ನಾನು ಸಮುದ್ರಕ್ಕೆಸೆದೆ" ಎಂದನು, ಆಗ ಸೆರಿಮೋನ್ ತಾನವಳನ್ನು ರಕ್ಷಿಸಿದ ಕತೆ ಯನ್ನೆಲ್ಲಾ ಹೇಳಿದನು. ಬಿರುಗಾಳಿಯ ಒಂದು ಬೆಳಗಿನಲ್ಲಿ ಎಫಿಸಸ್‌ನ ದಡ ವೊಂದಕ್ಕೆ ಈ ರಮಣಿ ಬಂದುಬಿದ್ದುದು; ಪೆಟ್ಟಗೆ ತೆರೆದಾಗ ಅಲ್ಲಿ ಅಪೂರ್ವಾ ಭರಣಗಳೂ, ಒಂದು ಕಾಗದವೂ ತನ್ನ ಕಣ್ಣಿಗೆಬಿದ್ದುದು; ಅದೃಷ್ಟಬಲದಿಂದ ತಾನವಳನ್ನು ಎಚ್ಚರಗೊಳಿಸಿ ಈ ಡಯಾನಾ ದೇವಾಲಯುದಲ್ಲಿರಿಸಿದುದು-ಇವೆಲ್ಲ ವನ್ನೂ ವಿವರವಾಗಿ ತಿಳಿಸಿದನು. ಈ ಹೊತ್ತಿಗೆ ಮೂರ್ಛೆಯಿಂದೆಚ್ಚರಗೊಂಡ ಥಯಸಾ—"ಓ ಪ್ರಭು, ನೀವು ಪೆರಿಕ್ಲಿಸರಲ್ಲವೇನು! ಅವರಂತೆಯೇ ನೀವು ಮಾತನಾಡುತ್ತೀರಿ; ಅವರಂತೆಯೇ ರೂಪ ಧರಿಸಿರುವಿರಿ. ನೀವು ಬಿರುಗಾಳಿ, ಜನನ ಮರಣ-ಎಂದೇನನ್ನೋ ಹೇಳಿದಿರಲ್ಲವೆ ?" ಎಂದಳು. ಅವನು ಆಶ್ಚರ್ಯಚಕಿತನಾಗಿ "ಮೃತ ಥಯಸಾಳ ಧ್ವನಿ!" ಎಂದನು. ಅವಳು— "ನಾನೇ ಆ ಥಯಸಾ ; ಸತ್ತಿರುವಳೆಂದು, ಮುಳುಗಿ ಹೋಗಿರುವಳೆಂದು ಪ್ರತೀತಳಾಗಿರುವ ಥಯಸಾ ನಾನೇ" ಎಂದಳು. ಪೆರಿಕ್ಲಿಸ್ ಅಪರಿಮಿತ ಭಕ್ತಿಯಿಂದ, ವಿಸ್ಮಯದಿಂದ ಪುಲಕಿತನಾಗಿ—"ಓ ಸತ್ಯದೇವತೆ ಡಯಾನಾ !

ಎಂದು ಉದ್ಗಾರ ತೆಗೆದನು. ಥಯಸಾ—"ಈಗ ನಾನು ನಿಮ್ಮನ್ನು ಚೆನ್ನಾಗಿ ಗುರುತಿಸಬಲ್ಲೆ. ನಿಮ್ಮ ಬೆರಳಿನಲ್ಲೀಗ ಕಾಣುತ್ತಿರುವಂತಹ ಉಂಗುರವನ್ನೇ ನಮ್ಮ ತಂದೆ, ನಾವವನಿಂದ, ಪೆಂಟಾಪೊಲಿಸಿನಲ್ಲಿ ಕಂಬನಿಸುರಿಸುತ್ತಾ ಸುರಿಸುತ್ತಾ ಬೇಳ್ಕೊಂಡಾಗ ನಿಮಗೆ ಕೊಟ್ಟನಲ್ಲವೆ ?" ಎಂದಳು. ಪೆರಿಕ್ಲಿಸ್ – "ಸಾಕು ! ಸಾಕು, ಓ ದೇವತೆಗಳೇ ! ನಿಮ್ಮಾ ಪ್ರಸ್ತುತದ ಕರುಣೆಯಿಂದಾಗಿ ಹಿಂದಿನ ನನ್ನ ಸಂಕಷ್ಟಗಳೆಲ್ಲ ಲೀಲಾಮಾತ್ರವೆಂದೆನಿಸುತ್ತದೆ. ಓ, ಬಾ ಥಯಸಾ, ಮತ್ತೊಮ್ಮೆ ಈ ತೋಳುಗಳಲ್ಲಿ ಬಂದಿಯಾಗು ಬಾ" ಎಂದನು.

ಮೆರೀನಾ—"ನನ್ನ ತಾಯಿಯೆದೆಯಲ್ಲಿ ಹುದುಗಲು ಈ ನನ್ನ ಹೃದಯ ಅದೆಷ್ಟು ತವಕಿಸುತ್ತಿದೆ" ಎಂದಳು. ಆಗ ಪೆರಿಕ್ಲಿಸ್ ಮಗಳನ್ನು ಅವಳ ತಾಯಿಗೆ ತೋರುತ್ತಾ—"ನೋಡಿಲ್ಲಿ, ಮೊಳಕಾಲೂರಿ ಕುಳಿತಿರುವ ನಿನ್ನ ಪ್ರತಿ ರೂಪವನ್ನು. ಸಮುದ್ರದ ಮೇಲೆ ಜನಿಸಿ ಅದರಿಂದಾಗಿಯೆ ಮೆರೀನಾ ಎಂದು ಹೆಸರು ಪಡೆದ ನಿನ್ನ ಮಗಳನ್ನು ನೋಡು" ಎಂದನು. "ನನ್ನ ಕಂದಾ !" ಎಂದು ಥಯಸಾ ಆನಂದಾತಿರೇಕದಿಂದ ಪುಲಕಿತಳಾಗಿ ಮಗಳನ್ನು ಆಲಿಂಗಿಸಿಕೊಳ್ಳಲು, ಇತ್ತ ಪೆರಿಕ್ಲಿಸ್ ವೇದಿಕೆಯ ಮುಂದೆ ಮೊಣಕಾಲೂರಿ ಕುಳಿತು—"ಸಚ್ಚರಿತ್ರೆ ಡಯಾನಾ ! ನಿನ್ನ ದಿವ್ಯದೃಷ್ಟಿಗಾಗಿದೋ ಧನ್ಯವಾದ ಗಳನ್ನರ್ಪಿಸುತ್ತೇನೆ. ಪ್ರತಿ ರಾತ್ರಿಯೂ ನಿನಗೆ ನನ್ನ ಪ್ರಾರ್ಥನೆ ಸಲ್ಲದಿರದು" ಎಂದನು ಭಕ್ತಿಪರವಶನಾಗಿ. ಆನಂತರ ಪೆರಿಕ್ಲಿಸ್ ಥಯಸೆಯ ಅನುಮತಿ ಪಡೆದು, ಮಗಳು ಮೆರೀನಾಳನನ್ನು ಸತ್ಪಾತ್ರನಾದ ಲೈಸಿಮೇಕಸನಿಗೊಪ್ಪಿಸಿ ವಿವಾಹದ ನಿಶ್ಚಿತಾರ್ಥವನ್ನು ನೆರವೇರಿಸಿದನು.

ಹೀಗೆ, ಪೆರಿಕ್ಲಿಸ್, ಆತನ ರಾಣಿ ಮತ್ತು ಮಗಳು ಈ ಮೂವರಲ್ಲಿ ಮೇಲಿಂದ ಮೇಲೆ ಕಷ್ಟಪರಂಪರೆಗೊಳಗಾಗಿಯೂ ಸದ್ಗುಣದ ಪಾವಿತ್ರ್ಯವನ್ನು ಕಾಯ್ದುಕೊಂಡಂತಹ ವ್ಯಕ್ತಿಗಳ ನಿದರ್ಶನವನ್ನು ಕಾಣಬಹುದಾಗಿದೆ. ಮಾನವರಿಗೆ ತಾಳ್ಮೆಯನ್ನೂ ನಿಷ್ಠೆಯನ್ನೂ ಕಲಿಸುವ ಸಲುವಾಗಿ ವಿಧಿ ಇಂತಹ ಸಂಕಷ್ಟಗಳನ್ನು ತಂದೊಡ್ಡುತ್ತದೆ. ಕೊನೆಯಲ್ಲಿ ವಿಧಿಯ ಮಾರ್ಗ ದರ್ಶನದಿಂದಲೇ ಸದ್ಗುಣವು ಸಫಲಗೊಂಡು ಆಕಸ್ಮಿಕ ವಿಪತ್ತುಗಳನ್ನೂ, ಸ್ಥಿತ್ಯಂತರಗಳನ್ನೂ ಜಯಿಸುವುದು. ಹೆಲಿಕೇನಸದಲ್ಲಿ ನಾವು ಸತ್ಯ, ನಿಷ್ಠೆ, ಹಾಗೂ ಸ್ಥೈರ್ಯದ ಉತ್ಕೃಷ್ಟ ಉದಾಹರಣೆಯೊಂದನ್ನು ಕಾಣಬಹುದಾಗಿದೆ. ಆತ, ತಾನೇ ಸುಲಭದಿಂದ ಸಿಂಹಾಸನವನ್ನೇರಬಹುದಾಗಿದ್ದಾಗ, ಪರರಿಗೆ ಅನ್ಯಾಯವೆಸಗಿ ತಾನು ಮೇಲೆನಿಸಿಕೊಳ್ಳುವ ಬದಲು ನೈಜ ಬಾಧ್ಯಸ್ಥನನ್ನೇ

ಹಿಂತಿರುಗಿ ಕರೆಸಿ ಅಧಿಕಾರ ವಹಿಸಿಕೊಳ್ಳುವಂತೆ ಮಾಡಲು ಬಯಸಿದನಲ್ಲವೆ? ಥಯಸೆಗೆ ಜೀವದಾನ ಮಾಡಿದ ಶ್ರೇಷ್ಠ ಸೆರಿಮೋನ್‌ನಿಂದ, ಸುಜ್ಞಾನ ಪ್ರೇರಿತ ಸದ್ಗುಣವು ಮಾನವ ವರ್ಗಕ್ಕೆ ಉಪಕಾರವನ್ನೆಸಗಿ ಆ ಮೂಲಕ ದೈವತ್ವಕ್ಕೆಷ್ಟು ಸಮೀಪವರ್ತಿಯಾಗಬಲ್ಲದೆಂಬುದನ್ನು ಅರಿಯಬಹುದಾಗಿದೆ. ಇನ್ನುಳಿದುದೆಂದರೆ ಕ್ಲಿಯಾನನ ದುಷ್ಟ ಪತ್ನಿ ಡಯೋನಿಷಿಯಾ ತನ್ನ ಉದ್ಯಮಗಳಿಗನುಗುಣವಾದ ಪ್ರತಿಫಲ ಪಡೆದ ಸಂಗತಿ. ಟಾರ್ಸಸ್‌ನಗರದ ನಿವಾಸಿಗಳು ಮೆರೀನಾ ಬಗ್ಗೆ ಅವಳು ನಿಯೋಜಿಸಿದ್ದ ಕ್ರೂರಕೃತ್ಯವನ್ನು ಅರಿತ ಕೂಡಲೇ, ಎಲ್ಲರೂ ಒಟ್ಟುಗೂಡಿ ತಮ್ಮ ಆಪದ್ಬಂಧುವಿನ ಪುತ್ರಿಯ ಸಲುವಾಗಿ ಪ್ರತೀಕಾರ ವೆಸಗಲು ದಂಗೆಯೆದ್ದರು. ಕ್ಲಿಯಾನನ ಅರಮನೆಗೆ ಬೆಂಕಿಯಿಟ್ಟು, ಅವನನ್ನೂ ಅವನ ಪತ್ನಿಯನ್ನೂ ಮಾತ್ರವಲ್ಲದೆ ಅವರ ಇಡೀ ಕುಟುಂಬವನ್ನೇ ನಿರ್ನಾಮಗೊಳಿಸಿದರು. ಕಾರ್ಯಗತವಾಗದೆ ಕೇವಲ ಉದ್ದಿಶ್ಯ ಮಾತ್ರವಾಗಿಯೇ ಉಳಿದ ಕ್ರೂರ ಕೊಲೆಯ ಯೋಜನೆ ಸಹ, ಘೋರಪಾತಕಕ್ಕನುಗುಣವಾದ ರೀತಿಯಲ್ಲೇ ಶಿಕ್ಷೆ ಹೊಂದಿದ್ದಕ್ಕೆ ದೇವತೆಗಳೂ ತೃಪ್ತಿಪಟ್ಟಿರಬೇಕು.

---

# ನಿಮ್ಮ ಅಭೀಷ್ಟದಂತೆ
## (AS YOU LIKE IT)

ಫ್ರಾನ್ಸ್ ದೇಶ ಪ್ರಾಂತ್ಯಗಳಾಗಿ ವಿಭಾಗಗೊಂಡಿದ್ದ ಕಾಲ; ಆಗ ಇಂತಹ ಒಂದು ಪ್ರಾಂತ್ಯದಲ್ಲಿ ಕಪಟಿಯಾದ ರಾಜನೊಬ್ಬನು ಆಡಳಿತ ನಡೆಸುತ್ತಿದ್ದನು. ಈತ, ಹಕ್ಕಿನ ರಾಜನಾಗಿದ್ದ ತನ್ನಣ್ಣನನ್ನು ರಾಜ್ಯಚ್ಯುತನನ್ನಾಗಿ ಮಾಡಿ ದೇಶಭ್ರಷ್ಟಗೊಳಿಸಿ ರಾಜ್ಯವನ್ನು ಮೋಸದಿಂದ ವಶಪಡಿಸಿಕೊಂಡಿದ್ದನು.

ಈ ಬಗೆಯಲ್ಲಿ ತನ್ನ ರಾಜ್ಯದಿಂದಲೇ ನೂಡಲ್ಪಟ್ಟಿದ್ದ ಡ್ಯೂಕ್, ಹಲವು ಸ್ವಾಮಿಭಕ್ತ ಸಂಗಡಿಗರೊಡನೆ ಆರ್ಡೆನಿನ ಅರಣ್ಯಪ್ರದೇಶಕ್ಕೆ ತೆರಳಿದ್ದನು. ಅಲ್ಲಿ ಈ ಗೆಳೆಯರೊಂದಿಗೆ, ತನಗಾಗಿ ತಮ್ಮ ಸರ್ವಸ್ವವನ್ನೂ ಕಪಟ ರಾಜನಿಗೆ ಬಲಿಯಾಗಿ ಕೊಟ್ಟು ದೇಶಭ್ರಷ್ಟರಾಗಿ ಬಂದ ಪ್ರಿಯಮಿತ್ರರೊಂದಿಗೆ ಡ್ಯೂಕ್ ಬಾಳುತ್ತಿದ್ದನು. ದಿನಗಳುರುಳಿದಂತೆ, ರಾಜಾಸ್ಥಾನದ ಆಡಂಬರ, ಕೋಲಾಹಲದ ಜೀವನಕ್ಕಿಂತ ಇಲ್ಲಿ ನಡೆಸುತ್ತಿದ್ದ ಸ್ವಚ್ಛಂದ ಜೀವನವೇ ಅವರಿಗೆ ಹೆಚ್ಚು ಪ್ರಿಯವಾಯಿತು. ಹಿಂದಿನ ಕಾಲದ, ಇಂಗ್ಲೆಂಡಿನ ರಾಬಿನ್‌ಹುಡ್‌ನಂತೆ ಅವರಿಲ್ಲಿ ಜೀವಿಸುತ್ತಿದ್ದರು. ಪ್ರತಿದಿನವೂ ಈ ಕಾಡಿಗೆ ರಾಜಾಸ್ಥಾನದಿಂದ ಎಷ್ಟೋ ಮಂದಿ ಕೆಚ್ಚಿನ ತರುಣರು ಬಂದು ಸೇರಿಕೊಳ್ಳುತ್ತಿದ್ದರು. ಸ್ವರ್ಣಯುಗದ ಜನರಂತೆ ಸ್ವೇಚ್ಛೆಯಾಗಿ ಕಾಲ ಕಳೆಯುತ್ತಿದ್ದರು. ಬೇಸಗೆಯಲ್ಲಿ ಅವರು ಕಾಡಿನ ಮಹಾವೃಕ್ಷಗಳ ತಂಪಾದ ನೆರಳಿನಲ್ಲಿ ಮಲಗಿ ಕಾಡುಜಿಂಕೆಗಳ ಚೇಷ್ಟೆಯ ಆಟಗಳನ್ನು ನೋಡುತ್ತಿದ್ದರು. ಕಾಡಿನ ಮೂಲನಿವಾಸಿಗಳಂತೆ ತೋರುತ್ತಿದ್ದ ಈ ವರ್ಣರಂಜಿತ ಬಡಪ್ರಾಣಿಗಳೆಂದರೆ ಅವರಿಗೆ ಬಹು ಅಕ್ಕರೆ. ಆಹಾರದ ಸಲುವಾಗಿ ಜಿಂಕೆಯ ಮಾಂಸವನ್ನು ಪಡೆಯಲೋಸ್ಕರ ಈ ಪ್ರಾಣಿಗಳನ್ನು ಕೊಲ್ಲಲೇ ಬೇಕಾದಾಗ ಅವರಿಗಾಗುತ್ತಿದ್ದ ವೇದನೆ ಅಷ್ಟಿಷ್ಟಲ್ಲ. ಚಳಿಗಾಲದ ಕೊರೆಯುವ ಚಳಿಯೊಮ್ಮೊಮ್ಮೆ ಡ್ಯೂಕನಿಗೆ ಅವನ ಅದೃಷ್ಟ

ವೈಪರೀತ್ಯದ ಅರಿವನ್ನುಂಟುಮಾಡುತ್ತಿತ್ತು. ಆಗವನು ತಾಳ್ಮೆಯಿಂದ ಸೈರಿಸಿ ಕೊಳ್ಳುತ್ತಾ—"ನನ್ನ ಮೇಲೆ ಬೀಸುತ್ತಿರುವ ಈ ಕೊರೆಯುವ ಚಳಿಗಾಳಿಗಳೇ ನನ್ನ ನೈಜ ಸಲಹೆಗಾರರು. ಅವು ಮುಖಸ್ತುತಿ ಮಾಡದೆ ನನ್ನ ಸತ್ಯದೆಶೆ ಯನ್ನು ಸೂಚಿಸುತ್ತವೆ. ತೀಕ್ಷ್ಣವಾದ ನನ್ನನ್ನವು ಭೇದಿಸಿದರೂ ಸಹ, ಅವುಗಳ ಹಲ್ಲು, ನಿರ್ದಯತ್ವದಷ್ಟು, ಕೃತಘ್ನತೆಯ ಹಲ್ಲುಗಳಷ್ಟು ಹರಿತವಲ್ಲ. ಕಷ್ಟನಷ್ಟಗಳ ವಿಷಯವಾಗಿ ಜನ ಏನೇ ಹೇಳಿದರೂ, ನನ್ನ ಮಟ್ಟಿಗೇನೋ ಅವುಗಳಿಂದದೆಷ್ಟೋ ಸೌಲಭ್ಯಗಳನ್ನು ಪಡೆಯಬಹುದೆಂದೆನಿಸಿದೆ. ವಿಷಪೂರಿತ ವಾದ ತುಚ್ಛ ಸರ್ಪದ ಫಣಾರತ್ನವನ್ನು ಪ್ರಶಸ್ತ ಔಷಧಿಯನ್ನಾಗಿ ಉಪ ಯೋಗಿಸಿಕೊಳ್ಳುವುದೂ ಸಾಧ್ಯವಲ್ಲವೆ?" ಎನ್ನುತ್ತಿದ್ದನು. ಹೀಗೆ ಸಹನಾ ಮೂರ್ತಿಯಾಗಿದ್ದ ಡ್ಯೂಕ್ ತನ್ನೆಲ್ಲ ಅನುಭವಗಳಿಂದಲೂ ನೀತಿ ಸೌಲಭ್ಯ ವನ್ನು ಪಡೆದುಕೊಳ್ಳುತ್ತಿದ್ದನು. ಜನಜಂಗುಳಿಯಿಂದ ದೂರವಾಗಿದ್ದ ತನ್ನ ಜೀವನದ ಈ ನೈತಿಕ ಮುಖಬಲದಿಂದ ಆತ ಮರಗಳಲ್ಲಿ ವಾಕ್ಶಕ್ತಿಯನ್ನು, ಹರಿಯುವ ನೀರಿನ ಝುರಿಯಲ್ಲಿ ಗ್ರಂಥಗಳನ್ನು, ಕಲ್ಲುಗಳಲ್ಲಿ ಜ್ಞಾನಪ್ರವಚನ ಗಳನ್ನು, ಎಲ್ಲದರಲ್ಲೂ ಒಳ್ಳೆಯದನ್ನು ಕಾಣುತ್ತಿದ್ದನು.

ರಾಜ್ಯಭ್ರಷ್ಟ ಡ್ಯೂಕನಿಗೆ ರೋಸಾಲಿಂಡ್ ಎಂಬ ಹೆಸರಿನ ಒಬ್ಬಳೇ ಮಗಳಿದ್ದಳು. ತಂದೆಯನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದ್ದರೂ ಸಹ ಇವಳನ್ನು ಮಾತ್ರ ಕಪಟ ದೊರೆ ಡ್ಯೂಕ್ ಫ್ರೆಡರಿಕ್ ತನ್ನ ಮಗಳು ಸಿಲಿಯಾಳ ಸಂಗಾತಿಯಾಗಿರಲು ಆಸ್ಥಾನದಲ್ಲೇ ಉಳಿಸಿಕೊಂಡಿದ್ದನು. ಈ ಕನ್ನಿಕೆಯರಲ್ಲಿ ಅಪ್ರತಿಮ ಸ್ನೇಹ ಬೆಳೆದುಬಂದಿತ್ತು. ಅವರ ವಾತ್ಸಲ್ಯ ತಮ್ಮ ತಂದೆಗಳಿಬ್ಬರಲ್ಲಿನ ಮನಸ್ತಾಪದಿಂದ ಯಾವ ಬಗೆಯಲ್ಲೂ ಕುಂಠಿತ ವಾಗಿರಲಿಲ್ಲ. ಸಿಲಿಯಾ ತನ್ನಿಂದ ಸಾಧ್ಯವಾಗುವ ಮಟ್ಟಿಗೂ, ರೋಸಲಿಂಡಳ ತಂದೆಗೆ ತನ್ನ ತಂದೆ ಎಸಗಿದ್ದ ಅನ್ಯಾಯವನ್ನು ಪರಿಹರಿಸಲು ಪ್ರಯತ್ನಿಸು ತ್ತಿದ್ದಳು. ರೋಸಲಿಂಡ್ ತಂದೆ ರಾಜ್ಯಭ್ರಷ್ಟನಾಗಿರುವುದನ್ನೋ ಇಲ್ಲವೇ ಕಪಟಿಯಾದರಸನ ಪೋಷಣೆಗೊಳಗಾಗಿದ್ದ ತನ್ನ ಪರಾವಲಂಬಿ ಜೀವನದ ಸ್ಥಿತಿಯನ್ನೋ ಚಿಂತಿಸುತ್ತಾ ದುಃಖಿತಳಾಗುತ್ತಿದ್ದ ಸಂದರ್ಭದಲ್ಲೆಲ್ಲಾ, ಸಿಲಿಯಾ ಬೇರೆಲ್ಲವನ್ನೂ ಬಿಟ್ಟು ರೋಸಲಿಂಡಳನ್ನು ಸಂತೈಸಿ ಆಕೆಯ ದುಃಖ ಮರೆಸಲು ಓಡಿಬರುತ್ತಿದ್ದಳು.

ಹೀಗೆಯೇ ಒಂದು ದಿನ ಸಿಲಿಯಾ ಎಂದಿನ ಪ್ರೇಮಭಾವದೊಡನೆ ರೋಸಲಿಂಡ್ ಬಳಿ ಮಾತನಾಡುತ್ತಾ ಕುಳಿತಿದ್ದಳು. ಆಗ ಡ್ಯೂಕ್ ಕಳುಹಿದ

ದೂತನೊಬ್ಬ ಪ್ರವೇಶಿಸಿ, ಆಗತಾನೇ ಪ್ರಾರಂಭವಾಗಲಿದ್ದ ಮಲ್ಲಯುದ್ಧ ವೊಂದನ್ನು ನೋಡಲು ಅವರಿಚ್ಛಿಸುವುದಾದಲ್ಲಿ ಆ ಕೂಡಲೇ ಅರಮನೆಯ ಮುಂದಿನ ಮೈದಾನಕ್ಕೆ ಬರಬೇಕೆಂದು ತಿಳಿಸಿದನು. ರೋಸಲಿಂಡ್ ಇದರಿಂದ ಮುದಗೊಳ್ಳಬಹುದೆಂದು ಯೋಚಿಸಿ ಸಿಲಿಯಾ ಮಲ್ಲಯುದ್ಧವನ್ನು ನೋಡ ಹೋಗಲು ಒಪ್ಪಿದಳು.

ಈಗಿನ ಕಾಲದಲ್ಲೇನೋ ಮಲ್ಲಯುದ್ಧ ಕೇವಲ ಹಳ್ಳಿಯ ನಕಲಿಗಾರ ರಿಂದ ಮಾತ್ರ ಮನ್ನಣೆ ಕೈಗೊಳ್ಳುತ್ತದಷ್ಟೆ. ಆದರೆ ಆ ಕಾಲದಲ್ಲಿ ಇದೇ ಮಲ್ಲಯುದ್ಧ ರಾಜರ ಆಸ್ಥಾನಗಳಲ್ಲಿ, ಚೆಲುವೆಯರ, ರಾಜಪುತ್ರಿಯರ ಎದುರಿನಲ್ಲಿ ನಡೆಯುವ ಮೆಚ್ಚಿನ ಕ್ರೀಡಾ ಪ್ರದರ್ಶನವಾಗಿದ್ದಿತು. ಎಂತಲೇ ಸಿಲಿಯಾ ಮತ್ತು ರೋಸಲಿಂಡ್ ಇದನ್ನು ನೋಡಲು ಹೋದುದು. ಆದರೆ ಅಲ್ಲಿ ಹೋಗಿ ಸೇರಿದ ಮೇಲೆ ಮಾತ್ರ ಅವರಿಗೆ ಮನರಂಜನೆಗಿಂತ ದುರಂತ ದೃಶ್ಯವೊಂದರ ಸಂಭವವೇ ಹೆಚ್ಚಾಗಿ ತೋರಿ ಬಂದಿತು: ಕಾಳಗಕ್ಕಿಳಿದು ನಿಂತಿದ್ದವರಲ್ಲಿ ಒಬ್ಬನು ಭೀಮಕಾಯನೂ ಬಲಶಾಲಿಯೂ ಆಗಿದ್ದನು–ಅಲ್ಲದೆ ಮಲ್ಲಯುದ್ಧದಲ್ಲಿ ದೀರ್ಘ ಪರಿಶ್ರಮವಿದ್ದು ಕಾಳಗದಲ್ಲಿ ಹಿಂದೆ ಎಷ್ಟೋ ಜಟ್ಟಿ ಗಳನ್ನು ಕೊಂದುಹಾಕಿದ್ದವನು. ಇನ್ನೊಬ್ಬನು ಬಹು ಚಿಕ್ಕವನು. ವಯೋ ಧರ್ಮ, ಅನುಭವಗಳ ದೃಷ್ಟಿಯಿಂದ ನೋಡಿದಲ್ಲಿ ಈ ತರುಣ ಹತವಾಗುವುದೇ ಖಂಡಿತವೆಂದು ಎಲ್ಲ ಪ್ರೇಕ್ಷಕರೂ ಕಾತರಪಡುತ್ತಿದ್ದರು.

ಡ್ಯೂಕ್, ಸಿಲಿಯಾ ಮತ್ತು ರೋಸಲಿಂಡರನ್ನು ನೋಡಿ, "ಓಹೋ! ಕಾಳಗವನ್ನು ನೋಡಲು ನೀವಿತ್ತ ಬಂದಿರೇನು? ಆದರೀ ಕಾಳಗ ನಿಮಗೇನೂ ವಿನೋದ ಒದಗಿಸುವಂತೆ ಕಾಣದು. ಈ ಮಲ್ಲರ ಇಜ್ಜೋಡಿಯನ್ನು ನೋಡಿ. ಈ ತರುಣನ ಮೇಲಿನ ಕನಿಕರದಿಂದ ಅವನೀ ಕಾಳಗಕ್ಕಿಳಿಯ ದಂತೆ ತಡೆಯಲು ನನಗೆ ಮನಸ್ಸಾಗುತ್ತಿದೆ. ನೀವಿಬ್ಬರೂ ಅವನೊಂದಿಗೆ ಮಾತನಾಡಿ, ಅವನ ಮನವನ್ನು ಚಲಿಸಲು ಸಾಧ್ಯವಾಗುವುದೇನೋ ನೋಡಿ" ಎಂದನು.

ಈ ಕರುಣಾಪ್ರಧಾನ ಕಾರ್ಯವನ್ನು ಮಾಡಲು ಹುಡುಗಿಯರಿಬ್ಬರೂ ಸಂತೋಷದಿಂದ ಒಪ್ಪಿದರು. ಮೊದಲು ಸಿಲಿಯಾ ಆ ತರುಣನನ್ನು ಮಾತ ನಾಡಿಸಿ ಅವನು ತನ್ನ ಪ್ರಯತ್ನವನ್ನು ಬಿಟ್ಟು ಹಿಂತಿರುಗಬೇಕೆಂದು ಕೋರಿ ದಳು. ಆದರೆ ಅವನ ಮೇಲೆ ಹೆಚ್ಚು ಪರಿಣಾಮ ಬೀರಿದುದೆಂದರೆ ಆ ನಂತರ ಅವನೊಂದಿಗೆ ಮಾತನಾಡಿದ ರೋಸಲಿಂಡಳ ನುಡಿಗಳು. ಆಕೆಯ ಮಾತಿನ

ಲ್ಲಡಗಿದ್ದ ಅತೀವ ಮರುಕ, ಮುಂದವನಿಗೆ ಸಂಘಟಿಸಲಿದ್ದ ಅಪಾಯ ಸಂದರ್ಭದ ಬಗ್ಗೆ ಆಕೆ ತೋರಿದ ಆತ್ಮೀಯ ಅನುಕಂಪ ಇವುಗಳು ಅವನ ಮನವನ್ನು ಸೆರೆಹಿಡಿದವು. ಆದರೆ ಅವಳೀ ಮೃದುನುಡಿಗಳಿಂದ ಅವನು ತನ್ನ ಉದ್ದಿಶ್ಯದಿಂದ ವಿಮುಖನಾಗುವುದರ ಬದಲು ಮತ್ತಷ್ಟು ಧೈರ್ಯೋತ್ಸಾಹ ಗಳಿಂದ ಈ ಚೆಲುವೆಯೆದುರು ಕೀರ್ತಿಗಳಿಸಬೇಕೆಂದು ಹಾತೊರೆಯುವಂತಾ ಯಿತು! ಸಿಲಿಯಾ, ರೋಸಲಿಂಡರ ಕೋರಿಕೆಯನ್ನವನು ವಿನಯದಿಂತ ನಿರಾ ಕರಿಸಿದಾಗ ಅವರಿಬ್ಬರೂ ಅವನ ಮಾತಿನ ಸೊಗಸಿಗೂ, ನಮ್ರತೆಗೂ ಮಾರು ಹೋದರು; ಅವರಿಗೆ ಅವನಲ್ಲಿದ್ದ ಆಸಕ್ತಿ ಅನುಕಂಪಗಳು ಮತ್ತಷ್ಟು ಹೆಚ್ಚಾ ದವು. ತನ್ನ ಮಾತನ್ನು ಮುಗಿಸುತ್ತಾ ಅವನು—"ನಿಮ್ಮಂತಹ ಸುಂದರಿ ಯರಿಗೆ, ಗಣ್ಯ ಸ್ತ್ರೀಯರಿಗೆ ಯಾವುದಕ್ಕೂ ಇಲ್ಲವೆನ್ನಲು ನನಗೆ ಬಹು ಖೇದ ವಾಗುತ್ತದೆ. ಆದರೆ ನಿಮ್ಮ ಚೆಲುಕಂಗಳೂ, ನಮ್ರ ಹಾರೈಕೆಗಳೂ ಈ ಪರೀಕ್ಷಾ ಸಮಯದಲ್ಲಿ ನನ್ನ ಜೆಂಗಾವಲಾಗಿರಲಿ. ಇದರಲ್ಲಿ ನಾನು ಪರಾಜಿತ ನಾದರೆ, ಹಿಂದೆಂದೂ ಗಣ್ಯನಾಗಿಲ್ಲದಿದ್ದವನು ಅಪಮಾನಿತನಾದಂತಾಗು ವುದು; ನಾನು ಹತನಾದಲ್ಲಿ, ಸಾಯಲು ಇಚ್ಛಿಸುತ್ತಿರುವವನೊಬ್ಬನು ಸತ್ತಂ ತಾಗುವುದು; ಇದರಿಂದ ನನ್ನ ಮಿತ್ರರಿಗಾವ ಅನ್ಯಾಯವೂ ಆಗಲಾರದು— ಏಕೆಂದರೆ ನನಗಾಗಿ ಅಳುವಂತಹವರೊಬ್ಬರೂ ನನಗಿಲ್ಲ. ಇನ್ನು ಪ್ರಪಂ ಚಕ್ಕೂ ಯಾವ ಬಗೆಯ ನಷ್ಟವಿಲ್ಲ; ಏಕೆಂದರೆ ನನ್ನದಾದುದೇನೂ ಈ ಪ್ರಪಂಚದಲ್ಲಿಲ್ಲ. ಹಾಗೆ ನೋಡಿದಲ್ಲಿ, ಪ್ರಪಂಚದಲ್ಲಿ ನಾನೀಗ ಆಕ್ರಮಿಸಿರುವ ಸ್ಥಾನವನ್ನು ಬರಿದುಗೊಳಿಸುವುದರಿಂದ ಇನ್ನೂ ಉತ್ತಮರಾದವರಿಗೆ ಆ ಸ್ಥಾನ ಪಡೆಯುವ ಅವಕಾಶ ಕಲ್ಪಿಸಿಕೊಡಬಹುದಾಗಿದೆ" ಎಂದು ಹೇಳಿ ಮುಗಿಸಿದನು.

ಕೊನೆಗೊಮ್ಮೆ ಮಲ್ಲಯುದ್ಧ ಪ್ರಾರಂಭವಾಯಿತು. ಸಿಲಿಯಾ ಆ ತರುಣನು ಗಾಯಗೊಳ್ಳದಿರಲೆಂದು ಹಾರೈಸಿದಳು. ಆದರೆ ಎಲ್ಲರಿಗಿಂತಲೂ ಅವನಿಗಾಗಿ ಮರುಗಿದವಳೆಂದರೆ ರೋಸಲಿಂಡ್. ಅವನ ಮಾತಿನಿಂದ ವ್ಯಕ್ತ ಪಟ್ಟಂತೆ ಅವನ ಆಗಿನ ಸ್ನೇಹರಹಿತ ಸ್ಥಿತಿ, ಸಾಯಲು ಅವನು ತೋರಿದ ಉತ್ಸುಕತೆಗಳಿಂದ ರೋಸಲಿಂಡ್ ಅವನೂ ತನ್ನಂತೆಯೇ ಭಾಗ್ಯಹೀನನಾಗಿರ ಬೇಕೆಂದು ಗ್ರಹಿಸಿದಳು. ಆಗ ಅವಳಿಗೆ ಅವನಲ್ಲಿ ಉಂಟಾದ ಅನುಕಂಪ, ಅವನ ಅಪಾಯ ಸ್ಥಿತಿಯ ಬಗೆಗಿದ್ದ ಉಕ್ಕಂಠತೆ ಇವುಗಳಿಂದ ತೀರ್ಮಾನಿ

ಸುವುದಾದಲ್ಲಿ, ಆ ಕ್ಷಣದಲ್ಲಿ ಆಕೆ ಅವನಲ್ಲಿ ಅನುರಕ್ತಳಾಗಿಬಿಟ್ಟಿದ್ದಳೆಂದೇ ಹೇಳಬಹುದಾಗಿತ್ತು.

ಈ ಸುಂದರ ತರುಣಿಯರು ಅಪರಿಚಿತನಾದಾ ತರುಣನ ಬಗ್ಗೆ ವ್ಯಕ್ತ ಪಡಿಸಿದ ಅನುಕಂಪವೇ ಆತನಿಗೆ ಹೊಸ ಧೈರ್ಯ–ಬಲಗಳನ್ನು ನೀಡಿರಬೇಕು. ಎಂತಲೇ ಕೊನೆಯಲ್ಲವನು ಅದ್ಭುತ ಚಮತ್ಕಾರಗಳನ್ನು ಪ್ರದರ್ಶಿಸಿ ಎದುರಾಳಿಯನ್ನು ಸಂಪೂರ್ಣವಾಗಿ ಸೋಲಿಸಿದನು. ಆ ಎದುರಾಳಿಯಾಗ ಎಷ್ಟರ ಮಟ್ಟಿಗೆ ಗಾಯಗೊಂಡಿದ್ದನೆಂದರೆ ಸ್ವಲ್ಪಹೊತ್ತು ಆತನಿಗೆ ಮಾತನಾಡುವುದೂ ಚಲಿಸುವುದೂ ಅಸಾಧ್ಯವಾಗಿಬಿಟ್ಟಿತ್ತು.

ತರುಣನು ಪ್ರದರ್ಶಿಸಿದ ಈ ಧೈರ್ಯ, ಕುಶಲತೆಗಳಿಂದ ಡ್ಯೂಕ್ ಫ್ರೆಡರಿಕ್‌ಗೆ ಬಹು ಆನಂದವಾಯಿತು. ಅವನು ತರುಣನನ್ನು ತನ್ನ ಸಂರಕ್ಷಣೆಗೇ ಒಳಪಡಿಸಿಕೊಳ್ಳಲು ಉದ್ದೇಶಿಸಿ ಅವನ ಹೆಸರನ್ನೂ, ಜನ್ಮ ವೃತ್ತಾಂತವನ್ನೂ ತಿಳಿಯಲಪೇಕ್ಷಿಸಿದನು.

ಅಪರಿಚಿತನು ತನ್ನ ಹೆಸರು ಆರ್ಲೆಂಡೋ ಎಂದೂ, ತಾನು ಸರ್ ರೋಲಾಂಡ್ ಡಿ ಬಾಯ್ಸ್‌ನ ಕೊನೆಯ ಮಗನೆಂದೂ ತಿಳಿಸಿದನು.

ಆರ್ಲೆಂಡೋನ ತಂದೆ ಸರ್ ರೋಲಾಂಡ್ ಡಿ ಬಾಯ್ಸ್ ಮೃತನಾಗಿ ಹಲವು ವರುಷಗಳುರುಳಿದ್ದವು. ಆದರೆ ಜೀವಿಸಿದ್ದಾಗ ಆತ ದೇಶಭ್ರಷ್ಟ ಡ್ಯೂಕನ ಸತ್ಪ್ರಜೆಯೂ ಪ್ರಿಯಮಿತ್ರನೂ ಆಗಿದ್ದನು. ಆದ್ದರಿಂದಲೇ ಆರ್ಲೆಂಡೋ ತನ್ನ ರಾಜ್ಯಭ್ರಷ್ಟ ಸೋದರನ ಮಿತ್ರನೆನಿಸಿದವನ ಮಗನೆಂದು ಕೇಳಿದಾಗ ಫ್ರೆಡರಿಕ್‌ಗೆ ಈ ತರುಣನ ಬಗ್ಗೆ ಉಂಟಾಗಿದ್ದ ಮೆಚ್ಚುಗೆಯೆಲ್ಲಾ ಅಸಮಾಧಾನಕ್ಕೆ ತಿರುಗಿತು. ಅದೇ ಮನಸ್ಥಿತಿಯಲ್ಲಿಯೇ ಅವನು ಆಸ್ಥಾನವನ್ನು ಬಿಟ್ಟೆದ್ದು ಹೋದನು. ಫ್ರೆಡರಿಕ್ ತನ್ನ ಸೋದರನ ಗೆಳೆಯರಲ್ಲಿ ಯಾರ ಹೆಸರನ್ನು ಕೇಳಿದರೂ ಉರಿದುಬೀಳುತ್ತಿದ್ದನು. ಆದರೂ ಸಹ ಈ ತರುಣನ ಧೈರ್ಯ ಶೌರ್ಯಗಳಿಗಾಗಿ ಅವನಿನ್ನೂ ತಲೆದೂಗದಿರಲಾರದೆ ಹೋದನು. ಅಲ್ಲಿಂದ ಹೋಗುವ ಮುನ್ನ ಆರ್ಲೆಂಡೋ ಬೇರೆ ಇನ್ನಾರ ಮಗನಾದರೂ ಆಗಬೇಕಾಗಿದ್ದಿತೆಂದು ಬಯಸುತ್ತಾ ಹೋದನು.

ರೋಸಲಿಂಡ್ ತಾನು ಹೊಸದಾಗಿ ಮೆಚ್ಚಿದ ಈ ತರುಣ ತನ್ನ ತಂದೆಯ ಪ್ರಿಯಮಿತ್ರನ ಮಗನೆಂಬುದನ್ನು ಕೇಳಿ ಆನಂದಪಡುತ್ತಾ, ಸಿಲಿಯಾ ಬಳಿ—"ನನ್ನ ತಂದೆಗೆ ಸರ್ ರೊಲಾಂಡ್ ಡಿ ಬಾಯ್ಸರೆಂದರೆ ಬಹು ಪ್ರೇಮ. ಈ ತರುಣ ಆತನ ಮಗನೆಂದು ನಾನರಿತಿದ್ದರೆ, ಅವನಾ

ಸಾಹಸಕ್ಕೆ ಮುನ್ನುಗ್ಗುವ ಮೊದಲು ನನ್ನ ಕೋರಿಕೆಗಳೊಂದಿಗೆ ಕಂಬನಿಯನ್ನೂ ಸೇರಿಸಿ ಪ್ರಾರ್ಥಿಸುತ್ತಿದ್ದೆ" ಎಂದಳು.

ಡ್ಯೂಕನ ಅನಿರೀಕ್ಷಿತ ಅಸಮಾಧಾನದಿಂದ ಆರ್ಲೆಂಡೋಗೆ ಮುಖಭಂಗವಾಗಿಹೋಗಿತ್ತು. ತರುಣಿಯರಿಬ್ಬರೂ ಇದನ್ನು ಕಂಡು, ಅವನ ಬಳಿ ಹೋಗಿ ಸಂತೈಸಿ ಉತ್ತೇಜನ ಕೊಡುವ ಮಾತುಗಳನ್ನಾಡಿದರು. ಅಲ್ಲಿಂದ ತೆರಳುವ ಮುನ್ನ ರೋಸಲಿಂಡ್ ತನ್ನ ತಂದೆಯ ಪ್ರಿಯಮಿತ್ರನ ಧೈರ್ಯಶಾಲೀ ಪುತ್ರನನ್ನು ಕುರಿತು ಮತ್ತಷ್ಟು ಸಭ್ಯವಾಕ್ಯಗಳನ್ನು ನುಡಿಯಲೆಂದೋ ಏನೋ ಹಿಂತಿರುಗಿದಳು. ಅವಳು ತನ್ನ ಕೊರಳಿನಿಂದ ಸರವೊಂದನ್ನು ತೆಗೆದು—"ಮಹಾಶಯ, ನನಗಾಗಿ ಇದನ್ನು ಧರಿಸು. ನಾನೀಗ ಐಶ್ವರ್ಯಹೀನಳಾಗಿರದಿದ್ದರೆ, ಇದಕ್ಕಿಂತಲೂ ಬೆಲೆಬಾಳುವ ಬಹುಮಾನವನ್ನು ಕೊಡುತ್ತಿದ್ದೆ" ಎಂದಳು.

ತರುಣಿಯರಿಬ್ಬರೇ ಏಕಾಂತದಲ್ಲಿದ್ದಾಗ ರೋಸಲಿಂಡ್ ಇನ್ನೂ ಆರ್ಲೆಂಡೋ ವಿಷಯವಾಗಿಯೇ ಮಾತನಾಡುತ್ತಿದ್ದಳು. ಸಿಲಿಯಾ ಆಗ ತನ್ನ ಗೆಳತಿ ಸುಂದರನಾದ ಅಪರಿಚಿತ ತರುಣನಲ್ಲಿ ಅನುರಕ್ತಳಾಗಿರುವಳೆಂಬುದನ್ನು ಮನಗಾಣತೊಡಗಿದಳು. ಅವಳು ರೋಸಲಿಂಡಳನ್ನು "ನೀನಿಷ್ಟು ಹಠಾತ್ತನೆ ಅನುರಕ್ತಳಾಗುವುದು ಶಕ್ಯವೇ?" ಎಂದು ಕೇಳಿದಳು. ರೋಸಲಿಂಡ್ ಕೆಂಪೇರುತ್ತಾ " ಡ್ಯೂಕನಾಗಿದ್ದ ನನ್ನ ತಂದೆ ಅವನ ತಂದೆಯನ್ನು ಬಹುವಾಗಿ ಪ್ರೀತಿಸುತ್ತಿದ್ದನು. "ಎಂದುತ್ತರಿಸಿದಳು. ಸಿಲಿಯಾ ಸುಮ್ಮನಾಗದೆ" ಹಾಗೆಂದು ನೀನವನ ಮಗನನ್ನು ಪ್ರೇಮಿಸಬೇಕೇ? ಹಾಗಿದ್ದರೆ ನಾನವನನ್ನು ದ್ವೇಷಿಸಬೇಕಾಗುವುದಲ್ಲ! ನನ್ನ ತಂದೆ ಅವನ ತಂದೆಯನ್ನು ದ್ವೇಷಿಸುವನಲ್ಲವೆ? ಹೀಗಿದ್ದರೂ ಸಹ ನನಗೇನೋ ಆರ್ಲೆಂಡೋ ಮೇಲೆ ಲವಲೇಶವೂ ದ್ವೇಷವಿಲ್ಲ" ಎಂದಳು.

ಸರ್ ರೋಲ್ಯಾಂಡ್ ಡಿ ಬಾಯ್ಸನ ಮಗನನ್ನು ನೋಡಿದಾಗಿನಿಂದ ಫ್ರೆಡರಿಕ್‌ಗೆ ತನ್ನ ಪ್ರಜೆಗಳಲ್ಲಿ ಬಹುಮಂದಿ ತನ್ನ ದೇಶಭ್ರಷ್ಟ ಸೋದರನ ಮಿತ್ರರಿರುವರೆಂಬ ಸ್ಮೃತಿಯುಂಟಾಗಿ ಕ್ರೋಧವೇರಿತು. ಸಾಲದುದಕ್ಕೆ, ಜನರು ರೋಸಲಿಂಡಳನ್ನು ಆವಳ ಸದ್ಗುಣಗಳಿಗಾಗಿ ಶ್ಲಾಘಿಸುತ್ತಲೂ, ಅವಳ ತಂದೆಯ ಸಲುವಾಗಿ ಕನಿಕರಿಸುತ್ತಲೂ ಇದ್ದರು. ಇದರಿಂದಾಗಿ ಅವನಿಗೆ ಕೆಲವು ಸಮಯದಿಂದ ಅವಳ ಮೇಲೆ ಒಳಗೊಳಗೇ ಅಸಮಾಧಾನ ಕುದಿಯುತ್ತಿತ್ತು. ಈಗ ಒಮ್ಮೆಲೇ ಅವನಿಗೆ ಆವಳ ಮೇಲಿನ ದ್ವೇಷಭಾವ

ಸಿಡಿದೆದ್ದಿತು. ಸಿಲಿಯಾ ಮತ್ತು ರೋಸಲಿಂಡ್ ಆರ್ಲೆಂಡೋ ಬಗ್ಗೆಯೇ ಇನ್ನೂ ಸಂಭಾಷಿಸುತ್ತಿದ್ದಾಗ ಫ್ರೆಡರಿಕ್ ರಭಸದಿಂದ ಅಲ್ಲಿಗೆ ಪ್ರವೇಶಿಸಿದನು. ಕ್ರೋಧಾವಿಷ್ಟ ನೋಟದಿಂದ ರೋಸಲಿಂಡಳೆಡೆಗೆ ನೋಡುತ್ತಾ ಅವಳು ಆ ಕೂಡಲೇ ಅರಮನೆಯನ್ನು ತೊರೆದು ತನ್ನ ದೇಶಭ್ರಷ್ಟ ತಂದೆಯ ಹಾದಿಯನ್ನು ಹಿಡಿಯಬೇಕೆಂದು ಆಜ್ಞಾಪಿಸಿದನು. ಸಿಲಿಯಾ ಅವಳಿಗಾಗಿ ತಂದೆಯ ಬಳಿ ಅದೆಷ್ಟೋ ಮನವಿ ಮಾಡಿಕೊಂಡಳು. ಆದರೆ ಅವೆಲ್ಲವೂ ನೀರಿನಲ್ಲಿ ಹೋಮಮಾಡಿದಂತೆ ವ್ಯರ್ಥವಾದವು. ಫ್ರೆಡರಿಕ್ ಇಷ್ಟು ದಿನವೂ ಅವಳನ್ನು ಮಗಳ ಸಲುವಾಗಿಯೇ ಇರಿಸಿಕೊಂಡಿದ್ದುದಾಯಿತೆಂದು ಉತ್ತರಕೊಟ್ಟನು. ಸಿಲಿಯಾ—“ಆಗ ನಾನು ಅವಳನ್ನು ಇರಗೊಡುವಂತೆ ನಿಮ್ಮನ್ನು ಕೇಳಿಕೊಂಡೆನೆ? ನಾನಾಗ ಅವಳ ಬೆಲೆಯನ್ನು ತಿಳಿಯಲಾರದಷ್ಟು ಚಿಕ್ಕವಳಾಗಿದ್ದೆ. ಅದರಿಂದು ನಾನವಳ ಯೋಗ್ಯತೆಯನ್ನು ಗ್ರಹಿಸಿದ್ದೇನೆ. ಇಷ್ಟು ದಿನವೂ ನಾವಿಬ್ಬರು ಒಂದಿಗೇ ಮಲಗಿ, ಒಂದಿಗೇ ಎದ್ದು, ಒಂದಿಗೇ ಶಿಕ್ಷಿತರಾಗಿ, ಕೂಡಿಯೇ ಆಟವಾಡಿ ಬೆಳೆದಿರುವುದರಿಂದ ಈಗವಳ ಸಹವಾಸವನ್ನುಳಿದು ನಾನಿರಲಾರೆ” ಎಂದಳು. ಫ್ರೆಡರಿಕ್—“ಅವಳು ನೀನೇಣಿಸದಷ್ಟು ಮಾಯಗಾತಿ. ಅವಳ ನಯ-ವಿನಯ, ಏಕೆ, ಕೇವಲ ಅವಳ ಮೌನ ಮತ್ತು ಸಹನೆಗಳೇ ಜನರನ್ನು ಒಲಿಸಿಕೊಳ್ಳಲು ಸಾಕಾಗಿ ಅವರೆಲ್ಲ ಅವಳನ್ನೆಷ್ಟು ಕನಿಕರಿಸುತ್ತಾರೆ! ನೀನವಳಿಗಾಗಿ ಪ್ರಾರ್ಥಿಸಿ ಮೂರ್ಖಳೆನಿಸುವೆ. ಅವಳಿಲ್ಲದಿರುವಾಗಲೇ ನೀನಿನ್ನೂ ಚೆನ್ನಾಗಿ ಶೋಭಿಸಬಹುದು. ಅವಳ ಸಲುವಾಗಿ ನೀನಿನ್ನು ಏನು ಹೇಳುವುದೂ ಬೇಡ. ನಾನವಳಿಗೆ ವಿಧಿಸುತ್ತಿರುವ ಸುಗ್ರೀವಾಜ್ಞೆಯನ್ನು ಏನೇ ಹೇಳಿದರೂ ನಾನು ಬದಲಾಯಿಸುವುದಿಲ್ಲ” ಎಂದನು.

ಸಿಲಿಯಾ, ರೋಸಲಿಂಡಳನ್ನು ತನ್ನೊಡನೆ ಇರಗೊಡಲು ತಂದೆಯನ್ನು ಒಡಂಬಡಿಸುವುದು ತೀರಾ ಅಸಾಧ್ಯವೆಂದು ಮನಗಂಡಳು. ಕೊನೆಗೆ ಉದಾರ ಹೃದಯದಿಂದ ತಾನೂ ಅವಳೊಂದಿಗೇ ಹೋಗಲು ನಿರ್ಧರಿಸಿದಳು. ಆ ರಾತ್ರಿಯೇ ತಂದೆಯ ಅರಮನೆಯನ್ನು ತೊರೆದು ಸಿಲಿಯಾ ರೋಸಲಿಂಡಳ ತಂದೆಯಾದ ದೇಶಭ್ರಷ್ಟ ಡ್ಯೂಕನನ್ನು ಅರಸಲು ಗೆಳತಿಯೊಂದಿಗೆ ಆರ್ಡೆನ್ ಅರಣ್ಯಪ್ರದೇಶಕ್ಕೆ ತೆರಳಿದಳು.

ಹೊರಡುವ ಮುನ್ನ, ಸಿಲಿಯಾಗೆ, ತರುಣಿಯರಿಬ್ಬರು ತಮ್ಮ ಆಗಿನ ಶ್ರೀಮಂತ ವೇಷಭೂಷಣಗಳಲ್ಲೇ ಪ್ರಯಾಣ ಮಾಡುವುದು ಅಪಾಯಕರವೆಂದೆನ್ನಿಸಿತು. ಆದ್ದರಿಂದ ಅವಳು ತಾವಿಬ್ಬರೂ ಹಳ್ಳಿಯ ಯುವತಿಯರಂತೆ

ಉಡುಪು ಧರಿಸಿ ವೇಷ ಮರೆಸಿಕೊಂಡು ಹೋಗಬೇಕೆಂಬ ಸೂಚನೆಯನ್ನಿತ್ತಳು. ರೋಸಲಿಂಡ್, ಇನ್ನೊಂದು ಹೆಜ್ಜೆ ಮುಂದುವರಿದು, ತಮ್ಮಲ್ಲೊಬ್ಬರು ಪುರುಷವೇಷ ಧರಿಸಿದಲ್ಲಿ ಇನ್ನೂ ಸುರಕ್ಷಿತವಾಗಿರಬಹುದೆಂದಳು. ಅವರಿಬ್ಬರಲ್ಲಿ ಹೆಚ್ಚು ಎತ್ತರವಾಗಿದ್ದ ರೋಸಲಿಂಡ್ ಹಳ್ಳಿಯ ಯುವಕನಂತೆಯೂ, ಸಿಲಿಯಾ ಹಳ್ಳಿಯ ತರುಣಿಯಂತೆಯೂ ಉಡುಪು ಧರಿಸಿಕೊಂಡು, ತಾವಿಬ್ಬರೂ ಅಣ್ಣ-ತಂಗಿಯರೆಂದು ಹೇಳಿಕೊಳ್ಳಬೇಕೆಂದೂ ಆ ಕೂಡಲೇ ನಿರ್ಧಾರ ಮಾಡಿದ್ದಾಯಿತು. ರೋಸಲಿಂಡ್ ಗ್ಯಾನಿಮೆಡ್ ಎಂಬ ಹೆಸರನ್ನೂ, ಸಿಲಿಯಾ ಆಲಿಯೆನಾ ಎನ್ನುವ ಹೆಸರನ್ನೂ ಆರಿಸಿಕೊಂಡರು.

ಈ ರೀತಿ ವೇಷಧಾರಿಗಳಾಗಿ, ದಾರಿಯಲ್ಲಿನ ತಮ್ಮ ಖರ್ಚುವೆಚ್ಚಗಳನ್ನು ಪೂರೈಸಲೋಸ್ಕರ ತಮ್ಮಲ್ಲಿದ್ದ ಹಣವನ್ನೂ ಆಭರಣಗಳನ್ನೂ ತೆಗೆದುಕೊಂಡು ಈ ಚೆಲುವೆಯರಾದ ರಾಜಪುತ್ರಿಯರು ದೀರ್ಘಪ್ರಯಾಣವನ್ನು ಕೈಗೊಂಡರು. ಆರ್ಡೆನಿನ ಅರಣ್ಯ ಪ್ರದೇಶ ಡ್ಯೂಕನ ರಾಜ್ಯದಾಚೆ ಬಹು ದೂರದಲ್ಲಿದ್ದಿತು.

ನಮ್ಮ ರೋಸಲಿಂಡ್-ಅಲ್ಲ, ಈಗಿನ ನಮ್ಮ ಗ್ಯಾನಿಮೆಡ್, ಪುರುಷ ವೇಷದೊಂದಿಗೆ ಪುರುಷಸಹಜ ಧೈರ್ಯವನ್ನು ತಳೆದಿರುವಂತೆ ತೋರ್ಪಡಿಸಿಕೊಂಡನು. ಇಂತಹ ಸುದೀರ್ಘ ಪ್ರಯಾಣದಲ್ಲಿ ರೋಸಲಿಂಡಳನ್ನು ಹಿಂಬಾಲಿಸಿ ಬಂದು ಸಿಲಿಯಾ ತೋರಿದ ಅವ್ಯಾಜ ಸ್ನೇಹಕ್ಕೆ ಆತ ಮನಸೋತಿದ್ದನು. ಅಂತಹ ಶುದ್ಧ ಪ್ರೇಮಕ್ಕೆ ಸಾಟಿಯಾಗಲೋ ಎಂಬಂತೆ ಈ ನಮ್ಮ ಹೊಸ ಸೋದರನು ತಾನು ನಿಜವಾಗಿಯೂ ಮುಗ್ಧ ತರುಣಿ ಆಲಿಯೆನಳ ಧೀರ ಅಣ್ಣನೆಂಬಂತೆಯೇ ಉಲ್ಲಾಸಭರಿತನಾದನು.

ಕೊನೆಗೊಮ್ಮೆ ಅವರು ಆರ್ಡೆನಿನ ಅರಣ್ಯಪ್ರದೇಶವನ್ನು ಸೇರಿದರು ಅದರಲ್ಲಿ ಹಿಂದೆ ದಾರಿಯುದ್ದಕ್ಕೂ ತಮಗೆ ದೊರೆತಿದ್ದಂತಹ ಆಹಾರ ವಾಸಸ್ಥಾನಗಳ ಸೌಲಭ್ಯವೆಲ್ಲಿಯೂ ಕಾಣಬರಲಿಲ್ಲ. ಇಲ್ಲಿಯವರೆಗೂ ತಂಗಿಯನ್ನು ಉಲ್ಲಾಸದ ನುಡಿಗಳಿಂದ ಪ್ರಸನ್ನಗೊಳಿಸಲೆತ್ನಿಸುತ್ತಿದ್ದ ಗ್ಯಾನಿಮೆಡ್ ಈಗ ಹಸಿವು ಆಯಾಸಗಳಿಂದ ತಾನೇ ಬಳಲಿಹೋದನು. ತನ್ನ ಪುರುಷವೇಷಕ್ಕೆ ಅಪಮಾನವೆಂದೂ ಲೆಕ್ಕಿಸದೆ, ಆಲಿಯೆನಾಳೊಂದಿಗೆ ತನಗೆ ಸ್ತ್ರೀಯರಂತೆ ಅಳಬೇಕೆಂದೆನಿಸುವಷ್ಟು ಬಳಲಿಕೆಯಾಗಿರುವುದೆಂದು ಹೇಳಿಕೊಂಡನು! ಆಲಿಯೆನಾಳಂತೂ ತನ್ನಿಂದ ಇನ್ನೊಂದು ಹೆಜ್ಜೆ ಸಹ ಮುಂದಿಡಲಾಗುವುದಿಲ್ಲವೆಂದಳು. ಆಗ ಗ್ಯಾನಿಮೆಡ್ ತನಗಿಂತ ದುರ್ಬಲಳೆನಿಸಿದ ಸ್ತ್ರೀಯನ್ನು

ಸಂತೈಸಿ ಆದರಿಸಿಸುದು ಪುರುಷನ ಕರ್ತವ್ಯ ವೆಂಬುದನ್ನು ನೆನೆಸುವ ಪ್ರಯತ್ನ ಮಾಡಿದನು. ಹೊಸ ತಂಗಿಯೆದುರು, ತಾನು ಧೈರ್ಯಶಾಲಿ ಎಂಬುದನ್ನು ತೋರ್ಪಡಿಸಿಕೊಳ್ಳಲು ಅವನು—"ತಂಗಿ ಆಲಿಯೆನಾ, ಎದೆಗುಂದಬೇಡ; ಇನ್ನೇನು ನಾವಿನ್ನು ನಮ್ಮ ಪ್ರಯಾಣದ ಕೊನೆ ಮುಟ್ಟಿದಂತೆಯೇ; ನೋಡು ಇದೇ ಆರ್ಡನ್ ಅರಣ್ಯ ಪ್ರದೇಶ" ಎಂದನು. ಆದರೆ ನಟನೆಯ ಪೌರುಷವೂ ಒತ್ತಾಯದ ಧೈರ್ಯವೂ ಇನ್ನವರನ್ನು ಕಾಯಲಾರದೆ ಹೋದವು. ಆರ್ಡನಿನ ಅರಣ್ಯ ಪ್ರದೇಶವನ್ನೇ ಸೇರಿದರೂ ಡ್ಯೂಕ್ ಎಲ್ಲಿರುವನೆಂಬುದು ಅವರಿಗೆ ತಿಳಿದಿರಲಿಲ್ಲ. ದಾರಿ ತಪ್ಪಿಹೋದರಿಂದಲೂ ಆಹಾರಾಭಾವದಿಂದಲೂ ಅವರು ನಾಶವಾಗಬೇಕಾತ್ತು. ಬಳಲಿದೀ ತರುಣಿಯರ ಪಯಣ ಇಲ್ಲಿಯೇ ದುರಂತವಾಗಿ ಪರಿಣಮಿಸುವುದರಲ್ಲಿದ್ದಿತು. ಆದರೆ ದೈವವಶಾತ್, ಈ ಹೊತ್ತಿಗೆ, ಅವರು ಬಳಲಿಕೆಯಿಂದ ಯಾವ ಬಿಡುಗಡೆಯ ಆಸೆಯೂ ಇಲ್ಲದಂತಾಗಿ, ಇನ್ನೇನು ಸಾಯುವವರಂತೆ ಹುಲ್ಲಿನ ಮೇಲೆ ಕುಸಿದು ಕುಳಿತಿದ್ದಾಗ, ಆ ದಾರಿಯಲ್ಲಿ ಹಳ್ಳಿಗನೊಬ್ಬನು ಹಾದುಹೋದನು. ಆಗ ಗ್ಯಾನಿಮೆಡ್ ಮತ್ತೊಮ್ಮೆ ಪುರುಷ ಸಹಜ ದಾರ್ಷ್ಟ್ಯ ತಳೆದು ಅವನನ್ನು ಮಾತನಾಡಲೆತ್ನಿಸುತ್ತಾ—"ಅಯ್ಯಾ, ಈ ನಿರ್ಜನ ಪ್ರದೇಶದಲ್ಲಿ ಸ್ನೇಹದಿಂದಾಗಲೀ, ಹಣದಿಂದಾಗಲೀ ನಾವು ಆದರವನ್ನು ಕೊಳ್ಳಬಹುದಾದರೆ, ಈ ಕೂಡಲೇ ನಮ್ಮನ್ನು ವಿಶ್ರಾಂತಿ ಪಡೆಯಬಹುದಾದೆಡೆಗೆ ಕರೆದೊಯ್ಯಿ. ನನ್ನ ತಂಗಿಯಾದ ಈ ಯುವತಿ ಪ್ರಯಾಣದಿಂದ ಬಹು ಬಳಲಿಹೋಗಿ, ಆಹಾರವಿಲ್ಲದೆ ಮೂರ್ಛೆಹೋಗುತ್ತಿದ್ದಾಳೆ" ಎಂದನು.

ಆ ಹಳ್ಳಿಗನು ತಾನೊಬ್ಬ ಕುರುಬನ ಸೇವಕನೆಂದು ಹೇಳಿಕೊಂಡನು. ತನ್ನೊಡೆಯನ ಮನೆಯು ಆಗ ವಿಕ್ರೀತವಾಗುವುದರಲ್ಲಿರುವುದೆಂದೂ, ಆದ್ದರಿಂದ ಅಲ್ಲಿವರಿಗೆ ಹೆಚ್ಚಿನ ಸತ್ಕಾರ ದೊರೆಯಲಾರದೆಂದೂ ಹೇಳಿದನು. ಆದರೂ ಸಹ ಅವರು ತನ್ನೊಂದಿಗೆ ಬರುವುದಾದಲ್ಲಿ ಅವರಿಗೆ ತಮ್ಮಲ್ಲಿರುವುದನ್ನೇ ನೀಡುವುದಾಗಿ ನುಡಿದನು. ಅವರಿಬ್ಬರಿಗೆ ಕಷ್ಟನಿವಾರಣೆಯಾಗಬಹುದೆಂಬ ಆಸೆಯೊಂದೇ ಹೊಸ ಶಕ್ತಿಯನ್ನು ನೀಡಿತು. ಆ ಕೂಡಲೇ ಅವರಿಬ್ಬರೂ ಅವರೊಂದಿಗೆ ಹೋಟರು. ಆ ಮನೆಯನ್ನು ಕುರಿಮಂದೆಯನ್ನೂ ತಾವೇ ಹಣಕೊಟ್ಟು ಕೊಂಡು, ತಮ್ಮನ್ನಲ್ಲಿಗೆ ಕರೆತಂದವನನ್ನೇ ಸೇವಕನಾಗಿ ನೇಮಿಸಿಕೊಂಡರು. ಹೀಗೆ ಅದೃಷ್ಟಬಲದಿಂದ ತಮಗೆ ದೊರಕಿದ ಅಚ್ಚುಕಟ್ಟಾದ ಕುಟೀರ, ಸಾಮಗ್ರಿಗಳ ಸಂಗ್ರಹದಿಂದ ಅವರು ತೃಪ್ತರಾದರು.

ಡ್ಯೂಕ್ ಆ ಅರಣ್ಯಪ್ರದೇಶದ ಯಾವ ಭಾಗದಲ್ಲಿರುವನೆಂಬುದನ್ನು ತಿಳಿಯುವವರೆಗೂ ಅಲ್ಲಿಯೇ ಇರಲು ನಿರ್ಧರಿಸಿದರು.

ಮಾರ್ಗಾಯಾಸದಿಂದ ವಿಶ್ರಾಂತಿ ಪಡೆದು ಚೇತರಿಸಿಕೊಂಡನಂತರ ಅವರಿಬ್ಬರಿಗೂ ತಮ್ಮ ಹೊಸ ಜೀವನ ಬಹು ಮೆಚ್ಚಾಯಿತು. ನಿಜಕ್ಕೂ ತಾವು ನಟಿಸುತ್ತಿದ್ದ ಕುರುಬ-ಕುರುಬಗಿತ್ತಿಯರೇ ತಾವಾಗಿರಬೇಕೆಂದವರು ಭ್ರಮೆಪಡುವಂತಾಯಿತು. ಆದರೂ ಒಮ್ಮೊಮ್ಮೆ ಗ್ಯಾನಿಮೆಡ್ ತಾನು ಹಿಂದೊಮ್ಮೆ ರೋಸಲಿಂಡಳಾಗಿದ್ದು ತಂದೆಯ ಪ್ರಿಯಮಿತ್ರನ ಮಗನಾದ ಧೀರ ಆರ್ಲೆಂಡೋನಲ್ಲಿ ಗಾಢಾನುರಕ್ತಳಾಗಿದ್ದುದನ್ನು ಸ್ಮರಿಸಿಕೊಳ್ಳುತ್ತಿದ್ದನು. ಗ್ಯಾನಿಮೆಡ್, ಆರ್ಲೆಂಡೋ ತನ್ನಿಂದ ಬಹುದೂರದಲ್ಲಿ, ತಾವೆಷ್ಟು ದೂರ ಪ್ರಯಾಣ ಮಾಡಿಬಂದಿದ್ದರೋ ಅಷ್ಟು ದೂರದಲ್ಲಿರುವನೆಂದೇ ಎಣಿಸಿ ನಿಡುಸುಯ್ದನು. ಆದರೆ ಶೀಘ್ರದಲ್ಲಿಯೇ ಆರ್ಲೆಂಡೋ ಸಹ ಆರ್ಡೆನಿನ ಅರಣ್ಯಪ್ರದೇಶದಲ್ಲೇ ಇರುವನೆಂಬುದು ಅವರಿಗೆ ತಿಳಿಯಬಂದಿತು. ಈ ಕೌತುಕ ನಡೆದುದು ಹೀಗೆ :

ಸರ್ ರೋಲ್ಯಾಂಡ್ ಡಿ ಬಾಯ್ಸ್ ಸಾಯುವ ಮುನ್ನ ತನ್ನ ಕೊನೆಯ ಮಗ ಆರ್ಲೆಂಡೋನನ್ನು ದೊಡ್ಡ ಮಗ ಆಲಿವರನ ಪೋಷಣೆಗೊಪ್ಪಿಸಿದ್ದನು. ಆರ್ಲೆಂಡೋಗೆ ತಕ್ಕ ಶಿಕ್ಷಣವಿತ್ತು ಅವನನ್ನು ತಮ್ಮ ಮನೆತನದ ಗೌರವಕ್ಕನುಗುಣವಾಗಿ ರೂಪಿಸಬೇಕೆಂದು ಅಂತಿಮ ಆಜ್ಞೆ ವಿಧಿಸಿದ್ದನು. ಆದರೆ ಆಲಿವರ್ ಅಯೋಗ್ಯ ಸೋದರನೆಂಬುದು ಆ ನಂತರ ತಿಳಿಯಪಟ್ಟಿತು. ಮೃತ್ಯುಶಯ್ಯೆಯಲ್ಲಿ ತಂದೆ ವಿಧಿಸಿದ್ದ ಆಜ್ಞೆಯನ್ನು ಉಪೇಕ್ಷಿಸಿ ಈ ಅಣ್ಣನು ತಮ್ಮನಿಗೆ ಯಾವ ಬಗೆಯ ಶಿಕ್ಷಣವನ್ನೂ ಕೊಡಿಸದೆ ಉಳಿಸಿಕೊಂಡಿದ್ದನು. ತಮ್ಮ ಅಶಿಕ್ಷಿತನಾಗಿ ಎಲ್ಲರಿಂದಲೂ ಸಂಪೂರ್ಣವಾಗಿ ಕಡೆಗಣಿಸಲ್ಪಡಬೇಕೆಂಬುದೇ ಅವನ ಉದ್ದಿಶ್ಯವಾಗಿದ್ದಿತು. ಆದರೆ ಆರ್ಲೆಂಡೋ ಸ್ವಭಾವ ಮತ್ತು ಉದಾತ್ತ ಮನೋಗುಣಗಳಲ್ಲಿ ಅವನ ಶ್ರೇಷ್ಠ ತಂದೆಯನ್ನೇ ಬಹುಮಟ್ಟಿಗೆ ಹೋಲುತ್ತಿದ್ದನು. ಎಂತಲೇ ಅವನು, ಯಾವ ಬಗೆಯ ಶಿಕ್ಷಣ ಸೌಲಭ್ಯವಿಲ್ಲದಿದ್ದರೂ ಸಹ, ಬಹು ಲಕ್ಷ್ಯಗೊಟ್ಟು ಬೆಳಸಿದ ತರುಣನಂತೆಯೇ ಎಲ್ಲರಿಗೂ ಕಂಡು ಬರುತ್ತಿದ್ದನು. ಆಲಿವರ್ ತನ್ನೀ ಅಶಿಕ್ಷಿತ ಸೋದರನ ಉತ್ತಮ ವ್ಯಕ್ತಿತ್ವ, ಗಣ್ಯ ನಡೆನುಡಿಗಳಿಂದ ಅಸೂಯಾವಿಷ್ಟನಾಗಿ, ಕೊನೆಗೊಮ್ಮೆ ಅವನನ್ನು ನಾಶಗೊಳಿಸಲು ಬಯಸಿದನು. ಇದಕ್ಕಾಗಿಯೇ ಅವನು ಹಿಂದೆ ಹೇಳಿ

ದಂತಹ ಮಲ್ಲಯುದ್ಧದಲ್ಲಿ ಭಾಗವಹಿಸಿ ಎಷ್ಟೋ ಜನರನ್ನು ಹತಮಾಡಿದ್ದ ಆ ಪ್ರವೀಣನೊಡನೆ ಕಾದುವಂತೆ ತಮ್ಮನನ್ನು ಉತ್ತೇಜಿಸಲು ಜನರನ್ನು ನಿಯೋಜಿಸಿದ್ದನು ಈ ಕ್ರೂರ ಸೋದರನ ಉದಾಸೀನತೆಯಿಂದಾಗಿಯೇ ಸ್ನೇಹರಹಿತನಾಗಿದ್ದ ಆರ್ಲೆಂಡೋ ತಾನು ಸಾವನ್ನು ಅಪ್ಪಲು ಕಾತರನಾಗಿರುವೆನೆಂದು ಹೇಳಿಕೊಂಡುದು.

ತನ್ನ ದುಷ್ಟ ಆಶಯುಗಳಿಗೆ ವಿರುದ್ಧವಾಗಿ ಆರ್ಲೆಂಡೋ ಜಯಶಾಲಿಯಾವನೆಂದು ಕೇಳಿದಾಗ ಆಲಿವರನ ಈರ್ಷ್ಯಾ ದ್ವೇಷಗಳು ಎಲ್ಲೆ ಮೀರಿದವು. ಅವನು ಆ ರಾತ್ರಿಯೇ ಆರ್ಲೆಂಡೋನ ಮಲಗುವ ಕೋಣೆಗೆ ಬೆಂಕಿಯಿಡುವುದಾಗಿ ಪ್ರತಿಜ್ಞೆಮಾಡಿದನು. ಅವನೀ ಪ್ರತಿಜ್ಞೆ ವೃದ್ಧ ಸೇವಕನೊಬ್ಬನ ಕಿವಿಗೆ ಬಿದ್ದಿತು. ಆತ ಅವನ ತಂದೆಯ ಕಾಲದಿಂದಲೂ ಸ್ವಾಮಿಭಕ್ತ ಸೇವಕನಾಗಿದ್ದವನು. ಸರ್ ರೋಲ್ಯಾಂಡನ ಸಾದೃಶ್ಯವಿದ್ದುದರಿಂದಲೇ ಅವನು ಆರ್ಲೆಂಡೋನನ್ನು ಬಹುವಾಗಿ ಪ್ರೀತಿಸುತ್ತಿದ್ದನು. ಡ್ಯೂಕನ ಅರಮನೆಯಿಂದ ಆರ್ಲೆಂಡೋ ಹಿಂತಿರುಗಿಬರುತ್ತಿದಾಗ ಈ ವೃದ್ಧ ದಾರಿಯಲ್ಲೇ ಅವನನ್ನು ಸಂಧಿಸಲು ಹೋದನು. ಆರ್ಲೆಂಡೋನನ್ನು ನೋಡಿದ ಕೂಡಲೇ ಅವನಿಗೆ ತನ್ನ ಪ್ರೇಮದ ಚಿಕ್ಕಒಡೆಯನ ಅಪಾಯುಕರ ಪರಿಸ್ಥಿತಿಯ ಪೂರ್ಣಗ್ರಹಿಕೆಯುಂಟಾಗಿ ದುಃಖ ಉಕ್ಕಿಬಂದಿತು. ಅವನು–"ಅಯ್ಯೊ! ನನ್ನ ಪ್ರೀತಿಯ ಒಡೆಯ! ಓ, ನನ್ನ ಶಾಂತಪ್ರಭು! ಅಯ್ಯೊ, ಸರ್ ರೋಲ್ಯಾಂಡರ ಸ್ಮೃತಿಯೆ? ನೀನೇಕೆ ಇಷ್ಟೊಂದು ಸದ್ಗುಣವನ್ನು ತುಂಬಿಕೊಂಡಿರುವೆ? ನೀನೇಕಿಷ್ಟು ವಿನೀತವಾಗಿ ಬಲ-ಧೈರ್ಯಗಳ ಖನಿಯಾಗಿರುವೆ? ಅಯ್ಯೊ, ಆ ಮಲ್ಲಯುದ್ಧ ಪ್ರವೀಣನನ್ನು ಕೊಲ್ಲಲು ನೀನೇಕಷ್ಟು ಉತ್ಸುಕನಾಗಿದ್ದೆ? ನಿನ್ನನ್ನು ಕುರಿತ ಸ್ತುತಿ ಬಹು ವೇಗದಿಂದ, ನಿನಗಿಂತ ಮುಂಚಿತವಾಗಿ ಮನೆಯನ್ನು ಮುಟ್ಟಿತಲ್ಲಾ!" ಎಂದು ದುಃಖೋದ್ರೇಕದಿಂದ ಹಲುಬಿದನು. ಆರ್ಲೆಂಡೋ ಇದೆಲ್ಲದರ ಅರ್ಥವೇನೆಂದು ಕೌತುಕ ಪಡುತ್ತಾ 'ಏನಾಯಿತು?' ಎಂದು ಕೇಳಿದನು. ಆಗ ವೃದ್ಧನು ಆರ್ಲೆಂಡೋನ ದುಷ್ಟ ಸೋದರ ನಿಯೋಜಿಸಿದ್ದ ಕೃತ್ಯವನ್ನು ತಿಳಿಯಪಡಿಸಿದನು. ಮಾತಿನ ಕೊನೆಯಲ್ಲಿ ಆರ್ಲೆಂಡೋ ಆ ಕೂಡಲೇ ಪಲಾಯನಮಾಡಿ ಅಪಾಯವನ್ನು ತಪ್ಪಿಸಿಕೊಳ್ಳಬೇಕೆಂದು ಸಲಹೆಯಿತ್ತನು. ಆರ್ಲೆಂಡೋ ಬಳಿ ಹಣವಿರಲಿಲ್ಲವೆಂಬುದು ಆ ವೃದ್ಧ ಸೇವಕ ಆಡಮನಿಗೆ ತಿಳಿದಿತ್ತು. ಆದ್ದರಿಂದಲೇ ಅವನು ತಾನು ಕೂಡಿಹಾಕಿದ್ದ ಅಲ್ಪಸ್ವಲ್ಪ ಹಣವನ್ನೇ ತಂದಿದ್ದನು—"ಇದೋ ಇಲ್ಲಿ ಐನೂರು ವರಹಗಳಿವೆ;

ನಾನು ನಿಮ್ಮ ತಂದೆಯ ಕೈಕೆಳಗಿದ್ದಾಗ ಮಿತವ್ಯಯದಿಂದ ಇದನ್ನು ನನ್ನ ವೃದ್ಧಾಪ್ಯದಲ್ಲಿನ ಅನುಕೂಲಕ್ಕೆಂದು ಉಳಿಸಿಟ್ಟದ್ದೆ. ಇದನ್ನು ತೆಗೆದುಕೋ. ಇನ್ನು ಮುಂದೆ, ನನ್ನ ಮುಪ್ಪಿನ ಕಾಲಕ್ಕೆ ಸಮಾಧಿಸ್ಥನಾಗಿರುವ ಆ ನನ್ನೊಡೆಯನ ಆತ್ಮವೇ ಕಣ್ ಬೆಳಕಾಗಿರಲಿ. ಇದೋ ಈ ಚಿನ್ನವೆಲ್ಲವನ್ನೂ ನಿನಗೆ ಕೊಡುತ್ತಿದ್ದೇನೆ, ನಾನು ನಿನ್ನ ಸೇವಕನಾಗಿರುತ್ತೇನೆ. ನಾನು ವೃದ್ಧನೆಂದು ಕಂಡರೂ, ನಿನ್ನ ಕೆಲಸ ಕಾರ್ಯಗಳೆಲ್ಲಾ ತರುಣನಂತೆಯೇ ದುಡಿಯಬಲ್ಲೆ" ಎಂದನು. ಆರ್ಲೆಂಡೋ–"ಓ ವೃದ್ಧಶ್ರೇಷ್ಠ! ಪ್ರಾಚೀನ ಪ್ರಪಂಚದ ನಿರಂತರ ಸೇವಾಶ್ರದ್ಧೆ ನಿನ್ನಲ್ಲಿ ಅದೆಷ್ಟು ಚೆನ್ನಾಗಿ ಮೂಡಿದೆ! ನೀನು ಈ ಕಾಲದ ರೀತಿನೀತಿಗಳವನಲ್ಲ. ನಡೆ, ನಾವಿಬ್ಬರೂ ಒಂದಿಗೇ ಹೋಗೋಣ. ನಿನ್ನೀ ಯುವಧನ ವೆಚ್ಚವಾಗಿಹೋಗುವ ಮುನ್ನವೇ ನಮ್ಮಿಬ್ಬರ ಅಶನಾರ್ಥಕ್ಕಾಗಿ ನಾನು ಇನ್ನಾವುದಾದರೂ ದಾರಿ ಹುಡುಕುತ್ತೇನೆ" ಎಂದನು.

ಹೀಗೆ ಈ ಸ್ವಾಮಿಭಕ್ತ ಸೇವಕನೂ ಅವನ ಮೆಚ್ಚಿನ ಒಡೆಯನೂ ಒಂದುಗೂಡಿ ಅಲ್ಲಿಂದ ಹೊರಟುಬಿಟ್ಟರು. ಯಾವ ದಾರಿ ಹಿಡಿಯಬೇಕೆಂಬುದನ್ನೇ ನಿರ್ಧರಿಸಿಕೊಳ್ಳದೆ, ಮುಂದೆ ಮುಂದೆ ಪ್ರಯಾಣ ಮಾಡಿ ಕೊನೆಗೆ ಆರ್ಡನಿನ ಅರಣ್ಯಪ್ರದೇಶವನ್ನೇ ಸೇರಿದರು. ಅಲ್ಲಿ ಅವರು ಗ್ಯಾನಿಮೆಡ್ ಮತ್ತು ಆಲಿಯೆನಾರಂತೆಯೇ ಆಹಾರಾಭಾವದ ದುಸ್ಥಿತಿಗೆ ಸಿಲುಕಿದರು· ಯಾರಾದರೂ ಮನುಷ್ಯರಿರುವ ಸ್ಥಳವನ್ನು ಅರಸುತ್ತಾ ಅವರಿಬ್ಬರೂ ಅಲೆದಾಡಿದರು.–ಹಸಿವು, ಆಯಾಸಗಳ ಬೇಗೆಯಿಂದ ಬಳಲಿ ಬೇಸತ್ತರು. ಕೊನೆಗೆ ಆಡಮ್ ಮುಂದೆ ಸೈರಿಸಲಾರದೆ ಕೆಳಗೆ ಮಲಗಿಬಿಟ್ಟನು. "ಒಡೆಯ, ಆಹಾರವಿಲ್ಲದೆ ಸಾಯುತ್ತಿದ್ದೇನೆ. ಇನ್ನು ಮುಂದೆ ಹೋಗಲು ನನ್ನಿಂದಾಗದು" ಎಂದನು. ಅದೇ ತನ್ನ ಮರಣಶಯ್ಯೆಯಾಗುವುದೆಂದು ನೆನೆಸಿ ಅವನು ತನ್ನೊಡೆಯನಿಗೆ ಅಂತಿಮ ಪ್ರಣಾಮಗಳನ್ನು ಅರ್ಪಿಸಿದನು. ಆಗ, ಅವನನ್ನು ಈ ಅವಸ್ಥೆಯಲ್ಲಿ ನೋಡಿದ ಆರ್ಲೆಂಡೋ ತನ್ನಾವೃದ್ಧ ಸೇವಕನನ್ನು ತೋಳುಗಳಲ್ಲೆತ್ತಿಕೊಂಡು ತಂಪಾದ ಮರಗಳ ನೆರಳಿಗೆ ಕರೆದೊಯ್ದನು. ಆಡಮನಿಗೆ–"ಧೈರ್ಯ ತಂದುಕೋ, ಆಡಂ, ಸ್ವಲ್ಪ ಹೊತ್ತು ಬಳಲಿದ ನಿನ್ನ ಕೈಕಾಲುಗಳಿಗೆ ವಿಶ್ರಾಂತಿ ಕೊಡು, ಇನ್ನು ಸಾಯುವ ಮಾತನ್ನಾಡದಿರು" ಎಂದನು.

ನಂತರ ಆರ್ಲೆಂಡೋ ಆಹಾರವನ್ನು ಅರಸಲು ಹೋದನು. ಅಕಸ್ಮಾತ್ ಅವನು ಡ್ಯೂಕ್ ಆ ಕಾಡಿನ ಯಾವ ಭಾಗದಲ್ಲಿ ವಾಸಿಸುತ್ತಿದ್ದನೋ ಅಲ್ಲಿಗೇ ಬಂದು ಸೇರಿದನು. ಅಲ್ಲಿ ಡ್ಯೂಕನೂ ಅವನ ಸಂಗಡಿಗರೂ ಅದೇ ತಾನೇ ಭೋಜನಕ್ಕೆ ಕೂಡುವುದರಲ್ಲಿದ್ದರು. ರಾಜವಂಶದ ಡ್ಯೂಕ್ ಹುಲ್ಲಿನ ಮೇಲೆ ಕೆಲವುದೊಡ್ಡ ಮರಗಳ ನೆರಳನ್ನುಳಿದು ಬೇರಾವ ಛತ್ರಚಾಮರಗಳೂ ಇಲ್ಲದೆ ಕುಳಿತಿದ್ದನು.

ಹಸಿವಿನಿಂದ ಕಂಗೆಟ್ಟುಹೋಗಿದ್ದ ಆರ್ಲೆಂಡೋ ಬಲಪ್ರಯೋಗದಿಂದ ಅವರ ಆಹಾರವನ್ನು ಪಡೆದುಕೊಳ್ಳಲುದ್ದೇಶಿಸಿ ಕತ್ತಿಯನ್ನು ಒರೆಯಿಂದ ಸೆಳೆದನು. "ನಿಲ್ಲಿ, ಮುಂದೆ ತಿನ್ನದಿರಿ. ನಿಮ್ಮ ಆಹಾರವೆಲ್ಲ ನನಗೆ ಬೇಕು" ಎಂದನು. ಡ್ಯೂಕ್, ಆರ್ಲೆಂಡೋ ಕಷ್ಟಕ್ಕೊಳಗಾಗಿ ಹೀಗೆ ಉದ್ಧತನಂತೆ ವರ್ತಿಸುತ್ತಿರುವನೋ ಇಲ್ಲವೇ ಅವನು ಸಭ್ಯಾಚಾರಗಳನ್ನು ದ್ವೇಷಿಸುವ ಅಶಿಕ್ಷಿತನೋ ಎಂದು ಕೇಳಿದನು. ಆರ್ಲೆಂಡೋ ತಾನು ಹಸಿವಿನಿಂದ ಸಾಯುತ್ತಿರುವುದಾಗಿ ಉತ್ತರಕೊಟ್ಟನು. ಆಗ ಡ್ಯೂಕ್ ತಮ್ಮೊಂದಿಗೇ ಕುಳಿತು ಊಟಮಾಡಲು ಅವನಿಗೆ ಸ್ವಾಗತವಿರುವುದೆಂದನು. ಅವನ ಮೃದು ನುಡಿಗಳನ್ನು ಕೇಳಿ ಆರ್ಲೆಂಡೋ ಕತ್ತಿಯನ್ನು ಒರೆಗೆ ಸೇರಿಸಿದನು. ತಾನಷ್ಟು ಉದ್ಧಟತನದಿಂದ ಅವರ ಆಹಾರವನ್ನು ಬಯಸಿದ್ದಕ್ಕಾಗಿ ಅವನು ಅಪಮಾನಗೊಂಡು ಕೆಂಪೇರುತ್ತಾ—"ನೀವು ನನ್ನನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತೇನೆ ; ಇಲ್ಲಿನವರೆಲ್ಲಾ ಅನಾಗರಿಕ ವಸ್ತುಗಳೆಂದೇ ನಾನು ಭಾವಿಸಿದ್ದೆ. ಆದ್ದರಿಂದ ನಾನಾ ಬಗೆಯ ನಿಷ್ಠುರಾಧಿಕಾರದ ಭಾವವನ್ನು ತಳೆಯ ಬೇಕಾಯಿತು. ಆದರೆ, ನೀವಾರೇ ಆಗಿದ್ದರೂ, ಈ ಮರಳುಕಾಡಿನಲ್ಲಿ, ವಿಷಣ್ಣವಾದೀ ಮರಗಳಡಿಯ ನೆರಳಿನಲ್ಲಿ ಮೆಲ್ಲಡಿಯಿಡುತ್ತಿರುವ ಕಾಲದ ಪರಿವೆಯಿಲ್ಲದೆ ಕುಳಿತಿರುವ ನೀವು ಹಿಂದೆಂದಾದರೂ ಇದಕ್ಕಿಂತ ಒಳ್ಳೆಯ ದಿನಗಳನ್ನು ಕಂಡಿದ್ದಲ್ಲಿ, ಹಿಂದೆಂದಾದರೂ ದೇವಾಲಯಗಳಲ್ಲಿ ಬಾಜಿಸುವ ಗಂಟೆ ಕೂಗಿ ಕರೆಯುವೆಡೆ ನೀವಿದ್ದಲ್ಲಿ, ಯಾರಾದರೊಬ್ಬ ಸತ್ಪುರುಷನ ಮನೆಯ ಭೋಜನದಲ್ಲಿ ನೀವು ಭಾಗವಹಿಸಿದ್ದಲ್ಲಿ, ನಿಮ್ಮ ಕಣ್ಣುಗಳಿಂದ ಎಂದಾದರೊಮ್ಮೆ ಕಂಬನಿಯೊಂದನ್ನು ತೊಡೆದಿದ್ದಲ್ಲಿ, ಕನಿಕರಿಸುವುದು ಅಥವಾ ಕನಿಕರಿಸಲ್ಪಡುವುದೆಂದರೆ ಏನೆಂಬುದನ್ನು ನೀವರಿತಿದ್ದಲ್ಲಿ ಈಗ ನನ್ನೀ ಸೌಮ್ಯನುಡಿಗಳು ನಿಮ್ಮ ಮನವನ್ನು ಕರಗಿಸಲಿ. ನೀವೆನಗೆ ಉಪಕರಿಸುವಂತಾಗಲಿ " ಎಂದನು. ಡ್ಯೂಕ್—"ನಿಜ. ನೀನು ಹೇಳಿದಂತೆ ನಾವು ಒಳ್ಳೆಯ ದಿನಗಳನ್ನೂ ಕಂಡಿ

ದ್ದೇವೆ. ಈಗೇನೋ ನಾವೀ ಘೋರಾರಣ್ಯದಲ್ಲಿ ವಾಸಿಸುತ್ತಿದ್ದರೂ, ಹಿಂದೆ ನಾವು ಪಟ್ಟಣಗಳಲ್ಲೂ ನಗರಗಳಲ್ಲೂ ನಿವಾಸಿಗಳಾಗಿದ್ದವರು. ಅಲ್ಲಿ ನಾವು ಪವಿತ್ರ ಘಂಟಾನಾದದಿಂದ ಕರೆಯಲ್ಪಟ್ಟು ದೇವಾಲಯಗಳಿಗೆ ತೆರಳಿದ್ದೇವೆ; ಸತ್ಪುರುಷರ ಭೋಜನ ಕೂಟಗಳಲ್ಲಿ ಭಾಗವಹಿಸಿದ್ದೇವೆ; ಪವಿತ್ರ ಕನಿಕರ ಭಾವದಿಂದ ಉತ್ಪನ್ನವಾದ ಕಂಬನಿಯನ್ನು ಈ ನಮ್ಮ ಕಣ್ಣುಗಳಿಂದ ತೊಡೆದಿದ್ದೇವೆ. ಆದ್ದರಿಂದ ನೀನು ನಮ್ಮೊಂದಿಗೆ ಕುಳಿತು ನಿನಗೆ ತೃಪ್ತಿಯಾಗುವಷ್ಟು ಆಹಾರವನ್ನು ಸ್ವೀಕರಿಸು" ಎಂದನು. ಆರ್ಲ್ಲಂಡೋ "ನನ್ನೊಂದಿಗೆ ಮುದುಕನೊಬ್ಬನಿದ್ದಾನೆ. ಮುಪ್ಪು, ಹಸಿವು ಇವೆರಡೂ ದೌರ್ಬಲ್ಯಗಳಿಂದ ಪೀಡಿತನಾಗಿದ್ದರೂ ಸಹ ಅಕಳಂಕ ಪ್ರೇಮದಿಂದ ನನ್ನೊಂದಿಗೆ ಬಂದು ಅದೆಷ್ಟೋ ದೂರ ನಡೆದು ಆತ ಬಳಲಿದ್ದಾನೆ. ಅವನು ಸಂತೃಪ್ತನಾಗುವವರೆಗೂ ನಾನೇನನ್ನೂ ಮುಟ್ಟಲಾರೆ" ಎಂದನು. ಡ್ಯೂಕ್—"ಹೋಗು, ಅವನಲ್ಲಿಗೆ ಹೋಗಿ ಅವನನ್ನೂ ಕರೆದು ತಾ" ಎಂದನು. ಆರ್ಲ್ಲಂಡೋ ಆಹಾರವನ್ನೀಯಲು ಮರಿಯನ್ನರಸಿ ಹೋಗುವ ಹರಿಣಿಯಂತೆ ಅಲ್ಲಿಂದ ತೆರಳಿದನು. ಸ್ವಲ್ಪಹೊತ್ತಿನಲ್ಲೇ ಆಡಮ್‌ನನ್ನು ತನ್ನ ತೋಳುಗಳಲ್ಲೆತ್ತಿಕೊಂಡು ಬಂದನು. ಡ್ಯೂಕ್—"ನಿನ್ನೀ ಪೂಜ್ಯವಾದ ಹೊರೆಯನ್ನು ಕೆಳಗಿಳಿಸು; ನಿಮ್ಮಿಬ್ಬರಿಗೂ ಸುಸ್ವಾಗತ" ಎಂದನು. ನಂತರ ಅವರೆಲ್ಲ ಸೇರಿ ಆ ವೃದ್ಧನನ್ನು, ಆಹಾರ ಕೊಟ್ಟು ತಣಿಸಿ ಸಂತೋಷಪಡಿಸಿದರು. ಅವನು ಚೇತರಿಸಿಕೊಂಡು ಪುನಃ ಮೊದಲಿನ ಬಲ-ಆರೋಗ್ಯಗಳನ್ನು ಪಡೆದನು.

ಡ್ಯೂಕ್ ಆರ್ಲ್ಲಂಡೊ ಯಾರೆಂದು ವಿಚಾರಿಸಿದನು. ಅವನು ತನ್ನ ಹಳೆಯ ಗೆಳೆಯ ಸರ್ ರೋಲ್ಯಾಂಡ್ ಡಿ ಬಾಯ್ಸನ ಮಗನೆಂದರಿತಾಗ ಸಂತೋಷದಿಂದ ಅವನನ್ನು ತನ್ನ ಆಶ್ರಯಕ್ಕೇ ಒಳಪಡಿಸಿಕೊಂಡನು. ಹೀಗೆ ಆರ್ಲ್ಲಂಡೋ ಮತ್ತು ಅವನ ವೃದ್ಧ ಸೇವಕ ಡ್ಯೂಕನೊಂದಿಗೇ ಕಾಡಿನಲ್ಲಿ ಇರತೊಡಗಿದರು.

ಗ್ಯಾನಿಮೆಡ್ ಮತ್ತು ಆಲಿಯೆನಾ ಈ ಕಾಡಿಗೆ ಬಂದು, ಹಿಂದೆ ತಿಳಿಸಿದಂತೆ ಕುರುಬನ ಕುಟೀರವನ್ನು ಕೊಂಡ ಕೆಲವೇ ದಿನಗಳಲ್ಲಿಯೇ ಆರ್ಲ್ಲಂಡೋ ಅದೇ ಕಾಡಿಗೆ ಬಂದು ಸೇರಿದ್ದನು.

ಗ್ಯಾಲಿಮೆಡ್ ಮತ್ತು ಆಲಿಯೆನಾ ಹಲವು ಮರಗಳ ಮೇಲೆ ರೋಸಲಿಂಡಳ ಹೆಸರು ಕೆತ್ತಲಾಗಿದ್ದುದನ್ನೂ, ರೋಸಲಿಂಡಳನ್ನೇ ಉದ್ದೇಶಿಸಿ ಬರೆದಿದ್ದ ಪ್ರೇಮಗೀತೆಗಳನ್ನು ಅವುಗಳಿಗೆ ಬಿಗಿದು ಸೇರಿಸಲಾಗಿದ್ದುದನ್ನೂ ಕಂಡು ಬಹು

ವಿಸ್ಮಯಗೊಂಡರು. ಇದು ಹೇಗೆ ಸಂಭವಿಸಿದ್ದೀತೆಂದು ಅವರು ಆಶ್ಚರ್ಯ ಪಡುತ್ತಿರುವಂತೆಯೇ ಅವರಿಗೆ ಆರ್ಲೆಂಡೋನ ಭೆಟ್ಟಿಯಾಯಿತು. ರೋಸ ಲಿಂಡ್ ಕೊಟ್ಟಿದ್ದ ಸರವನ್ನೂ ಸಹ ಅವರು ಅವನ ಕೊರಳಿನಲ್ಲಿ ಕಂಡರು.

ಯಾರು ತನ್ನ ಉದಾತ್ತ ಅನುಗ್ರಹ, ಕೃಪಾಕಟಾಕ್ಷಗಳಿಂದ ಅವನ ಹೃದಯವನ್ನು ಗೆದ್ದು, ಅದರಿಂದಾಗಿ ಅವನವಳ ಹೆಸರನ್ನು ಮರಗಳಮೇಲೆ ಕೊರೆದು, ಅವಳ ಸೌಂದರ್ಯವನ್ನು ಸ್ತುತಿಸುವ ಗೀತೆಗಳನ್ನು ಬರೆಯು ವಂತೆ ಮಾಡಿದ್ದಳೋ ಅದೇ ಸುಂದರ ರಾಜಪುತ್ರಿಯೇ ಗ್ಯಾನಿಮೆಡ್‌ನೆಂಬುದರ ಅರಿವು ಆರ್ಲೆಂಡೋಗೆ ಲೇಶಮಾತ್ರವೂ ಇರಲಿಲ್ಲ. ಆದರೀ ಚೆಲುವನಾದ ಕುರುಬಯುವಕನ ಆಕರ್ಷಕ ನಡೆನುಡಿಗಳನ್ನು ಮೆಚ್ಚಿ ಆರ್ಲೆಂಡೋ ಅವ ನೊಂದಿಗೆ ಸಂಭಾಷಿಸಲು ತೊಡಗಿದನು. ಅಲ್ಲದೆ ಗ್ಯಾನಿಮೆಡ್‌ಗೂ ತನ್ನ ಪ್ರೇಮದ ರೋಸಲಿಂಡಳಿಗೂ ಯಾವುದೋ ಒಂದು ಹೋಲಿಕೆ ಇರುವಂತೆಯೂ ಅವನಿಗೆ ತೋರಿತು! ಆದರಾಗ ಗ್ಯಾನಿಮೆಡ್, ಬಾಲ್ಯ ಮತ್ತು ಪ್ರೌಢಾವಸ್ಥೆ ಗಳ ನಡುವೆ ಯುವಕರಲ್ಲಿ ಸಾಧಾರಣವಾಗಿ ಕಂಡುಬರುವಂತಹ ದುಡುಕಿನ ಸ್ವಭಾವವನ್ನು ತಳೆದು ವರ್ತಿಸುತ್ತಿದ್ದನು. ಇದರಿಂದಾಗಿ ಅವಳಲ್ಲಿ ಕುಲೀನೆ ರೋಸಲಿಂಡಳ ಘನತೆ–ಗಾಂಭೀರ್ಯಗಳ ಒಂದಂಶವೂ ಇಲ್ಲವೆಂದೂ ಆರ್ಲೆಂಡೋ ಭಾವಿಸುವಂತಾಯಿತು. ಗ್ಯಾನಿಮೆಡ್ ಅದೊಂದು ಬಗೆಯ ಕುಹಕ, ಸರಸಗಳಿಂದ ಆರ್ಲೆಂಡೋನೊಂದಿಗೆ—"ಯಾವನೋ ಪ್ರೇಮಿಯೊಬ್ಬ ಈ ಕಾಡಿನಲ್ಲಿ ಎಡಬಿಡದೆ ಸುಳಿದಾಡುತ್ತಿದ್ದು, ನಮ್ಮ ಎಳೆಯ ಮರಗಳ ಮೇಲೆಲ್ಲಾ 'ರೋಸಲಿಂಡ್' ಎಂದು ಕೆತ್ತಿ ಅವನ್ನು ಹಾಳುಮಾಡುತ್ತಿದ್ದಾನೆ. ಅಲ್ಲದೆ, ಇದೇ ರೋಸಲಿಂಡಳನ್ನು ಸ್ತುತಿಸಿ ಬರೆದ ಕವಿತೆಗಳನ್ನು ಬೇಲಿಯ ಮೇಲೆ ತೂಗುಹಾಕುತ್ತಾನೆ. ಅವಳನ್ನುದ್ದೇಶಿಸಿದ ಶೋಕಗೀತೆಗಳನ್ನು ಮುಳ್ಳುಗಿಡಗಳಮೇಲೆ ನೇತುಹಾಕುತ್ತಾನೆ. ಈ ಪ್ರೇಮಿಯೇನಾದರೂ ನನಗೆ ಭೆಟ್ಟಿಯಾಗಿದ್ದಲ್ಲಿ, ಅವನಾ ಪ್ರೇಮವ್ಯಾಧಿಯನ್ನು ಗುಣಪಡಿಸುವಂತಹ ಉತ್ತಮ ಸಲಹೆಯೊಂದನ್ನು ನಾನು ಕೊಡುತ್ತಿದ್ದೆ" ಎಂದನು.

ಆರ್ಲೆಂಡೋ ತಾನೇ ಅವನು ಹೇಳಿದ ಆ ಉತ್ಕಂಠ ಪ್ರಣಯಿಯೆಂಬು ದನ್ನು ಒಪ್ಪಿಕೊಂಡನು. ಗ್ಯಾನಿಮೆಡ್ ದಯಮಾಡಿ ತನ್ನ ಸಲಹೆಯನ್ನು ಕೊಡಬೇಕೆಂದು ಕೋರಿದನು. ಆಗ ಗ್ಯಾನಿಮೆಡ್, ಪ್ರತಿದಿನವೂ ಆರ್ಲೆಂಡೋ ತಾನೂ ಮತ್ತು ತನ್ನ ತಂಗಿಯೂ ಇದ್ದ ಕುಟೀರಕ್ಕೆ ಬರಬೇಕೆಂದೂ, ಅಲ್ಲಿ ತಾನು ಅವನ ರೋಸಲಿಂಡಳಾಗಿರುವಂತೆ ನಟಿಸುವುದಾಗಿಯೂ

ಸೂಚಿಸಿ, ಆರ್ಲ್ಲಂಡೋ ರೋಸಲಿಂಡಳನ್ನುದ್ದೇಶಿಸಿ ನುಡಿಯಬೇಕೆಂದಿದ್ದ ಪ್ರೇಮ ವಾಕ್ಯಗಳನ್ನೆಲ್ಲಾ ತನ್ನ ಬಳಿಯೇ ಹೇಳಬೇಕೆಂದೂ, ಆಗ ತಾನು ಸ್ತ್ರೀಯರು ತಮ್ಮ ಪ್ರೇಮಿಗಳೆದುರು ತೋರ್ಪಡಿಸಿಕೊಳ್ಳುವ ಅತಿಕಲ್ಪಿತ ನಡೆವಳಿಕೆಗಳನ್ನೆಲ್ಲಾ ಅನುಕರಿಸುವುದಾಗಿಯೂ ಆ ಮೂಲಕ ಆರ್ಲ್ಲಂಡೊ ತನ್ನ ಪ್ರೇಮದ ಬಗ್ಗೆ ನಾಚಿಕೊಳ್ಳುವಂತೆ ಮಾಡುವುದಾಗಿಯೂ ಹೇಳಿದನು. ಗ್ಯಾನಿಮೆಡ್‌ನ ಈ ಚಿಕಿತ್ಸೆಯಲ್ಲಿ ಆರ್ಲ್ಲಂಡೋಗೆ ನಂಬಿಕೆ ಹುಟ್ಟದಿದ್ದರೂ ಸಹ ಅವನು ಗ್ಯಾನಿಮೆಡ್‌ನ ಕುಟೀರಕ್ಕೆ ಬಂದು ಈ ವಿನೋದದ ಪ್ರಣಯಪ್ರಸಂಗವನ್ನು ನಡೆಸಲು ಒಪ್ಪಿಕೊಂಡನು. ಪ್ರತಿದಿನವೂ ಇವರಿಬ್ಬರಲ್ಲಿಗೆ ಬಂದು ಗ್ಯಾನಿಮೆಡ್‌ನನ್ನೆ ತನ್ನ ರೋಸಲಿಂಡಳೆಂದು ಕರೆಯತೊಡಗಿದನು. ಪ್ರತಿದಿನ, ತರುಣರು ತಮ್ಮ ನಲ್ಲೆಯರನ್ನುದ್ದೇಶಿಸಿ ಹೇಳುವಂತಹ ಸ್ತುತಿವಚನಗಳನ್ನು ಮಧುರವಾಕ್ಯಗಳನ್ನೂ ಅವನನ್ನೇ ಉದ್ದೇಶಿಸಿ ಅಲ್ಲಿಯೇ ನುಡಿದನು. ಆದರೇನೋ ಗ್ಯಾನಿಮೆಡ್, ರೋಸಲಿಂಡಳ ಮೇಲಿನ ಅವನ ಪ್ರೇಮವನ್ನು ಯಾವ ಬಗೆಯಲ್ಲೂ ಗುಣಪಡಿಸಿದಂತೆ ತೋರಲಿಲ್ಲ!

ಗ್ಯಾಲಿಮೆಡ್‌ನೇ ತನ್ನ ರೋಸಲಿಂಡಳೆಂಬುದನ್ನು ಅರಿಯದ ಅರ್ಲ್ಲಂಡೋ ಇವೆಲ್ಲವನ್ನೂ ವಿನೋದವೆಂದೇ ಪರಿಗಣಿಸಿದ್ದನು. ಆದರೂ, ತನ್ನೆಲ್ಲ ಹೃದಯ ಸಂದೇಶಗಳನ್ನು ನಿವೇದಿಸಲು ಅವನಿಗೆ ದೊರೆತ ಈ ಅವಕಾಶದಿಂದ ಗ್ಯಾನಿಮೆಡ್‌ನ ಬಗೆಗೆ ಅದೆಷ್ಟು ಸುಖವಾಗುತ್ತಿತ್ತೋ ಅಷ್ಟೇ ತೃಪ್ತಿ ಆರ್ಲ್ಲಂಡೋಗೂ ಆಗುತ್ತಿತ್ತು. ಗ್ಯಾನಿಮೆಡ್‌ಗಾದರೋ ಈ ಪ್ರೇಮಭಾಷಣಗಳೆಲ್ಲಾ ಸರಿಯಾದ ವ್ಯಕ್ತಿಗೇ ಸಂಬೋಧಿತವಾಗುತ್ತಿರುವುವೆಂಬ ಗುಪ್ತವಿನೋದವನ್ನೂ ಸವಿಯಲು ಅವಕಾಶವಾಗಿತ್ತು.

ಹೀಗೆ ಈ ತರುಣ ತರುಣಿಯರ ಪಾಲಿಗೆ ಅದೆಷ್ಟೋ ದಿನಗಳು ಸುಖದಿಂದ ಕಳೆದುಹೋದವು. ಇಂಗಿತಜ್ಞೆಯಾಗಿದ್ದ ಆಲಿಯೆನಾ ಗ್ಯಾನಿಮೆಡ್ ಸುಖಿಯಾಗಿರುವನೆಂಬುದನ್ನರಿತು, ಅವನನ್ನು ಅವನಷ್ಟಕ್ಕೇ ಬಿಟ್ಟುಬಿಟ್ಟಿದ್ದಳು. ಈ ವಿನೋದದ ಪ್ರಣಯ ಪ್ರಸಂಗ ಆವಳಿಗೂ ಮನರಂಜನೆಯನ್ನೊದಗಿಸಿತ್ತು. ಹೀಗಾಗಿ ಆರ್ಲ್ಲಂಡೋನಿಂದಲೇ ಅವರಿಗೆ ಡ್ಯೂಕನ ನಿವಾಸಸ್ಥಾನ ತಿಳಿದುಬಂದಿದ್ದರೂ ಸಹ, ರೋಸಲಿಂಡಳಿನ್ನೂ ತಂದೆಯಬಳಿ ಹೋಗಿ ತನ್ನ ಪರಿಚಯುವನ್ನು ಬಹಿರಂಗಪಡಿಸಿರದಿದ್ದುದನ್ನು ಗ್ಯಾನಿಮೆಡ್‌ನ ಗಮನಕ್ಕೆ ತರಲು ಆಲಿಯೆನಾ ಯಾವ ಉತ್ಸಾಹವನ್ನೂ ತೋರಿರಲಿಲ್ಲ. ಒಮ್ಮೆ ಗ್ಯಾನಿಮೆಡ್ ಡ್ಯೂಕನನ್ನು ಸಂಧಿಸಿ ಮಾತನಾಡಿದ್ದನು. ಆಗ ಡ್ಯೂಕ್

ಅವನ ಜನ್ಮವೃತ್ತಾಂತವನ್ನು ವಿಚಾರಿಸಿದ್ದನು. ಗ್ಯಾನಿಮೆಡ್ ತಾನೂ ಡ್ಯೂಕನಷ್ಟೇ ಗಣ್ಯ ಮನೆತನದವನೆಂದು ಉತ್ತರಿಸಿದ್ದಾಗ ಡ್ಯೂಕ್, ಈ ಕುರುಬ ಯುವಕ ರಾಜವಂಶದವನೆಂಬುದರ ಅರಿವಿಲ್ಲದೆ, ನಸುನಕ್ಕು ಸುಮ್ಮನಾಗಿದ್ದನು. ಡ್ಯೂಕ್ ಆರೋಗ್ಯದಲ್ಲಿದ್ದು ಸುಖಿಯಾಗಿರುವಂತೆ ತೋರಿಬಂದಿದ್ದರಿಂದ ಗ್ಯಾನಿಮೆಡ್ ತೃಪ್ತನಾಗಿ, ಉಳಿದೆಲ್ಲ ವಿಚಾರ ವಿನಿಮಯವನ್ನು ಮುಂದೆ ಹಾಕಿ ನಿಶ್ಚಿಂತನಾಗಿದ್ದು ಬಿಟ್ಟಿದ್ದನು.

ಒಂದು ಬೆಳಿಗ್ಗೆ ಆರ್ಲ್ಲಿಂಡೋ ಗ್ಯಾನಿಮೆಡ್‌ನನ್ನು ನೋಡಲು ಹೋಗುತ್ತಿದ್ದಾಗ, ದಾರಿಯಲ್ಲಿ ಯಾವನೋ ಒಬ್ಬನು ನೆಲದ ಮೇಲೆ ಮಲಗಿದ್ದುದನ್ನು ಕಂಡನು. ಮಲಗಿದ್ದವನ ಕುತ್ತಿಗೆಗೆ ದೊಡ್ಡದೊಂದು ಹಸಿರುಹಾವು ಸುತ್ತಿಕೊಂಡಿತ್ತು. ಆರ್ಲ್ಲಿಂಡೋ ಹತ್ತಿರ ಬಂದುದನ್ನು ಕಂಡು ಹಾವು ಮೆಲ್ಲನೆ ನುಸುಳಿ ಪೊದೆಗಳೆಡೆಗೆ ಸರಿದುಹೋಯಿತು. ಆರ್ಲ್ಲಿಂಡೋ ಇನ್ನೂ ಸನಿಯಕ್ಕೆ ಹೋದಾಗ, ಅಲ್ಲೊಂದು ಹೆಣ್ಣುಸಿಂಹವು ನೆಲದಮೇಲೆ ತಲೆಯಿಟ್ಟು ಬೆಕ್ಕಿನಂತೆ ಹೊಂಚುಹಾಕುತ್ತಿದ್ದುದು ಗೋಚರವಾಯಿತು. (ಸಿಂಹಗಳು ಸತ್ತಿರುವ ಅಥವಾ ನಿದ್ರಿಸುತ್ತಿರುವ ಯಾವ ಜೀವಿಯನ್ನೂ ತಿನ್ನುವುದಿಲ್ಲವೆಂದು ಹೇಳುತ್ತಾರೆ.) ಆರ್ಲ್ಲಿಂಡೋ ದೈವನಿಯತವಾಗಿಯೇ ಆ ಮನುಷ್ಯನನ್ನು ಸರ್ಪ, ಸಿಂಹಗಳಿಂದ ರಕ್ಷಿಸಲು ಬಂದಿದ್ದನೆನ್ನಬೇಕು. ಏಕೆಂದರೆ, ಆರ್ಲ್ಲಿಂಡೋ ಮಲಗಿದ್ದವನ ಮುಖವನ್ನು ನೋಡಿದಾಗ, ಆತನು ಬೇರಾರೂ ಆಗಿರದೆ ತನ್ನನ್ನಷ್ಟು ಬಗೆಯ ತೊಂದರೆಗಳಿಗೀಡು ಮಾಡಿದ್ದ, ತನ್ನನ್ನು ಬೆಂಕಿಯಿಂದ ವಿನಾಶಗೊಳಿಸಲು ಯತ್ನಿಸಿದ್ದ ಅಣ್ಣ ಆಲಿವರನೇ ಎಂಬುದು ದೃಢಪಟ್ಟಿತು. ಒಂದು ಕ್ಷಣ, ಆರ್ಲ್ಲಿಂಡೋಗೆ ಅವನನ್ನು ಹಸಿದ ಸಿಂಹಿಣಿಗೆ ತುತ್ತಾಗಲು ಅಲ್ಲಿಯೇ ಬಿಟ್ಟು ಹೊರಡಲೇ ಎನ್ನಿಸಿತು. ಆದರೆ ಅವನ ಭ್ರಾತೃಪ್ರೇಮವೂ ಅಲ್ಲದೆ ಅವನಿಗೆ ಸ್ವಭಾವಸಹಜವಾಗಿದ್ದ ಮಾರ್ದವಭಾವವೂ ಅಡ್ಡಬಂದು ಅವನ ಅಣ್ಣನ ಮೇಲಿದ್ದ ಕ್ರೋಧವನ್ನು ಕರಗಿಸಿಬಿಟ್ಟವು. ಅವನು ಆ ಕೂಡಲೇ ಒರೆಯಿಂದ ಕತ್ತಿಯನ್ನೆಳೆದು, ಸಿಂಹದ ಮೇಲೆ ಬಿದ್ದು ಅದನ್ನು ಕೊಂದು ಹಾಕಿದನು. ಹೀಗೆ ಅವನು ವಿಷಸರ್ಪ ಮತ್ತು ಕ್ರುದ್ಧಸಿಂಹಗಳೆರಡರಿಂದಲೂ ಅಣ್ಣನ ಪ್ರಾಣವನ್ನು ರಕ್ಷಿಸಿದನು. ಆದರೆ ಆರ್ಲ್ಲಿಂಡೋ ಸಿಂಹದೊಡನೆ ಕಾದಾಡಿ ಗೆಲ್ಲುವುದರೊಳಗೇ ಅದು ತನ್ನ ಚೂಪಾದ ಉಗುರುಗಳಿಂದ ಅವನ ಒಂದುತೋಳನ್ನು ಹರಿದುಹಾಕಿದ್ದಿತು.

ಆರ್ಲ್ಲಿಂಡೋ ಸಿಂಹದೊಡನೆ ಹೋರಾಡುತ್ತಿದ್ದಾಗ ಆಲಿವರನಿಗೆ ಎಚ್ಚರವಾಯಿತು. ತಾನಷ್ಟೊಂದು ಹಿಂಸೆಗೆ ಯಾರನ್ನು ಗುರಿಪಡಿಸಿದ್ದನೋ ಅದೇ ತಮ್ಮನೇ, ಜೀವದ ಹಂಗನ್ನು ತೊರೆದು ತನ್ನನ್ನು ಕ್ರೂರ ಮೃಗದ ಬಾಯಿಯಿಂದ ಉಳಿಸುತ್ತಿದ್ದುದನ್ನು ಕಂಡಾಗ ಅಪಮಾನ ಪಶ್ಚಾತ್ತಾಪಗಳೆರಡೂ ಆಲಿವರನನ್ನು ಒಮ್ಮೆಗೇ ಕಾಡಿದವು. ತನ್ನ ಕ್ರೂರಕೃತ್ಯಗಳಿಗಾಗಿ ಬಹು ಪರಿತಾಪಪಡುತ್ತಾ ಅವನು ಕಣ್ಣೀರು ಸುರಿಸುತ್ತಲೇ ತಮ್ಮನಲ್ಲಿ ಕ್ಷಮಾಯಾಚನೆ ಮಾಡಿದನು. ಆರ್ಲ್ಲಿಂಡೋ ಅವನು ಪಶ್ಚಾತ್ತಾಪದಿಂದ ಶುದ್ಧನಾದುದಕ್ಕಾಗಿ ಬಹು ಸಂತೋಷಪಟ್ಟು ಆ ಕೂಡಲೇ ಅವನನ್ನು ಮನ್ನಿಸಿಬಿಟ್ಟನು. ಅವರಿಬ್ಬರೂ ಪ್ರೀತಿಯಿಂದ ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಆಲಿವರ್ ತಮ್ಮನನ್ನು ನಾಶಗೊಳಿಸುವ ಉದ್ದಿಶ್ಯದಿಂದಲೇ ಕಾಡಿಗೆ ಬಂದಿದ್ದನು. ಆದರೀ ಕ್ಷಣದಿಂದ ಅವನು ಆರ್ಲ್ಲಿಂಡೋನನ್ನು ನಿಷ್ಕಳಂಕವಾದ ಸೋದರಪ್ರೇಮದಿಂದಲೇ ಪ್ರೀತಿಸತೊಡಗಿದನು.

ಆರ್ಲ್ಲಿಂಡೋನ ತೋಳಗಾಯದಿಂದ ಒಹುವಾಗಿ ರಕ್ತ ಸುರಿದುದರಿಂದಾಗಿ, ಅವನು ಗ್ಯಾನಿಮೆಡ್‌ನನ್ನು ನೋಡುವುದಕ್ಕೆ ಹೋಗಲು ಅಶಕ್ತನಾಗಿದ್ದನು. ಆದ್ದರಿಂದ ತನ್ನಣ್ಣನೇ ತನಗಾಗಿ, ವಿನೋದದಿಂದ ತಾನು ತನ್ನ ರೋಸಲಿಂಡಳೆಂಬುದಾಗಿ ಸಂಬೋಧಿಸುವ ಗ್ಯಾನಿಮೆಡ್ ಬಳಿ ತೆರಳಿ ತನಗಾಗಿದ್ದ ಅಪಘಾತವನ್ನು ತಿಳಿಸಬೇಕೆಂದು ಆರ್ಲ್ಲಿಂಡೋ ಕೋರಿದನು.

ಆಲಿವರ್ ಒಪ್ಪಿ, ಅಲ್ಲಿಗೆ ತೆರಳಿ ಗ್ಯಾನಿಮೆಡ್ ಮತ್ತು ಆಲಿಯೆನಾರಿಗೆ ಆರ್ಲ್ಲಿಂಡೋ ತನ್ನ ಪ್ರಾಣವನ್ನು ಹೇಗೆ ಉಳಿಸಿದನೆಂಬುದನ್ನು ತಿಳಿಸಿದನು. ಆರ್ಲ್ಲಿಂಡೋನ ಧೈರ್ಯಶೌರ್ಯ, ದೈವನಿಯತವಾಗಿ ಘಟಿಸಿದ ತನ್ನ ಕಂಟಕ ನಿವಾರಣೆ ಇವುಗಳ ಕತೆಯನ್ನು ಹೇಳಿ ಮುಗಿಸುವ ಮುನ್ನ ಅವನು, ಇದುವರೆಗೂ ಆರ್ಲ್ಲಿಂಡೋನನ್ನು ಹಿಂಸಿಸಿದ್ದ ಅಣ್ಣನೇ ತಾನೆಂಬುದನ್ನೂ ತಿಳಿಯಪಡಿಸಿದನು. ಕೊನೆಗೆ ತಮ್ಮಿಬ್ಬರ ಮನಸ್ತಾಪ ದೂರವಾದುದನ್ನೂ ಅವರಿಗೆ ತಿಳಿಸಿದನು.

ಆಲಿವರ್ ತನ್ನ ಅಪರಾಧದ ಬಗ್ಗೆ ವ್ಯಕ್ತಪಡಿಸಿದ ಅನಿಂದಿತ ವಿಷಾದಭಾವ ಆಲಿಯೆನಾಳ ದಯಾರ್ದ್ರ ಹೃದಯದ ಮೇಲೆ ಬಹು ಗಂಭೀರ ಪರಿಣಾಮವನ್ನು ಬೀರಿ ಅದರ ಸಜೀವ ಚಿತ್ರವನ್ನೇ ಮೂಡಿಸಿತು. ಅವಳಾಕ್ಷಣದಲ್ಲಿಯೇ ಅವನಲ್ಲಿ ಅನುರಕ್ತಳಾದಳು. ಇತ್ತ ಆಲಿವರ್ ತಾನೆಷ್ಟು ಪರಿತಾಪ ಪಟ್ಟುದಾಗಿ ಹೇಳಿಕೊಂಡನೋ ಅಷ್ಟೇ ಕನಿಕರವನ್ನು ಅವಳು

ತನ್ನಲ್ಲಿ ತೋರಿಸಿದುದನ್ನು ಕಂಡಾಗ, ತಾನೂ ಆ ಕೂಡಲೇ ಅವಳಲ್ಲಿ ಅನುರಕ್ತನಾದನು. ಹೀಗೆ ಆಲಿಯೆನಾ ಮತ್ತು ಆಲಿವರರ ಹೃದಯಗಳಲ್ಲಿ ಮೆಲ್ಲನೆ ನುಸುಳುತ್ತಿದ್ದ ಮನ್ಮಥನು ಗ್ಯಾನಿಮೆಡ್‌ನನ್ನೂ ಸುಮ್ಮನೆ ಬಿಟ್ಟಿರಲಿಲ್ಲ. ಆರ್ಲೆಂಡೋಗೊದಗಿದ್ದ ಅಪಾಯಸ್ಥಿತಿಯನ್ನೂ, ಅವನು ಸಿಂಹದಿಂದ ಗಾಯಗೊಂಡಿದ್ದನ್ನೂ ಕೇಳಿ ಗ್ಯಾನಿಮೆಡ್ ಮೂರ್ಛೆಹೋಗಿದ್ದನು. ಚೇತರಿಸಿಕೊಂಡೆದ್ದ ಮೇಲೆ ಅವನು, ಕಲ್ಪನೆಯ ರೋಸಲಿಂಡಳ ಪಾತ್ರದಲ್ಲಿ ತಾನೀ ಮೂರ್ಛಾವಸ್ಥೆಯನ್ನು ಅಭಿನಯಿಸಿದುದಾಗಿ ಸೋಗು ಹಾಕಿದನು. ಅಲ್ಲದೆ ತಾನೆಷ್ಟು ಚೆನ್ನಾಗಿ ಅದನ್ನಭಿನಯಿಸಿದನೆಂಬುದನ್ನು ಆರ್ಲೆಂಡೋಗೆ ತಿಳಿಸಬೇಕೆಂದೂ ಆಲಿವರನನ್ನು ಕೋರಿದನು. ಆದರೆ ಬಿಳುಪೇರಿಹೋಗಿದ್ದ ಅವನ ಮುಖಭಾವದಿಂದ, ಆಲಿವರ್, ಅವನು ನಿಜವಾಗಿಯೂ ಮೂರ್ಛೆಹೋಗಿದ್ದನೆಂದರಿತನು. ಈ ಯುವಕನ ದೌರ್ಬಲ್ಯಕ್ಕೆ ಅಚ್ಚರಿಪಡುತ್ತಾ ಅವನು— "ಒಳ್ಳೆಯದು, ನೀನು ನಿಜವಾಗಿಯೂ ಅಭಿನಯಿಸಿದ್ದೇ ಸತ್ಯವಾದರೆ, ಈಗ ಧೈರ್ಯ ತಂದುಕೊಂಡು ಪುರುಷನೆಂಬಂತೆ ಅಭಿನಯಿಸು" ಎಂದನು. ಗ್ಯಾನಿಮೆಡ್ ಆಗ "ಹೌದು, ಹಾಗೆಯೇ ಮಾಡುತ್ತಿದ್ದೇನೆ; ಆದರೆ ನ್ಯಾಯವಾಗಿ ನಾನು ಹೆಂಗಸಾಗಬೇಕಾಗಿತ್ತು" ಎಂದು ಹೇಳಿದುದು ಯಥಾರ್ಥವೇ ಆಗಿತ್ತು.

ಆಲಿವರ್ ಈ ಭೇಟಿಯನ್ನು ಸುದೀರ್ಘಗೊಳಿಸಿ, ಕೊನೆಗೊಮ್ಮೆ ತಮ್ಮನ ಬಳಿಗೆ ಹಿಂದಿರುಗಿದಾಗ, ಅವನು ಹೇಳಬೇಕಿದ್ದುದು ಸಾಕಷ್ಟಿತ್ತು. ಆರ್ಲೆಂಡೋ ಗಾಯಗೊಂಡುದನ್ನು ಕೇಳಿ ಗ್ಯಾನಿಮೆಡ್ ಮೂರ್ಛಿತನಾದುದರ ವರ್ಣನೆಯೊಂದಿಗೆ, ತಾನು ಚೆಲುವೆಯಾದಾ ಕುರುಬರ ಆಲಿಯೆನಾಳಲ್ಲಿ ಅನುರಕ್ತನಾಗಿರುವುದನ್ನೂ ಆಲಿವರ್ ತಿಳಿಸಿದನು. ಅಲ್ಲದೆ ಅವಳೂ ಆ ಪ್ರಥಮ ಸಂದರ್ಶನದಲ್ಲೇ ತನ್ನ ಪ್ರೇಮಭಿಕ್ಷೆಗೆ ಕಿವಿಗೊಟ್ಟಿರುವಳೆಂದೂ ತಿಳಿಸಿದನು. ತಾನವಳನ್ನು ಶೀಘ್ರದಲ್ಲಿಯೇ ವಿವಾಹವಾಗುವುದು ನಿಷ್ಕರ್ಷಿತವಾದಂತೆಯೇ ಎಂದನು. ಅವಳ ಮೇಲಿನ ಅಮಿತ ಪ್ರೇಮದಿಂದಾಗಿ ಮುಂದೆ ತಾನಲ್ಲಿಯೇ ಕುರುಬನಂತೆ ಜೀವಿಸಿದ್ದು, ತನ್ನ ಆಸ್ತಿ-ಮನೆಗಳನ್ನು ಆರ್ಲೆಂಡೋ ಪಾಲಿಗೇ ಕೊಡುವುದಾಗಿ ಹೇಳಿದನು.

'ಒಪ್ಪಿದೆ' ಎಂದನು ಆರ್ಲೆಂಡೋ—"ನಾಳೆ ನಿನ್ನ ವಿವಾಹ ಜರುಗಲಿ; ನಾನು ಡ್ಯೂಕ್ ಮತ್ತು ಆತನ ಮಿತ್ರರನ್ನು ಆಮಂತ್ರಿಸುತ್ತೇನೆ. ಈಗಲೇ ಹೋಗಿ ನಿನ್ನ ಪ್ರೇಯಸಿಯನ್ನು ಇದಕ್ಕೊಪ್ಪಿಸು. ಈಗವಳು ಏಕಾಂಗಿ

ಯಾಗಿರಬೇಕು–ಇದೋ ನೋಡು, ಅವಳಣ್ಣ ಇತ್ತಲೇ ಬರುತ್ತಿದ್ದಾನೆ" ಎಂದನು. ಆಲಿವರ್ ಅಂತೆಯೇ ಆಲಿಯೆನಾಳ ಬಳಿಗೆ ತೆರಳಿದನು. ಆರ್ಲೆಂಡೋ ಹೇಳಿದಂತೆ ಅವನೆಡೆಗೇ ಸಮೀಪಿಸಿದ ಗ್ಯಾನಿಮೆಡ್ ತನ್ನ ಗಾಯ ಗೊಂಡ ಮಿತ್ರನನ್ನು ವಿಚಾರಿಸಿಕೊಳ್ಳಲು ಬಂದನು.

ಆರ್ಲೆಂಡೋ ಮತ್ತು ಗ್ಯಾನಿಮೆಡ್ ಆಗ ಆಲಿವರ್–ಆಲಿಯೆನಾರ ನಡುವೆ ಇಷ್ಟು ತ್ವರಿತವಾಗಿ ರೂಪುಗೊಂಡ ಅನುರಾಗದ ವಿಷಯವಾಗಿ ಮಾತ ನಾಡ ತೊಡಗಿದರು. ಆಗ ಆರ್ಲೆಂಡೋ, ಮರುದಿನವೇ ವಿವಾಹವಾಗುವುದಕ್ಕೆ ಒಡಂಬಡಲು ಪ್ರೇಯಸಿಯನ್ನು ಒಪ್ಪಿಸಿ ಬರಲೋಸುಗ ತನ್ನಣ್ಣನನ್ನು ತಾನು ಕಳುಹಿಸಿದ್ದನ್ನು ತಿಳಿಸಿದನು. ತಾನೂ ಸಹ ಅದೇ ದಿನವೇ ತನ್ನ ರೋಸಲಿಂಡಳನ್ನು ವಿವಾಹವಾಗಬಹುದಿದ್ದರೆ ಎಂದು ತನ್ನ ಬಯಕೆಯನ್ನು ವ್ಯಕ್ತಪಡಿಸಿದನು. ಗ್ಯಾನಿಮೆಡ್, ಕೂಡಲೇ ಈ ಏರ್ಪಾಟಿಗೆ ಒಪ್ಪಿ, ಆರ್ಲೆಂಡೋ ನಿಜವಾಗಿಯೂ ರೋಸಲಿಂಡಳನ್ನು ಅವನು ವ್ಯಕ್ತಪಡಿಸುವಷ್ಟು ಮಟ್ಟಿಗೇ ಪ್ರೇಮಿಸುವುದಾದಲ್ಲಿ ಅವನಿಚ್ಛೆ ಕೈಗೂಡುವುದೆಂದನು. ತಾನು ಮರುದಿನ ರೋಸಲಿಂಡ್ ಅವಳ ನೈಜರೂಪದಲ್ಲಿಯೆ ಬಂದು ಆರ್ಲೆಂಡೋ ನನ್ನು ವಿವಾಹವಾಗಲು ಇಚ್ಛಿಸುವಂತೆ ಮಾಡುವುದಾಗಿ ಹೇಳಿದನು.

ತಾನೇ ರೋಸಲಿಂಡಳಾಗಿದ್ದುದರಿಂದ ಅಷ್ಟು ಸುಲಭದಲ್ಲಿ ಕೈಗೂಡ ಬಹುದಾಗಿದ್ದ ಈ ಅದ್ಭುತ ಸಂಗತಿಯನ್ನು ತಾನು ಪ್ರಸಿದ್ಧ ಮಂತ್ರಗಾರನಾಗಿದ್ದ ತನ್ನ ಚಿಕ್ಕಪ್ಪನೊಬ್ಬನ ಬಳಿ ಕಲಿತ ಮಂತ್ರವಿದ್ಯೆಯಿಂದ ನೆರವೇರಿಸುವುದಾಗಿ ಗ್ಯಾನಿಮೆಡ್ ಸೋಗುಹಾಕಿದನು.

ಉತ್ಕಂಠಿತ ಪ್ರೇಮಿ ಆರ್ಲೆಂಡೋ ಅದನ್ನೆಲ್ಲಾ ನಂಬಲಾಗದೆ, ನಂಬ ದಿರಲೂ ಆರದೆ, ಗ್ಯಾನಿಮೆಡ್ ಬುದ್ಧಿ ತಿಳಿದು ಮಾತನಾಡುತ್ತಿರುವನೇ ಎಂದು ಪ್ರಶ್ನಿಸಿದನು. ಆಗ ಗ್ಯಾನಿಮೆಡ್—"ನನ್ನಾಣೆಗೂ ಇದು ನಿಜ; ಆದ್ದರಿಂದ ನಿನ್ನಲ್ಲಿರುವ ಅತ್ಯುತ್ತಮ ಉಡುಪುಗಳನ್ನು ಧರಿಸಿ, ಡ್ಯೂಕ್ ಮತ್ತು ಆತನ ಸಂಗಡಿಗರನ್ನೂ ನಿನ್ನ ವಿವಾಹಕ್ಕೆ ಕರೆದುತಾ; ನಾಳೆ ರೋಸಲಿಂಡಳನ್ನು ವಿವಾಹವಾಗಲು ನೀನಿಚ್ಛಿಸುವುದಾದಲ್ಲಿ, ಖಂಡಿತವಾಗಿಯೂ ಅವಳಿಲ್ಲಿ ಬರುವಳು" ಎಂದನು.

ಮರುದಿನ, ಆಲಿವರ್ ಆಲಿಯೆನಾಳ ಒಪ್ಪಿಗೆ ಪಡೆದ ಮೇಲೆ, ಅವರೆಲ್ಲರೂ ಡ್ಯೂಕನ ಬಳಿ ಬಂದು ಸೇರಿದರು. ಆರ್ಲೆಂಡೋನೂ ಅವರೊಂದಿಗೆ ಬಂದಿದ್ದನು.

ಅವರೆಲ್ಲರೂ ಈ ದ್ವಂದ್ವ ವಿವಾಹವನ್ನು ನೆರವೇರಿಸಲು ಅಲ್ಲಿ ಸೇರಿದ್ದರೂ

ಸಹ, ವಧು ಮಾತ್ರ ಒಬ್ಬಳೇ ಇದ್ದುದರಿಂದ ಅಲ್ಲಿ ಆಶ್ಚರ್ಯ, ಊಹಾಪೋಹ ಗಳಿಗೆ ಕಾರಣವಾಯಿತು. ಆದರವರಲ್ಲಿ ಬಹು ಮಂದಿ ಗ್ಯಾನಿಮೆಡ್ ಆರ್ಲೆಂಡೋ ನನ್ನು ಪರಿಹಾಸಕ್ಕೀಡುಮಾಡುತ್ತಿರುವನೆಂದೇ ಭಾವಿಸಿದ್ದರು.

ಈ ವಿಲಕ್ಷಣ ಬಗೆಯಲ್ಲಿ ಅಲ್ಲಿಗೆ ಬರಬೇಕಾಗಿದ್ದವಳು ತನ್ನ ಮಗಳೇ ಎಂಬುದನ್ನರಿತಾಗ ಡ್ಯೂಕ್, ಆರ್ಲೆಂಡೋ ನಿಜವಾಗಿಯೂ ಆ ಕುರುಬ ಹುಡುಗನ ಮಾತನ್ನು ನಂಬಿಕೊಂಡಿರುವನೇ ಎಂದು ಕೇಳಿದನು. ಆರ್ಲೆಂಡೋ ತನಗೇನು ಯೋಚಿಸಬೇಕೆಂಬುದೇ ತಿಳಿಯದಂತಾಗಿದೆಯೆಂದು ಉತ್ತರಿಸು ತ್ತಿದ್ದಾಗ ಗ್ಯಾನಿಮೆಡ್ ಅಲ್ಲಿ ಪ್ರವೇಶಿಸಿದನು. ಅವನು ಡ್ಯೂಕನನ್ನು ಕುರಿತು ಅವನ ಮಗಳು ಅಲ್ಲಿಗೆ ಬಂದಲ್ಲಿ ಆಕೆ ಆರ್ಲೆಂಡೋನನ್ನು ವಿವಾಹವಾಗಲು ಡ್ಯೂಕ್ ಸಮ್ಮತಿಸುವನೇ ಎಂದು ಕೇಳಿದನು. “ಖಂಡಿತವಾಗಿ ; ಅವಳೊಂದಿಗೇ ಬಳುವಳಿ ಕೊಡಲು ನನಗೆಷ್ಟು ರಾಜ್ಯಗಳಿದ್ದರೂ ಸರಿ, ಇದಕ್ಕೆ ನನ್ನೊಪ್ಪಿಗೆ ಯಿದೆ” ಎಂದನು ಡ್ಯೂಕ್. ನಂತರ ಗ್ಯಾನಿಮೆಡ್ ಆರ್ಲೆಂಡೋನೆಡೆಗೆ ತಿರುಗಿ—“ಅವಳನ್ನು ನಾನಿಲ್ಲಿಗೆ ಕರೆತಂದಲ್ಲಿ ನೀನಾಕೆಯನ್ನು ವಿವಾಹ ವಾಗುವೆಯಷ್ಟೆ ?” ಎಂದನು. ಆರ್ಲೆಂಡೋ—“ಖಂಡಿತವಾಗಿ ; ನಾನೆಷ್ಟು ರಾಜ್ಯಗಳಿಗೊಡೆಯನಾಗಿದ್ದರೂ ಸರಿಯೆ” ಎಂದನು.

ನಂತರ ಗ್ಯಾನಿಮೆಡ್ ಮತ್ತು ಆಲಿಯೆನಾ ಅಲ್ಲಿಂದ ಒಂದಿಗೇ ತೆರಳಿ ದರು. ಅಲ್ಲಿ ಗ್ಯಾನಿಮೆಡ್ ತನ್ನ ಪುರುಷವೇಷವನ್ನು ಕಳಚಿ, ಸ್ತ್ರೀ ವೇಷ ಭೂಷಣಗಳನ್ನೇ ಧರಿಸಿಕೊಂಡು, ಯಾವ ಮಂತ್ರವಿದ್ಯೆಯ ನೆರವೂ ಇಲ್ಲದೆ ರೋಸಲಿಂಡಳಾದನು. ಅಲಿಯೆನಾ ತನ್ನ ಹಳ್ಳಿಗ ವೇಷಭೂಷಣಗಳನ್ನು ಕಳಚಿ ತನ್ನ ಸ್ವಂತ ಉಡುಪನ್ನು ಧರಿಸಿ ಅಷ್ಟೇ ಸರಾಗವಾಗಿ ರಾಜಪುತ್ರಿ ಸಿಲಿಯಾಳಾದಳು.

ಅವರು ಅಲ್ಲಿಲ್ಲದಿದ್ದಾಗ ಡ್ಯೂಕ್, ಆರ್ಲೆಂಡೋ ಬಳಿ, ಕುರುಬ ಗ್ಯಾನಿಮೆಡ್ ತನ್ನ ಮಗಳು ರೋಸಲಿಂಡಳಂತೆಯೇ ಇರುವುದಾಗಿ ತನಗೆ ತೋರುವನೆಂದು ನುಡಿದನು. ಆರ್ಲೆಂಡೋ ತಾನೂ ಸಹ ಈ ಹೋಲಿಕೆ ಯನ್ನು ಗುರುತಿಸಿರುವುದಾಗಿ ಉತ್ತರಿಸಿದನು.

ಇವೆಲ್ಲವೂ ಹೇಗೆ ಕೊನೆಗಾಣುವುದೋ ಎಂದವರು ಅಚ್ಚರಿಸಡುವ ಮುನ್ನವೇ ರೋಸಲಿಂಡ್ ಮತ್ತು ಸಿಲಿಯಾ ತಮ್ಮ ಸ್ವಂತ ಉಡುಪುಗಳಲ್ಲಿ ಪ್ರವೇಶಿಸಿದರು. ರೋಸಲಿಂಡ್ ತನ್ನ ಸೋಗನ್ನು ಬಿಟ್ಟು, ಮಂತ್ರವಿದ್ಯೆಯ ನೆರವಿನಿಂದ ಅಲ್ಲಿಗೆ ಬಂದುದಾಗಿ ನಟನೆಮಾಡದೆ, ಆ ಕೂಡಲೇ ತಂದೆಯ

ಕಾಲಿಗೆರಗಿ ಆತನ ಆಶೀರ್ವಾದವನ್ನು ಬೇಡಿದಳು. ಅವಳಾರೀತಿ ಹಠಾತ್ತನೆ ಕಾಣಿಸಿಕೊಂಡುದು ಮಂತ್ರಶಕ್ತಿಯಿಂದಲೇ ಎನ್ನಬಹುದಾದಷ್ಟು ಮಟ್ಟಿಗೆ ಅಲ್ಲಿ ನೆರೆದಿದ್ದವರಿಗೆಲ್ಲಾ ಅಚ್ಚರಿಯನ್ನುಂಟುಮಾಡಿತು. ಆದರೆ ರೋಸಲಿಂಡ್ ಇನ್ನೂ ಹೆಚ್ಚಾಗಿ ತಂದೆಯೊಡನೆ ವಿನೋದವಾಡಲಿಚ್ಛಿಸದೆ ತಾನು ದೇಶ ಭ್ರಷ್ಟಳಾಗಿ ಬಂದು ಈ ಕಾಡಿನಲ್ಲಿ, ಗೆಳತಿ ಸಿಲಿಯಾಳನ್ನು ತಂಗಿಯೆಂದು ಹೇಳಿಕೊಂಡು ಕುರುಬರ ಯುವಕನಂತೆ ಜೀವಿಸಿದ ಕತೆಯನ್ನೆಲ್ಲಾ ಹೇಳಿದಳು.

ನಂತರ ಡ್ಯೂಕ್ ವಿವಾಹಕ್ಕೆ ತಾನು ಮೊದಲೇ ಕೊಟ್ಟಿದ್ದ ಒಪ್ಪಿಗೆಯನ್ನು ಪುನಃ ಸಮರ್ಥಿಸಿದನು. ಬಳಿಕ ಆರ್ಲೆಂಡೋ–ರೋಸಲಿಂಡರಿಗೂ, ಆಲಿವರ್–ಆಲಿಯೆನಾರಿಗೂ ಒಂದೇ ವೇಳೆಯಲ್ಲಿ ವಿವಾಹ ಜರುಗಿತು. ಈ ಕಾಡಿನಲ್ಲಿ ಅವರ ವಿವಾಹ ಸಮಾರಂಭವನ್ನು ಪದ್ಧತಿಗನುಣವಾದ ವಿಜೃಂಭಣೆಯಿಂದ ನಡೆಸಲಾಗ ದಿದ್ದರೂ,ಅದಕ್ಕಿಂತಲೂ ಹರ್ಷಭರಿತವಾದ ವಿವಾಹೋತ್ಸವ ಬೇರೆಂದೂ ಎಲ್ಲೂ ನಡೆದಿರಲಿಲ್ಲ. ಅವರೆಲ್ಲರೂ ಆ ಚೆಲುವಿನ ಮರಗಳ ತಂಪಾದ ನೆರಳಿನಲ್ಲಿ ಕುಳಿತು ಭೋಜನಮಾಡುತ್ತಿದ್ದಾಗ ಶ್ರೇಷ್ಠನಾದ ಡ್ಯೂಕ್ ಮತ್ತು ಆ ಸತ್ಯಪ್ರೇಮಿಗಳ ಮಹದಾನಂದಕ್ಕೆ ಯಾವ ಭಾಗದಲ್ಲೂ ಕಡಿಮೆಯಾಗದಿರಲೋ ಎಂಬಂತೆ ಸಂತೋಷವಾರ್ತೆಯೊಂದು ಬಂದು ತಲುಪಿತು. ಅನಿರೀಕ್ಷಿತವಾಗಿ ದೂತ ನೊಬ್ಬನು ಬಂದು ಡ್ಯೂಕನಿಗೆ ರಾಜ್ಯವು ಹಿಂದಕ್ಕೆ ದೊರೆಯಿತೆಂದು ತಿಳಿಸಿದನು !

ಕಪಟಿಯಾಗಿದ್ದ ಅರಸು ತನ್ನ ಪುತ್ರಿ ಸಿಲಿಯಾಳ ಪಲಾಯನದಿಂದಲೂ, ಪ್ರತಿದಿನವೂ ದೇಶಭ್ರಷ್ಟ ಡ್ಯೂಕನ ಬಳಿಗೆ ಸೇರಿಕೊಳ್ಳಲು ಅದೆಷ್ಟೋ ಮಂದಿ ಯೋಗ್ಯ ಪುರುಷರು ಆರ್ಡೆನ್ ಅರಣ್ಯಪ್ರದೇಶಕ್ಕೆ ತೆರಳುತ್ತಿರುವರೆಂಬುದನ್ನು ಕೇಳಿದ್ದರಿಂದಲೂ ಕ್ರೋಧೋನ್ಮತ್ತನಾಗಿದ್ದನು. ಆಪತ್ತಿನ ಸಮಯದಲ್ಲಿಯೂ ಅಷ್ಟೊಂದು ಗೌರವವನ್ನು ಪಡೆಯುತ್ತಿದ್ದ ತನ್ನಣ್ಣನ ಬಗ್ಗೆ ಬಹು ಅಸೂಯೆ ಗೊಂಡು, ಅವನು ಆಗಲೇ ದೊಡ್ಡ ಸೈನ್ಯವೊಂದನ್ನು ತೆಗೆದುಕೊಂಡು ಡ್ಯೂಕ್ ಮತ್ತು ಅವನ ಮಿತ್ರರೊಂದಿಗೆ ಯುದ್ಧಮಾಡುವ ಉದ್ದಿಶ್ಯದಿಂದ ಹೊರಟಿದ್ದನು. ಆದರೆ ವಿಧಿಯ ಅದ್ಭುತ ಲೀಲಾವಿಲಾಸವೊಂದರಿಂದ ಈ ದುಷ್ಟ ಸೋದರ ತನ್ನ ಕ್ರೂರೇಚ್ಛೆಯಿಂದ ವಿಮುಖನಾದನು. ಅವನು ಆ ಘೋರಾರಣ್ಯದ ಗಡಿಯನ್ನು ಪ್ರವೇಶಿಸುತ್ತಿದ್ದಂತೆಯೇ ಅವನಿಗೆ ಧರ್ಮಾತ್ಮ ನಾದ ವೃದ್ಧನೊಬ್ಬನ ಭೇಟಿಯಾಯಿತು. ಆತನು ಈ ಸೋದರನೊಂದಿಗೆ ಬಹುಹೊತ್ತು ಮಾತು ನಡೆಸಿ, ಕೊನೆಯಲ್ಲಿ ಅವನ ಹೃದಯವನ್ನು ಆ ದುಷ್ಟ

ಆಶಯದಿಂದ ಸಂಪೂರ್ಣವಾಗಿ ಬೇರೆಡೆಗೆ ತಿರುಗಿಸಿದನು. ಅಲ್ಲಿಂದ ಮುಂದೆ ಡ್ಯೂಕ್ ಫ್ರೆಡರಿಕ್ ಶುದ್ಧ ಪಶ್ಚಾತ್ತಾಪದಿಂದ ದಗ್ಧನಾಗಿ, ತನ್ನ ನ್ಯಾಯ ಬಾಹಿರ ರಾಜ್ಯವನ್ನು ತೊರೆದು ಉಳಿದ ಆಯುಷ್ಯವನ್ನು ಧರ್ಮಗೃಹವೊಂದರಲ್ಲಿ ಕಳೆಯಲು ನಿಶ್ಚಯ ಮಾಡಿದನು. ಅದೇ ತಾನೇ ಪ್ರೇರಿತವಾದ ಅವನಾ ಪರಿತಾಪದ ಪ್ರಥಮ ಸೂಚನೆಯಾಗಿ, ಈ ಹಿಂದೆ ತಿಳಿಸಿದಂತೆ, ಅವನು ತನ್ನಣ್ಣನ ಬಳಿಗೆ ದೂತನೊಬ್ಬನನ್ನು ಅಟ್ಟಿ ತಾನಿಷ್ಟು ದಿನವೂ ಆಕ್ರಮಿಸಿಕೊಂಡಿದ್ದ ಆತನ ರಾಜ್ಯವನ್ನೂ, ಅದರೊಂದಿಗೆ ಅವನ ಆಪತ್ಸಮಯದಲ್ಲಿ ನೆರವಾಗಿದ್ದ ಮಿತ್ರರ ಸ್ಥಿರ ಚರ ಸ್ವತ್ತನ್ನೂ ಹಿಂದಕ್ಕೆ ಕೊಡುವುದಾಗಿ ತಿಳಿಸಿದನು.

ಎಷ್ಟು ಅನಿರೀಕ್ಷಿತವೋ ಅಷ್ಟೇ ಸುಖಪ್ರದವೂ ಆಗಿದ್ದ ಈ ಸಂತಸದ ಸುದ್ದಿ ಸಮಯಕ್ಕೆ ಸರಿಯಾಗಿ ಬಂದು ಸೇರಿ, ರಾಜಕುವರಿಯರ ವಿವಾಹದ ವಿಜೃಂಭಣೆ, ಹರ್ಷೋತ್ಸಾಹಗಳನ್ನು ನೂರ್ಮಡಿಸಿತು. ಅವಳ ತಂದೆ ರಾಜ್ಯವನ್ನು ಹಿಂದಕ್ಕೆ ಕೊಟ್ಟದ್ದರಿಂದಾಗಿ ಈಗ ಸಿಲಿಯಾಳ ಬದಲು ರೋಸಲಿಂಡ್ ರಾಜ್ಯದ ಉತ್ತರಾಧಿಕಾರಿಣಿಯಾಗಿದ್ದರೂ ಸಹ, ಸಿಲಿಯಾ, ರೋಸಲಿಂಡಳ ತಂದೆಗೊದಗಿದೀ ಭಾಗ್ಯವಿಶೇಷಕ್ಕಾಗಿ ಗೆಳತಿಯನ್ನು ಅಭಿನಂದಿಸಿದಳು. ಶುದ್ಧ ಮನಸ್ಸಿನಿಂದ ಅವಳಿಗೆ ಹರ್ಷವನ್ನು ಕೋರಿದಳು. ಹೀಗೆ ಈ ಗೆಳತಿಯರಿಬ್ಬರ ಪ್ರೇಮದಲ್ಲಿ ಅಸೂಯೆ ಅಥವಾ ಈರ್ಷ್ಯೆಯ ಸುಳಿವು ಸಹ ಇರಲಿಲ್ಲ.

ಇಷ್ಟುದಿನವೂ ತನ್ನ ದೇಶಭ್ರಷ್ಟತೆಯಲ್ಲಿ ತನ್ನೊಂದಿಗೇ ಉಳಿದಿದ್ದ ಅಕೃತ್ರಿಮ ಮಿತ್ರರೆಲ್ಲರಿಗೂ ಪ್ರತಿಫಲವೀಯಲು ಡ್ಯೂಕನಿಗೀಗ ಅವಕಾಶ ಒದಗಿತು. ಈ ಯೋಗ್ಯ ಅನುಯಾಯಿಗಳೆಲ್ಲಾ, ಆತನ ದುಸ್ಥಿತಿಯಲ್ಲಿ ಸಹನೆಯಿಂದಲೇ ಪಾಲುಗೊಂಡಿದ್ದರಾದರೂ ಸಹ, ತಮ್ಮ ನ್ಯಾಯದರಸನ ರಾಜಸ್ಥಾನಕ್ಕೆ ಶಾಂತಿ – ಉತ್ಕರ್ಷಗಳೊಂದಿಗೆ ಹಿಂದಿರುಗಲು ಬಹು ಉತ್ಸುಕರಾಗಿಯೇ ಇದ್ದರು.

---

# ನಿಷ್ಕಳಂಕಿನಿ

## (THE WINTER'S TALE)

ಸಿಸಿಲಿಯ ರಾಜನಾಗಿದ್ದ ಲಿಯೋರ್ಟೆಟಿಸ್, ಸುಂದರಿಯೂ ಸದ್ಗುಣಿಯೂ ಆದ ತನ್ನ ರಾಣಿ ಹರ್ಮಿಯೋನಳೊಂದಿಗೆ, ಹಿಂದೊಮ್ಮೆ ಬಹು ಸಾಮರಸ್ಯ ದೊಡನೆ ಬಾಳುತ್ತಿದ್ದನು. ಈ ಅತ್ಯುತ್ತಮ ರಾಣಿಯ ಪ್ರೇಮಭಾಗಿಯಾಗಿದ್ದ ಲಿಯೋರ್ಟೆಟಿಸ್‌ನಿಗೆ ಯಾವೊಂದು ಕೊರತೆಯೂ ಇರಲಿಲ್ಲ. ಆದರೂ, ತನ್ನ ಬಾಲ್ಯಸ್ನೇಹಿತನೂ ಸಹಪಾಠಿಯೂ ಆಗಿದ್ದ ಬೊಹಿಮಿಯಾದ ರಾಜ ಪಾಲಿಕ್ಸಿನಸನನ್ನು ಮಾತ್ರ ಇನ್ನೊಮ್ಮೆ ನೋಡಿ ತನ್ನ ರಾಣಿಗೂ ಪರಿಚಯಮಾಡಿ ಕೊಡಬೇಕೆಂದು ಮಾತ್ರ ಆಗಾಗ ಹಾತೊರೆಯುತ್ತಿದ್ದನು. ಲಿಯೋರ್ಟೆಟಿಸ್ ಮತ್ತು ಪಾಲಿಕ್ಸಿನಸ್ ಎಳೆತನದಿಂದಲೂ ಒಂದಿಗೇ ಬೆಳೆದವರು. ಆದರೆ, ಅವರವರ ಪಿತೃವಿಯೋಗದ ನಂತರ, ಆಯಾ ರಾಜ್ಯಾಡಳಿತಗಳನ್ನು ವಹಿಸ ಬೇಕಾಗಿ ಬಂದುದರಿಂದ, ಅವರಿಬ್ಬರೂ ಎಷ್ಟೋ ವರ್ಷಗಳವರೆಗೆ ಸಂಧಿಸ ಲಾಗದಿದ್ದರೂ, ಆಗಾಗ ಒಬ್ಬರಿಂದೊಬ್ಬರಿಗೆ ಸ್ನೇಹದ ಕಾಣಿಕೆಗಳೂ, ಕಾಗದ ಪತ್ರಗಳೂ, ಪ್ರೀತಿಯ ಕಾಣಿಕೆಗಳೂ ವಿನಿಮಯವಾಗುತ್ತಿದ್ದವು.

ಕಡೆಗೊಮ್ಮೆ, ಅದೆಷ್ಟೋಬಾರಿ ಆಹ್ವಾನವಿತ್ತ ಮೇಲೆ, ಪಾಲಿಕ್ಸಿನಸ್ ಬೊಹಿಮಿಯಾದಿಂದ, ಮಿತ್ರ ಲಿಯೋರ್ಟೆಟಿಸನನ್ನು ಸಂದರ್ಶಿಸಲು ಸಿಸಿಲಿಯ ರಾಜಾಸ್ಥಾನಕ್ಕೆ ಬಂದನು.

ಮೊದಮೊದಲು, ಈ ಸಂದರ್ಶನ ಲಿಯೋರ್ಟೆಟಿಸನಿಗೆ ಕೇವಲ ಸಂತಸ ವನ್ನೇ ಉಂಟುಮಾಡಿತು. ಅವನು ತನ್ನೀ ಬಾಲ್ಯದ ಒಡನಾಡಿಗೆ, ರಾಣಿ ಮನ್ನಣೆಯಿತ್ತು ಗೌರವಿಸಲು ಪ್ರೋತ್ಸಾಹ ಕೊಟ್ಟನಲ್ಲದೆ, ಈ ಪ್ರೀತಿ ಪಾತ್ರ ಮಿತ್ರನ ಸಹವಾಸದಿಂದ ತನ್ನ ಆನಂದ ಪೂರ್ಣಗೊಂಡುದಾಗಿಯೂ ಭಾವಿಸಿದನು. ಅವರಿಬ್ಬರೂ ಹಿಂದಿನ ದಿನಗಳನ್ನು ಸ್ಮರಿಸಿಕೊಂಡು ಮಾತನಾಡುತ್ತಾ, ತಮ್ಮ ಬಾಲ್ಯದ ಕುಚೋದ್ಯಗಳನ್ನೆಲ್ಲ ನೆನಪು

ಮಾಡಿಕೊಂಡರು. ಅಲ್ಲದೆ, ಈ ಎಲ್ಲ ಸಂಭಾಷಣೆಗಳಲ್ಲಿ ಉತ್ಸಾಹದಿಂದ ಭಾಗಿಯಾಗುತ್ತಿದ್ದ ಹರ್ಮಿಯೋನಳಿಗೂ ವಿಸ್ತಾರವಾಗಿ ವರ್ಣಿಸಿದರು.

ಸುದೀರ್ಘಕಾಲ ಅಲ್ಲಿ ತಂಗಿದ್ದ ಮೇಲೆ, ಪಾಲಿಕ್ಸಿನಸ್ ಹೊರಡುವ ಏರ್ಪಾಟುಗಳನ್ನು ನಡೆಸಲು ಉದ್ಯುಕ್ತನಾದನು. ಆಗ, ಹರ್ಮಿಯೋನ್, ತನ್ನ ಗಂಡನ ಅಪೇಕ್ಷೆಯ ಮೇರೆಗೆ, ಅವನ ಬೇಡಿಕೆಗಳೊಂದಿಗೆ ತಾನೂ ದನಿಗೂಡಿಸಿ, ಪಾಲಿಕ್ಸಿನಸ್ ಇನ್ನೂ ಹೆಚ್ಚು ದಿನಗಳು ಅಲ್ಲಿಯೇ ಇರಲೆಂದು ಕೇಳಿಕೊಂಡಳು.

ಆದರೀಕ್ಷಣದಿಂದ ಸಾಧ್ವಿಯಾದಾ ರಾಣಿಯ ದುಃಖಪರಂಪರೆ ಮೊದಲಾಯಿತು; ಏಕೆಂದರೆ, ಲಿಯೋಂಟೀಸ್‌ನ ಬೇಡಿಕೆಯನ್ನು ನಿರಾಕರಿಸಿದ ಪಾಲಿಕ್ಸಿನಸ್ ಹರ್ಮಿಯೋನಳ ಒತ್ತಾಯದ ಮೃದನುಡಿಗಳಿಗೆ ಮನಸೋತು ತಾನು ಹೊರಡುವ ಕಾಲವನ್ನು ಮುಂದುವರಿಸಲು ಒಪ್ಪಿಕೊಂಡನು. ಇದರಿಂದ, ದೀರ್ಘಕಾಲದಿಂದಲೂ ಮಿತ್ರ ಪಾಲಿಕ್ಸಿನಸನ ಋಜುತ್ವ ಮತ್ತು ಪ್ರಾಮಾಣಿಕ ತತ್ವಗಳಲ್ಲೂ, ಸದ್ಗುಣಿಯಾದ ತನ್ನ ರಾಣಿಯ ಅತ್ಯುತ್ತಮ ಮನೋಧರ್ಮಗಳಲ್ಲೂ ವಿಶ್ವಾಸವಿಟ್ಟಿದ್ದರೂ ಸಹ, ಈಗ, ಲಿಯೋಂಟೀಸ್ ಅಂಕೆಯಲ್ಲಿಡಲಾಗದ ಅಸೂಯೆಗೊಳಗಾದನು. ಹರ್ಮಿಯೋನ್, ತನ್ನ ಪತಿಯ ಇಚ್ಛಾನುಸಾರವಾಗಿ, ಅವನನ್ನು ಮೆಚ್ಚಿಸುವುದಕ್ಕಾಗಿಯೇ ಪಾಲಿಕ್ಸಿನಸದ ಬಗೆಗೆ ತೋರುತ್ತಿದ್ದ ಪ್ರತಿಯೊಂದು ಗೌರವಭಾವದಿಂದಲೂ, ಈ ದುರ್ದೈವೀ ರಾಜನ ಅಸೂಯೆ ಇನ್ನಷ್ಟು ಹೆಚ್ಚಾಗತೊಡಗಿತು. ಸ್ನೇಹಪರನಾದ ನಿಷ್ಠಮಿತ್ರನಾಗಿ, ಉತ್ಕೃಷ್ಟನಾದ ಮಮತೆಯ ಪತಿಯಾಗಿದ್ದ ಲಿಯೋಂಟೀಸ್ ಅಲ್ಪಾವಧಿಯಲ್ಲೇ ಕ್ರೂರನಾದ ಅಮಾನುಷ ಪಿಶಾಚಿಯಾಗಿ ಪರಿಣಮಿಸಿದನು. ಆ ಕೂಡಲೇ ಅವನು ತನ್ನ ರಾಜಾಸ್ಥಾನದ ಶ್ರೀಮಂತರಲ್ಲೊಬ್ಬನಾದ ಕೆಮಿಲ್ಲೋ ಎಂಬವನಿಗೆ ಹೇಳಿ ಕಳುಹಿಸಿ, ಅವನೆದುರು ತನ್ನ ಸಂಶಯ ಭಾವವನ್ನು ವ್ಯಕ್ತಪಡಿಸಿ, ಪಾಲಿಕ್ಸಿನಸನಿಗೆ ವಿಷ ಊಡಲು ಅವನಿಗೆ ಅಪ್ಪಣೆಮಾಡಿದನು.

ಕೆಮಿಲ್ಲೋ ಒಳ್ಳೆಯ ಸ್ವಭಾವದವನು; ಲಿಯೋಂಟೀಸ್‌ನ ಈ ಅಸೂಯಾ ಭಾವಕ್ಕೆ ವಾಸ್ತವವಾಗಿ ಎಳ್ಳಷ್ಟೂ ಆಧಾರವಿಲ್ಲದಿದ್ದುದನ್ನು ಅವನು ಚೆನ್ನಾಗಿ ಅರಿತಿದ್ದುದರಿಂದ, ಪಾಲಿಕ್ಸಿನಸನಿಗೆ ವಿಷ ಊಡುವ ಬದಲು, ತನ್ನ ಪ್ರಭುವಿನ ಆಜ್ಞೆಯನ್ನು ಅವನಿಗೆ ತಿಳಿಯಪಡಿಸಿದ್ದಲ್ಲದೆ, ಅವನೊಡಗೂಡಿ ಸಿಸಿಲೀ ರಾಜ್ಯದಿಂದ ತಪ್ಪಿಸಿಕೊಂಡು ಹೋಗಲೂ ಒಪ್ಪಿದನು. ಪಾಲಿಕ್ಸಿನಸ್,

ಕೆಮಿಲ್ಲೋ ಸಹಾಯದಿಂದ, ತನ್ನ ಸ್ವಂತ ರಾಜ್ಯವಾದ ಬೊಹಿಮಿಯಾಕ್ಕೆ ಸುರಕ್ಷಿತವಾಗಿ ಬಂದು ಸೇರಿದನು. ಆಗಿನಿಂದ ಕೆಮಿಲ್ಲೋ ರಾಜಸ್ಥಾನದಲ್ಲೇ ಇರತೊಡಗಿ ಪಾಲಿಕ್ಸಿನಸನ ಅಚ್ಚುಮೆಚ್ಚಿನ ಮಿತ್ರನಾದನು.

ಪಾಲಿಕ್ಸಿನಸನ ಪಲಾಯನದಿಂದ, ಅಸೂಯಾಪರನಾದ ಲಿಯೋಂಟಿಸ್ ಮತ್ತಷ್ಟು ಕ್ರೋಧಾವಿಷ್ಟನಾದನು. ರಭಸದಿಂದ ರಾಣಿಯ ಅಂತಃಪುರವನ್ನು ಪ್ರವೇಶಿಸಿದನು. ಅಲ್ಲಿ ಅದೇ ತಾನೇ ತಾಯಿಗಾಗಿ ಉತ್ತಮಕತೆಯೊಂದನ್ನು ಹೇಳಲು ತೊಡಗಿದ್ದ ಚಿಕ್ಕ ಮಗ ಮೇಮಿಲಿಸ್‌ನೊಂದಿಗೆ ರಾಣಿ ಕುಳಿತಿದ್ದಾಗ, ಮಗುವನ್ನು ಅವಳಿಂದ ಸೆಳೆದುಕೊಂಡು ಹರ್ಮಿಯೋನಳನ್ನು ಸೆರೆಮನೆಗೆ ಕಳುಹಿದನು.

ಚಿಕ್ಕ ಮಗುವಾಗಿದ್ದರೂ ಸಹ, ಮೇಮಿಲಿಯಸ್ ತಾಯಿಯನ್ನು ಬಹು ಅಕ್ಕರೆಯಿಂದ ಪ್ರೀತಿಸುತ್ತಿದ್ದನು. ತನ್ನೆದುರಿನಲ್ಲಿ ಅವಳಷ್ಟು ಅವಮಾನಿತಳಾದುದನ್ನು ನೋಡಿ, ಸೆರೆಯಲ್ಲಿಡಲೋಸ್ಕರವೇ ಅವಳನ್ನು ತನ್ನಿಂದ ಎಳೆದೊಯ್ದರೆಂದು ತಿಳಿದಾಗ, ಅವನು ನಿದ್ರಾಹಾರಗಳನ್ನು ತೊರೆದನು ; ಕೊರಗಿ, ಕೊರಗಿ ಆ ದುಃಖದಿಂದಲೇ ಸಾಯುವನೋ ಎಂಬಂತಾದನು.

ರಾಣಿಯನ್ನು ಸೆರೆಗಟ್ಟಿದಮೇಲೆ, ರಾಜ, ಕ್ಲಿಯೋಮಿನಸ್ ಮತ್ತು ಡಯಾನ್ ಎಂಬಿಬ್ಬರು ಶ್ರೀಮಂತರನ್ನು ಕರೆಸಿಕೊಂಡನು. ಡೆಲ್ಫೋಗೆ ಅವರ್ಬಿಬರೂ ತೆರಳಿ, ರಾಣಿಯ ನಿಷ್ಠೆಯನ್ನು ಕುರಿತು ಅಪೋಲೋ ದೇವಾಲಯದ ಆಕಾಶವಾಣಿ (ಆರೆಕಲ್)ಯನ್ನು ಪ್ರಶ್ನಿಸಬೇಕೆಂದು ಆಜ್ಞಾಪಿಸಿದನು.

ಹರ್ಮಿಯೋನ್, ಸೆರೆಮನೆ ಸೇರಿದ ಸ್ವಲ್ಪಕಾಲದಲ್ಲೇ ಹೆಣ್ಣು ಮಗುವೊಂದಕ್ಕೆ ಜನನವಿತ್ತಳು. ಅಭಾಗಿನಿಯಾದಾ ರಾಣಿ ಆ ಚೆಲುವಿನ ಮಗುವನ್ನು ನೋಡಿ ಸಮಾಧಾನ ತಂದುಕೊಳ್ಳುತ್ತಾ "ಮಗು, ಈಗಾಗಲೇ ಬಂದಿಯಾಗಿರುವ ನಿನ್ನಷ್ಟೇ ನಾನೂ ನಿರಪರಾಧಿನಿ" ಎಂದಳು.

ಸಿಸಿಲಿಯ ಶ್ರೀಮಂತ ಆಂಟಿಗೊನಸ್‌ನ ಪತ್ನಿಯೂ, ಉಜ್ವಲ ಚೈತನ್ಯೆಯೂ ಆದ ಧೀರೆ ಪಾಲಿನಾ ಹರ್ಮಿಯೋನ್‌ಳಿಗೆ ಮಮತೆಯ ಗೆಳತಿಯಾಗಿದ್ದಳು. ತನ್ನೊಡತಿಯಾದ ರಾಣಿ ಹೊಸ ಮಗುವನ್ನು ಪಡೆದಳೆಂಬುದನ್ನು ಕೇಳಿ ಪಾಲಿನಾ, ಹರ್ಮಿಯೋನ್ ಬಂಧಿತಳಾಗಿದ್ದಲ್ಲಿಗೆ ತ್ವರೆಯಿಂದ ಹೋದಳು. ಅಲ್ಲಿ ಹರ್ಮಿಯೋನ್‌ಳ ಸೇವೆಗೆಂದು ನಿಯೋಜಿತಳಾಗಿದ್ದ ಎಮಿಲಿಯಾಳನ್ನು ಕುರಿತು—"ಎಮಿಲಿಯಾ, ದಯಮಾಡಿ ನಮ್ಮ ರಾಣಿಗೆ

ತಿಳಿಸು. ಒಡನೆ ತನ್ನ ಚಿಕ್ಕ ಮಗುವನ್ನು ನನ್ನ ಬಳಿ ಕೊಡಲು ವಿಶ್ವಾಸ ವಿಟ್ಟಲ್ಲಿ, ನಾನದನ್ನು ರಾಜರ ಬಳಿ ಕರೆದೊಯ್ಯುತ್ತೇನೆ. ಆ ಮುಗ್ಧ ಮಗುವನ್ನು ನೋಡಿದಮೇಲಾದರೂ ಅವರ ಮನಸ್ಸು ಕರಗಬಹುದೇನೋ" ಎಂದಳು. ಎಮಿಲಿಯಾ ಉತ್ತರಕೊಡುತ್ತಾ—"ತಾಯೀ, ಈ ಕೂಡಲೇ ನಿಮ್ಮ ಉತ್ಕೃಷ್ಟ ಪ್ರಸ್ತಾಪವನ್ನು ರಾಣಿಗೆ ತಿಳಿಸುತ್ತೇನೆ. ಇಂದವರು ರಾಜರಿಗೆ ಮಗುವನ್ನು ತೋರಿಸುವಂತಹ ಸಾಹಸಕ್ಕೆ ಕೈಯಿಡಬಲ್ಲ ಹಿತೈಷಿಯೊಬ್ಬರಿದ್ದರೆ ಎಂದು ಆಶಿಸುತ್ತಿದ್ದರು" ಎಂದಳು. ಪಾಲಿನಾ—"ಅಲ್ಲದೆ ಅವರಿಗೆ ಹೇಳು. ಸತ್ಯವಾಗಿಯೂ ನಾನವರ ಪರವಾಗಿ ಲಿಯೋಂಟಿಸ್‌ನೊಡನೆ ಧೈರ್ಯವಾಗಿ ಮಾತನಾಡುವೆನೆಂದು" ಎಂದಳು.—"ಶ್ರೇಷ್ಠರಾದ ನಮ್ಮ ರಾಣಿಯಮೇಲಿನ ನಿಮ್ಮ ಈ ದಯಾಭಾವಕ್ಕಾಗಿ, ಎಂದೆಂದಿಗೂ ನಿಮ್ಮ ಮೇಲೆ ದೇವನ ಅನುಗ್ರಹ ವಿರಲಿ" ಎಂದು ಹೇಳಿ ಎಮಿಲಿಯಾ ರಾಣಿಯ ಬಳಿ ತೆರಳಿದಳು. ಹರ್ಮಿಯೋನ್ ಸಂತೋಷದಿಂದ ಮಗುವನ್ನು ಪಾಲಿನಾಳ ವಶಕ್ಕೆ ಕೊಟ್ಟಳು. ಮಗುವನ್ನು ತಂದೆಗೆ ತೋರಿಸುವ ಸಾಹಸಕ್ಕೆ ಯಾರೂ ಕೈಹಾಕಲಾರರೆಂದೇ ಆಕೆ ಹೆದರಿದ್ದಳು.

ಪಾಲಿನಾ ಮಗುವನ್ನು ತೆಗೆದುಕೊಂಡು, ಗಂಡನು ರಾಜನ ಕ್ರೋಧದ ಭೀತಿಯಿಂದ ಅವಳನ್ನು ತಡೆಗಟ್ಟಲು ಪ್ರಯತ್ನಿಸಿದರೂ ಸಹ, ಒತ್ತಾಯ ಪೂರ್ವಕವಾಗಿಯೇ ರಾಜನಬಳಿ ಸೇರಿ, ಮಗುವನ್ನು ತಂದೆಯ ಪಾದಗಳ ಬಳಿ ಇಟ್ಟು, ಹರ್ಮಿಯೋನ್‌ಳ ಪರವಾಗಿ ರಾಜನನ್ನು ಉದ್ದೇಶಿಸಿ ಉಜ್ವಲ ಭಾಷಣವನ್ನೇ ಮಾಡಿದಳು. ಅವನ ಕ್ರೌರ್ಯವನ್ನು ಕಟುವಾಗಿ ಖಂಡಿಸಿ, ನಿರಪರಾಧಿಗಳಾದ ಪತ್ನಿಯಮೇಲೂ, ಮಗುವಿನಮೇಲೂ ಕರುಣೆ ತೋರುವಂತೆ ಕೋರಿದಳು. ಆದರೆ ಪಾಲಿನಾಳ ಈ ಉಜ್ವಲ ಪ್ರತಿಭಟನೆಯಿಂದ ಲಿಯೋಂಟಿಸನ ಆಗ್ರಹ ಮತ್ತಷ್ಟು ಹೆಚ್ಚುಗೊಂಡಿತು. ಅವನು ಅವಳನ್ನಲ್ಲಿಂದ ಕರೆದೊಯ್ಯುವಂತೆ ಅವಳ ಗಂಡ ಆಂಟಿಗೊನಸನಿಗೆ ಆಜ್ಞಾಪಿಸಿದನು.

ಹೋಗುವಾಗ, ಪಾಲಿನಾ, ಮಗುವಿನೊಂದಿಗೆ ಒಬ್ಬನೇ ಇರುವಾಗಲಾದರೂ ಅವನದನ್ನು ಚೆನ್ನಾಗಿ ನೋಡಿ ಅದರ ಅಸಹಾಯಕ ಮುಗ್ಧತೆಯಿಂದ ಮರುಕಗೊಳ್ಳಬಹುದೆಂದು ಯೋಚಿಸಿ, ಆ ಚಿಕ್ಕಮಗುವನ್ನು ತಂದೆಯ ಬಳಿಯೇ ಬಿಟ್ಟು ಹೋದಳು.

ಪಾಲಿನಾ ಯೋಚಿಸಿದ್ದು ತಪ್ಪಾಯಿತು: ಅವಳತ್ತ ಹೋದಕೂಡಲೇ ಆ ನಿರ್ದಯನಾದ ತಂದೆ ಪಾಲಿನಾಳ ಗಂಡ ಆಂಟಿಗೊನಸ್‌ನಿಗೆ, ಮಗು

ವನ್ನು ಸಮುದ್ರದಮೇಲೆ ಕರೆದೊಯ್ದು ಯಾವುದಾದರೊಂದು ನಿರ್ಜನ ತೀರ ಪ್ರದೇಶದಲ್ಲಿ ನಾಶವಾಗುವಂತೆ ಬಿಟ್ಟುಬಿಡಲು ಆಜ್ಞೆಯಿತ್ತನು.

ಆಂಟಿಗೊನಸ್, ಉತ್ತಮನಾದ ಕೆಮಿಲ್ಲೋನಂತಲ್ಲದೆ, ಲಿಯೋಟೀಸ್‌ನ ಆಜ್ಞೆಯನ್ನು ಶಿರಸಾವಹಿಸಿ, ಆ ಕೂಡಲೇ ಮಗುವನ್ನು ಹಡಗಿಗೆ ಕರೆದೊಯ್ದು ಅದನ್ನು ತಾನು ಕಾಣುವ ಮೊದಲನೆಯ ನಿರ್ಜನಪ್ರದೇಶದಲ್ಲಿ ಬಿಡಲು ನಿರ್ಧರಿಸಿ ಸಮುದ್ರ ಪ್ರಯಾಣ ಬೆಳೆಸಿದನು.

ಹರ್ಮಿಯೋನ್ ಕಳಂಕಿನಿಯೆಂದು ರಾಜ ಎಷ್ಟು ದೃಢವಾಗಿ ನಂಬಿದ್ದನೆಂದರೆ, ಡೆಲ್ಫೋದಲ್ಲಿ ಅಪೋಲೋನ ಆಕಾಶವಾಣಿಯನ್ನು ಕೇಳಿ ಬರಲು ತಾನೇ ಕಳುಹಿದ್ದ ಕ್ಲಿಯೋಮಿನಸ್ ಮತ್ತು ಡಯೋನ್ ಹಿಂತಿರುಗಿ ಬರುವವರೆಗೂ ಅವನು ಕಾಯಲಾರದೆ ಹೋದನು; ರಾಣಿ ತನ್ನ ಮುದ್ದುಮಗುವನ್ನು ಕಳೆದುಕೊಂಡ ದುಃಖದಿಂದ ಚೇತರಿಸಿಕೊಳ್ಳುವ ಮೊದಲೇ ಅವಳನ್ನು ತನ್ನ ಆಸ್ಥಾನದ ಶ್ರೀಮಂತರೆಲ್ಲರ, ಗಣ್ಯ ಮಹನೀಯರೆಲ್ಲರ ಎದುರಿನಲ್ಲಿ ವಿಚಾರಣೆಗೆ ಗುರಿಮಾಡಲು ಕರೆಸಿದನು. ಎಲ್ಲ ದೊಡ್ಡ ಶ್ರೀಮಂತರೂ, ನ್ಯಾಯಾಧೀಶರು ಮತ್ತು ದೇಶದ ಗಣ್ಯ ಪುರುಷರೆಲ್ಲರೂ ಹರ್ಮಿಯೋನ್‌ಳ ವಿಚಾರಣೆ ನಡೆಸಲು ಸೇರಿದ್ದಾಗ, ನಿರ್ಭಾಗ್ಯಳಾದಾ ರಾಣಿ, ತನ್ನ ಪ್ರಜೆಗಳ ತೀರ್ಪನ್ನು ಕೇಳಲೋಸುಗ, ಅವರ ಮುಂದೆಯೇ ಬಂದಿಯಾಗಿ ನಿಂತಿದ್ದಾಗ, ಕ್ಲಿಯೋಮಿನಸ್ ಮತ್ತು ಡಯೋನ್ ಸಭೆಗೆ ಪ್ರವೇಶಿಸಿ ಮೊಹರು ಮಾಡಲ್ಪಟ್ಟಿದ್ದ ಆಕಾಶವಾಣಿಯ ಮಾರುತ್ತರವನ್ನು ತಂದೊಪ್ಪಿಸಿದರು. ಮೊಹರನ್ನೊಡೆದು ಆಕಾಶವಾಣಿಯ ಮಾತುಗಳನ್ನು ಎಲ್ಲರಿಗೂ ಕೇಳುವಂತೆ ಓದಲು ಲಿಯೋಟೀಸ್ ಆಜ್ಞಾಪಿಸಿದನು. ಆ ಮಾತುಗಳ ಹೀಗಿದ್ದುವು :—**'ಹರ್ಮಿಯೋನ್ ನಿಷ್ಕಳಂಕಿನಿ ; ಪಾಲಿಕ್ಸಿನಸ್ ನಿರ್ದೋಷಿ, ಕೆಮಿಲ್ಲೋ ಸತ್ಯನಿಷ್ಠ ಪ್ರಜೆ, ಲಿಯೋಟೀಸ್ ಅಸೂಯಾಗ್ರಸ್ತನಾದ ಕ್ರೂರಿ; ಅಲ್ಲದೆ ಈಗ ನಷ್ಟವಾಗಿರುವುದನ್ನು ಪುನಃ ಹೊಂದದಿದ್ದಲ್ಲಿ ರಾಜನಿಗೆ ಉತ್ತರಾಧಿಕಾರಿಯಿಲ್ಲದಾಗುವುದು."**

ರಾಜನು ಆಕಾಶವಾಣಿಯ ಮಾತುಗಳಿಗೆ ಯಾವ ಬೆಲೆಯನ್ನೂ ಕೊಡದೆ ಹೋದನು. ಅದು ರಾಣಿಯ ಮಿತ್ರರು ಸೃಷ್ಟಿಸಿದಂತಹ ಕೃತ್ರಿಮವೆಂದು ನುಡಿದು, ರಾಣಿಯ ವಿಚಾರಣೆಯನ್ನು ಮುಂದುವರಿಸಲು ನ್ಯಾಯಾಧೀಶನಿಗೆ ಆಜ್ಞೆ ಇತ್ತನು. ಆದರೆ, ಲಿಯೋಟೀಸ್ ಮಾತನಾಡುತ್ತಿದ್ದಂತೆಯೇ, ಯಾವನೋ ಪ್ರವೇಶಿಸಿ, ರಾಜಕುವರ ಮೇಮಿಲಿಯಸ್ ತನ್ನ ತಾಯಿ ಮರಣ

ದಂಡನೆಗೆ ಗುರಿಯಾಗುವಳೆಂಬುದನ್ನು ಕೇಳಿ, ದುಃಖ ಅಪಮಾನಗಳಿಂದ ಖತಿಗೊಂಡು ಹಠಾತ್ತನೆ ಮೃತನಾದನೆಂದು ತಿಳಿಸಿದನು.

ಹರ್ಮಿಯೋನ್, ತನ್ನ ದೌರ್ಭಾಗ್ಯದ ಸಲುವಾಗಿನ ಕೊರಗಿನಿಂದಲೇ ಪ್ರಾಣ ಕಳೆದುಕೊಂಡ ಆ ಅಕ್ಕರೆಯ ಮುದ್ದು ಮಗುವಿನ ಸಾವಿನ ಸುದ್ದಿಯನ್ನು ಕೇಳಿ, ಜ್ಞಾನತಪ್ಪಿ ಕೆಳಗೆಬಿದ್ದಳು. ಈ ಸುದ್ದಿಯಿಂದ ಲಿಯೋರ್ಟಿಸ್‌ನ ಕರುಳಿರಿದಂತಾಗಿ, ತನ್ನ ನಿರ್ಭಾಗ್ಯ ರಾಣಿಯ ಮೇಲೂ ಅವನಿಗೆ ಕನಿಕರ ವುಂಟಾಯಿತು. ಅವನು ಪಾಲಿನಾಳನ್ನೂ, ರಾಣಿಯ ಇತರ ಸಖಿಯರನ್ನೂ ಕರೆದು, ಅವಳನ್ನು ಬೇರೆಡೆಗೊಯ್ದು ಎಚ್ಚರಗೊಳಿಸುವ ಪ್ರಯತ್ನ ನಡೆಸಲು ಆಜ್ಞಾಪಿಸಿದನು. ಸ್ವಲ್ಪ ಹೊತ್ತಿನಲ್ಲೇ ಪಾಲಿನಾ ಹಿಂತಿರುಗಿ ಬಂದು ಹರ್ಮಿಯೋನ್ ಮರಣ ಹೊಂದಿದಳೆಂದು ತಿಳಿಸಿದಳು.

ರಾಣಿಯ ಸಾವಿನ ಸುದ್ದಿ ಕಿವಿಗೆ ಬಿದ್ದೊಡನೆ, ಲಿಯೋರ್ಟಿಸ್ ಅವಳ ಮೇಲಿನ ತನ್ನ ಕ್ರೌರ್ಯಕ್ಕಾಗಿ ಪಶ್ಚಾತ್ತಾಪಪಟ್ಟನು. ಹರ್ಮಿಯೋನಾಳಿಗಾದ ಹೃದಯಾಘಾತಕ್ಕೆ ತನ್ನ ಕ್ರೂರವರ್ತನೆಯೇ ಕಾರಣವೆಂದವನು ಅರಿತಾಗ ಅವಳು ನಿರಪರಾಧಿನಿ ಎಂಬುದರಲ್ಲೂ ಅವನಿಗೆ ನಂಬಿಕೆ ಹುಟ್ಟಿತು. ಆಕಾಶವಾಣಿಯ ಮಾತುಗಳು ಸತ್ಯವೆಂದು ಈಗವನಿಗೆ ತೋರಿಬಂದಿತು. "ಈಗ ನಷ್ಟವಾಗಿರುವುದನ್ನು ಪುನಃ ಹೊಂದದಿದ್ದಲ್ಲಿ" ಎಂಬುದು ತನ್ನ ಚಿಕ್ಕ ಮಗಳಿಗೆ ಅನ್ವಯಿಸುವುದೆಂದು ಅರಿತು, ರಾಜಕುವರ ಮೇಮಿಲಿಯಸ್‌ನ ಮರಣದಿಂದ ತನಗೀಗ ಉತ್ತರಾಧಿಕಾರಿ ಇಲ್ಲದಂತಾಗಿರುವುದೆಂಬುದನ್ನು ಗ್ರಹಿಸಿದನು. ಕಳೆದುಹೋದ ತನ್ನ ಮಗಳನ್ನು ಪುನಃ ಪಡೆಯಲು ಈಗವನು ತನ್ನ ರಾಜ್ಯವನ್ನೇ ಕೊಡಲು ಸಿದ್ಧನಾಗಿದ್ದನು. ಹೀಗೆ ಲಿಯೋರ್ಟಿಸ್ ತೀವ್ರ ಪಶ್ಚಾತ್ತಾಪಕ್ಕೊಳಗಾಗಿ, ಎಷ್ಟೋ ವರುಷಗಳನ್ನು ಶೋಕ, ಪರಿತಾಪಗಳಲ್ಲೇ ಕಳೆದನು.

ಆಂಟಿಗೊನಸ್ ಶಿಶು ರಾಜಪುತ್ರಿಯನ್ನು ಕರೆದೊಯ್ದ ಹಡಗು ಬಿರುಗಾಳಿಗೀಡಾಗಿ, ಅರಸು ಪಾಲಿಕ್ಸಿನಸನ ರಾಜ್ಯವಾದ ಬೊಹಿಮಿಯಾದ ತೀರ ಪ್ರದೇಶಕ್ಕೆ ದೂಡಲ್ಪಟ್ಟಿತು. ಆಂಟಿಗೊನಸ್ ಇಲ್ಲಿ ಇಳಿದು, ಮಗುವನ್ನೂ ಅಲ್ಲಿಯೇ ಬಿಟ್ಟು, ತೆರಳಿದನು.

ಲಿಯೋರ್ಟಿಸ್‌ನಿಗೆ ಅವನ ಮಗಳನ್ನು ಯಾವ ಸ್ಥಳದಲ್ಲಿ ತಾನು ಬಿಟ್ಟು ಬಂದನೆಂಬುದನ್ನು ತಿಳಿಸಲು ಆಂಟಿಗೊನಸ್ ಸಿಸಿಲಿಗೆ ಹಿಂತಿರುಗಲೇ ಇಲ್ಲ–ಏಕೆಂದರೆ ಅವನು ಹಡಗಿಗೆ ಹಿಂತಿರುಗಿ ಹೋಗುತ್ತಿದ್ದಾಗ, ಕಾಡಿನೊಳಗಿನಿಂದ

ಕರಡಿಯೊಂದು ಬಂದು ಅವನನ್ನು ಸಿಗಿದುಹಾಕಿಬಿಟ್ಟಿತು. ರಾಜ ಲಿಯೋಂಟಿಸ್‌ನ ಕ್ರೂರಾಜ್ಞೆಯನ್ನು ಪಾಲಿಸಿದ್ದಕ್ಕೆ ಇದು ಉಚಿತ ಶಿಕ್ಷೆಯೇ ಸರಿ. ಹರ್ಮಿಯೋನ್ ಮಗುವನ್ನು ಲಿಯೋಂಟಸ್‌ನ ಬಳಿ ಕಳುಹುವಾಗ, ಚೆಲುವಾಗಿ ಅದನ್ನು ಸಿಂಗರಿಸಿದ್ದಳು: ಮಗು ಬೆಲೆಬಾಳುವ ವಸ್ತ್ರಗಳನ್ನೂ ಆಭರಣಗಳನ್ನೂ ಧರಿಸಿದ್ದಿತು. ಅಲ್ಲದೆ ಆಂಟಿಗೋನಸ್, ಅದರ ಮೇಲು ವಸ್ತ್ರಕ್ಕೆ ಚುಚ್ಚಿದ್ದ ಒಂದು ಕಾಗದದಲ್ಲಿ ಪರ್ಡಿಟಾ ಎಂಬ ಹೆಸರನ್ನು ಉಲ್ಲೇಖಿಸಿ, ಮಗುವಿನ ಉತ್ತಮ ಕುಲವನ್ನೂ, ಅದರ ದುರ್ದೈವೀ ಭವಿಷ್ಯವನ್ನು ಕುರಿತು ತಿಳಿಸಿದ್ದನು.

ಹೀಗೆ ಪರಿತ್ಯಕ್ತವಾದ ನಿಸ್ಸಹಾಯಕ ಮಗು ಕುರುಬನೊಬ್ಬನಿಗೆ ಸಿಕ್ಕಿತು. ಅವನು ದಯಾಳುವಾಗಿದ್ದುದರಿಂದ ಚಿಕ್ಕ ಪರ್ಡಿಟಾಳನ್ನು ಮನೆಗೊಯ್ದು ಹೆಂಡತಿಗೊಪ್ಪಿಸಿದನು. ಅವಳು ಮಗುವನ್ನು ಮಮತೆಯಿಂದ ಸಲಹಿದಳು. ಆದರೆ ಬಡತನದ ದೆಸೆಯಿಂದಾಗಿ, ಆ ಕುರುಬನು, ತನಗೆ ದೊರಕಿದ ಅಮೂಲ್ಯವಸ್ತುಗಳನ್ನು ಮರೆಮಾಚಿಡಬೇಕಾಯಿತು. ಆದ್ದರಿಂದ, ತನ್ನ ಐಶ್ವರ್ಯಲಾಭದ ಉಗಮ ಯಾರಿಗೂ ತಿಳಿಯದಂತಿರಲೋಸುಗ, ಅವನು, ದೇಶದ ಆ ಭಾಗವನ್ನು ಬಿಟ್ಟು ಹೊರಟು, ಪರ್ಡಿಟಾಳ ಆಭರಣಗಳಲ್ಲಿ ಕೆಲವನ್ನು ಉಪಯೋಗಿಸಿ ಕುರಿಮಂದೆಗಳನ್ನು ಕೊಂಡು ಧನಿಕನಾದನು. ಅವನು ಪರ್ಡಿಟಾಳನ್ನು ತನ್ನ ಸ್ವಂತ ಮಗುವಿನಂತೆಯೇ ಬೆಳಸಿದ್ದರಿಂದ, ಅವಳಿಗೆ ತಾನು ಕುರುಬನ ಮಗಳಲ್ಲವೆ ಬೇರೆಯವಳೆಂದು ತಿಳಿಯಲವಕಾಶವಾಗಲೇ ಇಲ್ಲ.

ಚಿಕ್ಕ ಪರ್ಡಿಟಾ ಬೆಳೆದು ಸುಂದರ ಕನ್ಯೆಯಾದಳು. ಕುರುಬನ ಮಗಳೊಬ್ಬಳಿಗೆ ದೊರೆಯುಬಹುದಾದ ವಿದ್ಯಾಜ್ಞಾನಕ್ಕಿಂತ ಹೆಚ್ಚಿನದನು ಅವಳು ಪಡೆದಿರಲಿಲ್ಲ. ಅದರೂ ಸಹ, ರಾಜವಂಶದ ತಾಯಿಯಿಂದ ಆರ್ಜಿತವಾದ ಸಹಜ ಲಾವಣ್ಯವೇ ಅವಳ ಅಶಿಕ್ಷಿತ ಮನದ ಮೇಲೆ ಪ್ರತಿಭೆ ಬೀರಿ, ಕೇವಲ ಅವಳ ನಡವಳಿಕೆಯಿಂದ ತನ್ನ ತಂದೆಯ ಆಸ್ಥಾನದಲ್ಲಿ ಅವಳು ಬೆಳೆದವಳಲ್ಲವೆಂಬುದನ್ನು ಗೊತ್ತುಹಚ್ಚಲು ಅಸಾಧ್ಯವಾಗಿದ್ದಿತು.

ಬೊಹಿಮಿಯಾದ ದೊರೆ ಪಾಲಿಕ್ಸಿನಸನಿಗೆ ಫ್ಲೊರೈಸಲ್ ಎಂಬ ಹೆಸರಿನ ಒಬ್ಬನೇ ಮಗನಿದ್ದನು. ಈ ರಾಜಕುಮಾರನು, ಕುರುಬನ ನಿವಾಸದ ಬಳಿ ಬೇಟೆಯಾಡುತ್ತಿದ್ದಾಗ ಆ ವೃದ್ಧನ ಪ್ರತೀತ ಪುತ್ರಿಯನ್ನು ಕಂಡನು. ಪರ್ಡಿಟಾಳ ಸೌಂದರ್ಯ ವಿನಯಗಳೂ, ರಾಜ್ಞೀಯೋಗ್ಯವಾದ ನಡೆವಳಿ

ಕೂ ಅವನು ಆ ಕೂಡಲೇ ಅವಳಲ್ಲಿ ಅನುರಕ್ತನಾಗುವಂತೆ ಮಾಡಿದವು. ಡೊರಿಕ್ಲಿಸ್ ಎಂಬ ಹೆಸರಿನಿಂದ, ಸ್ಥಳೀಯನಾದೊಬ್ಬ ಗಣ್ಯಪುರುಷನಂತೆ ವೇಷ ಮರೆಸಿಕೊಂಡು ಅವನು ವೃದ್ಧ ಕುರುಬನ ಮನೆಗೆ ಆಗಾಗ ಭೇಟಿ ಕೊಡತೊಡಗಿದನು.

ಫ್ಲೋರೈಸಲ್, ರಾಜಾಸ್ಥಾನದಿಂದ ಪದೇಪದೇ ಕಣ್ಣು ತಪ್ಪಿಸಿಹೋಗುತ್ತಿದ್ದುದು ಪಾಲಿಕ್ಸಿನಸನ ಗಾಬರಿಗೆ ಕಾರಣವಾಯಿತು. ಅವನು ಮಗನನ್ನು ಹಿಂಬಾಲಿಸಿ ಪರೀಕ್ಷಿಸಲು ಜನರನ್ನು ನಿಯೋಜಿಸಿ, ಚೆಲುವೆಯಾದ ಕುರುಬನ ಮಗಳಲ್ಲಿನ ಅವನ ಅನುರಾಗವನ್ನು ಅರಿತುಕೊಂಡನು.

ನಂತರ ಪಾಲಿಕ್ಸಿನಸ್, ಲಿಯೋನ್‌ಟೆಸ್‌ನಿಂದ ತನ್ನ ಪ್ರಾಣರಕ್ಷಣೆ ಮಾಡಿದ್ದ ನಿಷ್ಠ ಕೆಮಿಲ್ಲೋನನ್ನು ಕರೆದು, ತನ್ನೊಂದಿಗೇ ಪರ್ಡಿಟಾಳ ಪ್ರತೀತ ತಂದೆಯ ಮನೆಗೆ ಬರಲು ಹೇಳಿದನು.

ಪಾಲಿಕ್ಸಿನಸ್ ಮತ್ತು ಕೆಮಿಲ್ಲೋ, ವೇಷ ಮರೆಸಿಕೊಂಡು, ಕುರುಬನ ನಿವಾಸದಲ್ಲಿ ಉಣ್ಣೆ ಕತ್ತರಿಸುವ ಹಬ್ಬವನ್ನು ಆಚರಿಸುತ್ತಿದ್ದ ಸಮಯಕ್ಕೆ ಸರಿಯಾಗಿ ಬಂದು ಸೇರಿದರು. ಅಲ್ಲಿಗವರು ಆಗಂತುಕರಾಗಿದ್ದರೂ ಸಹ, ಆ ಹಬ್ಬದಲ್ಲಿ ಪ್ರತಿಯೊಬ್ಬ ಅತಿಥಿಗೂ ಸುಸ್ವಾಗತವಿದ್ದುದರಿಂದ ಒಳ ಬಂದು ಹಬ್ಬದಲ್ಲಿ ಭಾಗಿಗಳಾಗಲು ಅವರೂ ಆಹ್ವಾನಿತರಾದರು.

ಅಲ್ಲಿ ಬರಿಯ ಆನಂದ, ಉಲ್ಲಾಸಗಳೇ ತುಂಬಿ ತುಳುಕಾಡುತ್ತಿದ್ದವು. ದೊಡ್ಡ ದೊಡ್ಡ ಎಡೆಗಳನ್ನು ಹಾಕಿದ್ದು, ಗ್ರಾಮ್ಯಭೋಜನಕ್ಕೆ ಎಲ್ಲ ಸಿದ್ಧತೆಗಳೂ ನಡೆಯುತ್ತಿದ್ದವು. ಹಲವು ತರುಣ-ತರುಣಿಯರು ಮನೆಯೆದುರಿನ ಹಸುರಿನಲ್ಲಿ ನರ್ತಿಸುತ್ತಿದ್ದರು. ಉಳಿದವರು ಬಾಗಿಲ ಬಳಿಯ ತಿರುಗು ವ್ಯಾಪಾರಿಯಿಂದ ಅಲಂಕಾರದ ಪಟ್ಟಿಗಳನ್ನೂ, ಹಸ್ತಕವಚಗಳನ್ನೂ, ಮತ್ತಿತರ ವಿನೋದ ಸಾಮಗ್ರಿಗಳನ್ನೂ ಕೊಳ್ಳುತ್ತಿದ್ದರು.

ಇತ್ತ ಈ ಬಗೆಯ ಗಡಿಬಿಡಿಯ ಕಾರ್ಯಕ್ರಮ ನಡೆಯುತ್ತಿದ್ದಾಗ, ಫ್ಲೋರೈಸಲ್ ಮತ್ತು ಪರ್ಡಿಟಾ ಇಬ್ಬರೇ ನಿಶ್ಚಿಂತರಾಗಿ ಏಕಾಂತವಾದೊಂದು ಮೂಲೆಯಲ್ಲಿ ಕುಳಿತಿದ್ದು, ಸುತ್ತಲಿನ ಆಟಪಾಟಗಳಲ್ಲೂ ಮೂಢ ವಿನೋದಾವಳಿಗಳಲ್ಲೂ ಭಾಗಿಗಳಾಗುವ ಇಚ್ಛೆಗಿಂತ ಪರಸ್ಪರ ಸಂಭಾಷಣೆಯಲ್ಲೇ ಹೆಚ್ಚು ಆಸಕ್ತಿವಹಿಸಿದ್ದಂತೆ ತೋರಿತು.

ದೊರೆ, ತನ್ನ ಮಗ ಗುರುತಿಸಲಾಗದಂತೆ ವೇಷ ಮರೆಸಿಕೊಂಡಿದ್ದುದ
೧-೫ ...ವರ ಸಂಭಾಷಣೆಯನ್ನು ಕೇಳಿಸಿಕೊಳ್ಳಲನುಕೂಲಿಸುವಷ್ಟು

ಸಮೀಪಕ್ಕೆ ಮುಂದುವರಿದು ಹೋದನು. ತನ್ನ ಮಗನೊಂದಿಗೆ ಮಾತನಾಡುತ್ತಲಿದ್ದ ಪರ್ಡಿಟಾಳ ಸರಳವಾದರೂ ಮನೋಹರವಾದ ಶೈಲಿ ಪಾಲಿಕ್ಸಿನಸನನ್ನು ಬಹು ಮಟ್ಟಿಗೆ ಚಕಿತಗೊಳಿಸಿತು. ಕೆಮಿಲ್ಲೋ ಬಳಿ ಅವನು—"ಇಷ್ಟು ಚೆಲುವೆಯಾದ ಹೀನವಂಶದ ಕನ್ಯೆಯನ್ನು ನಾನೆಲ್ಲೂ ನೋಡಿಲ್ಲ. ಅವಳು ಏನೇ ಮಾಡಲಿ ಅಥವಾ ಏನೇ ಹೇಳಲಿ, ಅದು ಅವಳ ಪ್ರಸ್ತುತ ಸ್ಥಿತಿಗಿಂತ ಶ್ರೇಷ್ಠತರವಾದುದನ್ನೂ, ಈ ಸ್ಥಳಾನುಗುಣವಾದುದಕ್ಕಿಂತ ಉತ್ತಮವಾದುದನ್ನೂ ವ್ಯಕ್ತಪಡಿಸುತ್ತಿದೆ" ಎಂದನು.

ಕೆಮಿಲ್ಲೋ—"ಸತ್ಯವಾಗಿ, ಅವಳು ಇಲ್ಲಿನ ರಾಣಿಯೇ ಸರಿ" ಎಂದನು.

"ಅಯ್ಯಾ ಮಿತ್ರ, ನಿನ್ನ ಮಗಳೊಂದಿಗೆ ಮಾತನಾಡುತ್ತಿರುವ ಆ ಸುಂದರ ಹಳ್ಳಿಗನಾರು ?" ಎಂದು ರಾಜನು ವೃದ್ಧ ಕುರುಬನನ್ನು ಕೇಳಿದನು. "ಅವನನ್ನು ಡೊರಿಕ್ಲಿಸ್ ಎಂದು ಕರೆಯುತ್ತಾರೆ. ನನ್ನ ಮಗಳನ್ನು ತಾನು ಪ್ರೇಮಿಸುವುದಾಗಿ ಅವನು ಹೇಳುತ್ತಾನೆ. ಸತ್ಯ ಹೇಳುವುದಾದರೆ, ಅವರಿಬ್ಬರಲ್ಲಿ ಯಾರು ಪರಸ್ಪರ ಹೆಚ್ಚು ಪ್ರೇಮಿಸುವರೆಂಬುದನ್ನು ಹೇಳುವುದೇ ಅಸಾಧ್ಯ. ಡೊರಿಕ್ಲಿಸ್ ಅವಳನ್ನು ಪರಿಗ್ರಹಿಸುವುದಾದಲ್ಲಿ, ಅವನು ಕನಸಿನಲ್ಲೂ ಎಣಿಸದಂತಹದನ್ನು ಅವಳವನಿಗೆ ನೀಡುವಳು" ಎಂದನು ಕುರುಬ. ಅವನ ಮಾತಿನ ಉದ್ದಿಶ್ಯ, ಕುರಿಮಂದೆಕೊಂಡ ನಂತರ ತಾನು ಅವಳವಿವಾಹಧನವಾಗಿ ಕೂಡಿಸಿಟ್ಟಿದ್ದ ಪರ್ಡಿಟಾಳ ಆಭರಣಗಳೂ ಅವನನ್ನೇ ಸೇರುವವೆಂಬುದಾಗಿತ್ತು. ನಂತರ ಪಾಲಿಕ್ಸಿನಸ್ ಮಗನನ್ನು ಮಾತನಾಡಿಸುತ್ತಾ "ಇದೇನಯ್ಯಾ, ಯುವಕ, ನಿನ್ನ ಮನಸ್ಸನ್ನು ಈ ಹಬ್ಬದಿಂದ ಬೇರೆಡೆಗೆ ತಿರುಗಿಸುವಂತಹದಾವುದರಿಂದಲೋ ನಿನ್ನ ಹೃದಯ ತುಂಬಿರುವಂತಿದೆ. ನಾನು ಯುವಕನಾಗಿದ್ದಾಗ, ನನ್ನ ನಲ್ಲೆಗೆ ಕಾಣಿಕೆಗಳ ಹೊರೆಯನ್ನೇ ಹೊರೆಸಿ ಕಳುಹಿಸುತ್ತಿದ್ದೆ. ನೀನಾದರೋ ನಿನ್ನವಳಿಗೆ ಏನನ್ನೂ ಕೊಡದೆ ವ್ಯಾಪಾರಿಯನ್ನು ಕಳುಹಿಸಿಬಿಟ್ಟಿರುವೆ " ಎಂದನು.

ರಾಜಪುತ್ರ, ತನ್ನ ತಂದೆಯಾದ ರಾಜನೊಡನೆಯೇ ಸಂಭಾಷಿಸುತ್ತಿರುವೆನೆಂಬುದರ ಅರಿವೇ ಇಲ್ಲದೆ—"ಸ್ವಾಮಿ, ಅವಳು ಅಂತಹ ಕ್ಷುಲ್ಲಕ ವಸ್ತುಗಳಿಗೆ ಬೆಲೆಕೊಡುವುದೇ ಇಲ್ಲ. ಪರ್ಡಿಟಾ ನನ್ನಿಂದ ನಿರೀಕ್ಷಿಸುವ ಕಾಣಿಕೆಗಳೆಲ್ಲ ನನ್ನ ಹೃದಯದಲ್ಲೇ ಭದ್ರವಾಗಿವೆ " ಎಂದುತ್ತರಿಸಿ, ಪರ್ಡಿಟಾಳೆಡೆಗೆ ತಿರುಗಿ "ಕೇಳು, ಪರ್ಡಿಟಾ, ಹಿಂದೊಮ್ಮೆ ಸ್ವತಃ ಪ್ರೇಮಿಯಾಗಿದ್ದರೆಂದು ತೋರುವ ಈ ವೃದ್ಧ ಮಹನೀಯರೆದುರಿನಲ್ಲೇ ಕೇಳು.

ನಾನೇನನ್ನು ಕಂಠೋಕ್ತವಾಗಿ ಹೇಳುವೆನೆಂಬುದನ್ನು ಇವರೂ ಕೇಳಲಿ" ಎಂದು ನುಡಿದು, ಆ ವೃದ್ಧ ಆಗಂತುಕನನ್ನು, ಪರ್ಡಿಟಾಳಿಗೆ ತಾನು ಮಾಡಿ ಕೊಟ್ಟಿದ್ದ ಪವಿತ್ರ ವಿವಾಹದ ಪ್ರತಿಜ್ಞೆಗೆ ಸಾಕ್ಷಿಯಾಗಿರುವಂತೆ ಪ್ರಾರ್ಥಿಸಿ ಪಾಲಿಕ್ಸಿನಸನನ್ನು ಕುರಿತು "ನಮ್ಮ ನಿಶ್ಚಿತಾರ್ಥವನ್ನು ದಯವಿಟ್ಟು ನಿರ್ಣಯಿಸಿ" ಎಂದನು.

"ನಿಮ್ಮ ವಿಚ್ಛೇದವನ್ನು ನಿರ್ಣಯಿಸುತ್ತೇನೆ" ಎಂದು ಹೇಳುತ್ತಾ ರಾಜನು ತನ್ನ ವೇಷವನ್ನು ಕಳಚಿದನು. ಪಾಲಿಕ್ಸಿನಸ್, ನಂತರ, ಆ ದೀನ ವಂಶದ ಕನ್ಯೆಯೊಡನೆ ನಿಶ್ಚಿತಾರ್ಥಮಾಡಿಕೊಳ್ಳುವ ಉದ್ಧಟತನ ತೋರಿದ್ದ ಕ್ಕಾಗಿ ಮಗನನ್ನು ನಿಂದಿಸುತ್ತಾ, ಪರ್ಡಿಟಾಳನ್ನು "ಕುರುಬನ ಚಿಳ್ಳೆ, ಕುರುಬನ ದೋಟಿ" ಮುಂತಾದ ಅವಮರ್ಯಾದೆಯ ಪದಗಳಿಂದ ಕರೆದು ದಲ್ಲದೆ, ಮುಂದೆ ಅವಳೇನಾದರೂ ತನ್ನ ಮಗ ಅವಳನ್ನು ಸಂದರ್ಶಿಸುವಂತೆ ಪ್ರೇರಿಸುವುದಾದರೆ ಅವಳನ್ನೂ ಅವಳ ತಂದೆಯಾದ ಕುರುಬನನ್ನೂ ಮರಣ ದಂಡನೆಗೆ ಗುರಿಮಾಡುವುದಾಗಿ ಬೆದರಿಸಿದನು.

ನಂತರ, ರಾಜನು ಅತಿ ಕ್ರೋಧಾವಿಷ್ಟನಾಗಿ ಅಲ್ಲಿಂದ ಹೊರಟು, ಕೆಮಿಲ್ಲೋಗೆ ರಾಜಪುತ್ರ ಫ್ಲೋರೈಸಲ್‌ನೊಡನೆ ಹಿಂದೆ ಬರುವಂತೆ ಆಜ್ಞಾಪಿಸಿ ದನು.

ರಾಜನು ತೆರಳಿದ ಮೇಲೆ, ಅವನ ಭರ್ತ್ಸನೆಯ ನುಡಿಗಳಿಂದ ಪರ್ಡಿಟಾಳ ರಾಜಯೋಗ್ಯ ಸ್ವಭಾವ ಉದ್ರಿಕ್ತಗೊಂಡು ಅವಳು "ನಮ್ಮೆಲ್ಲ ರನ್ನೂ ಅವನು ಹೀನೈಸಿ ಮಾತನಾಡಿದರೂ, ನನಗೇನೂ ಹೆದರಿಕೆಯಾಗ ಲಿಲ್ಲ. ಒಂದೆರಡು ಬಾರಿಯಂತೂ, ಅವನ ಅರಮನೆಯ ಮೇಲೆ ಪ್ರಕಾಶಿಸುವ ಸೂರ್ಯನೇ ನಮ್ಮ ಕುಟೀರದಿಂದೇನೂ ಮುಖಮರೆಸಿಕೊಳ್ಳದೆ ಎರಡನ್ನೂ ನಿಷ್ಪಕ್ಷಪಾತ ದೃಷ್ಟಿಯಿಂದ ಬೆಳಗಿಸುತ್ತಾನೆಂದು ನಾನವನಿಗೆ ಕಂಠೋಕ್ತವಾಗಿ ಹೇಳಿಬಿಡುವುದರಲ್ಲಿದ್ದೆ" ಎಂದಳು. ನಂತರ ವಿಷಾದದ ಧ್ವನಿಯಲ್ಲಿ–"ಆದರೆ ನಾನೀಗ ಆ ಕನಸಿನಿಂದ ಎಚ್ಚತ್ತಿರುವುದರಿಂದ ಆ ವಿಷಯವಾಗಿ ಗಾಳಿ ಗೋಪುರ ಕಟ್ಟಿ ಪ್ರಯೋಜನವಿಲ್ಲ. ನೀವಿನ್ನು ತೆರಳಿ ಸ್ವಾಮಿ ; ನಾನು ಕುರಿ ಗಳ ಹಾಲನ್ನು ಕರೆದು, ನಂತರ ಅಳಲು ಹೋಗುತ್ತೇನೆ" ಎಂದಳು.

ದಯಾಳು ಕೆಮಿಲ್ಲೋ, ಪರ್ಡಿಟಾಳ ನಡವಳಿಯ ಕೆಚ್ಚಿಗೂ, ಔಚಿ ತ್ಯಕ್ಕೂ ಮಾರುಹೋದನು. ಅಲ್ಲದೆ ರಾಜಪುತ್ರನ ಪ್ರೇಮ, ತಂದೆಯ ಆಜ್ಞಾನುಸಾರ ಪ್ರೇಯಸಿಯನ್ನು ತ್ಯಜಿಸಲಾರದಷ್ಟು ಗಾಢವಾಗಿದ್ದುದನ್ನು

ಕಂಡುಕೊಂಡು, ಅವನು ಆ ಪ್ರೇಮಿಗಳ ಸಮಾಗಮಕ್ಕೆ ಅಲ್ಲದೆ ಬಹುದಿನ ದಿಂದ ತನ್ನ ಮನದಲ್ಲಿ ಮೂಡಿದ್ದ ಮೆಚ್ಚಿನ ಹಂಚಿಕೆಯೊಂದನ್ನು ಪೂರ್ಣ ಗೊಳಿಸುವುದಕ್ಕೂ ಮಾರ್ಗ ಹುಡುಕಿದನು.

ಸಿಸಿಲಿಯ ರಾಜ ಲಿಯೋಂಟಿಸ್ ಈಗ ಪಶ್ಚಾತ್ತಾಪ ಶುದ್ಧನಾಗಿರುವ ನೆಂಬುದು ಕೆಮಿಲ್ಲೋಗೆ ಹಿಂದೆಯೇ ತಿಳಿದುಬಂದಿತ್ತು. ಅಲ್ಲದೆ ಕೆಮಿಲ್ಲೋ ಈಗ ರಾಜ ಪಾಲಿಕ್ಸಿನಸ್‌ನ ಅಚ್ಚುಮೆಚ್ಚಿನ ಮಿತ್ರನಾಗಿದ್ದರೂ ಸಹ, ಸಹಜ ವಾಗಿಯೇ ತನ್ನ ಹಿಂದಿನ ಪ್ರಭುವನ್ನೂ, ಮಾತೃಭೂಮಿಯನ್ನೂ ನೋಡಲು ಇಚ್ಛೆಪಡುತ್ತಿದ್ದನು. ಆದ್ದರಿಂದ ಅವನು, ಫ್ಲೋರೈಸಲ್ ಮತ್ತು ಪೆರ್ಡಿಟಾ ತನ್ನೊಂದಿಗೆ ಸಿಸಿಲಿಯ ರಾಜಾಸ್ಥಾನಕ್ಕೆ ಬರಬೇಕೆಂದೂ, ಅಲ್ಲಿ ತನ್ನ ಮೂಲಕ ರಕ್ಷಿಸಲು ಲಿಯೋಂಟಿಸ್‌ನನ್ನು ತಾನು ಒಪ್ಪಿಸುವುದಾಗಿಯೂ ಸೂಚಿಸಿದನು.

ಈ ಸೂಚನೆಯನ್ನು ಅವರಿಬ್ಬರೂ ಸಂತೋಷದಿಂದ ಅಂಗೀಕರಿಸಿದರು. ಕೆಮಿಲ್ಲೋ ಪಲಾಯನಕ್ಕೆ ಎಲ್ಲ ಸಿದ್ಧತೆಗಳನ್ನೂ ನಡೆಸಿದ್ದಲ್ಲದೆ, ವೃದ್ಧ ಕುರುಬ ನನ್ನೂ ತಮ್ಮೊಂದಿಗೆ ಕರೆದೊಯ್ಯಲು ಒಪ್ಪಿದನು. ಕುರುಬನು ಪರ್ಡಿಟಾಳ ಉಳಿದ ಆಭರಣ ಮತ್ತು ಶೈಶವ್ಯದ ವಸ್ತ್ರಗಳನ್ನೂ, ಅವಳ ಮೇಲುವಸ್ತ್ರಕ್ಕೆ ಚುಚ್ಚಲ್ಪಟ್ಟಿದ್ದ ಕಾಗದವನ್ನೂ ತನ್ನೊಂದಿಗೆ ತೆಗೆದುಕೊಂಡನು.

ಸುರಕ್ಷಿತ ಪ್ರಯಾಣದನಂತರ ಫ್ಲೋರೈಸಲ್, ಪೆರ್ಡಿಟಾ, ಕೆಮಿಲ್ಲೋ ಮತ್ತು ಕುರುಬ ಈ ನಾಲ್ವರೂ ಲಿಯೋಂಟಿಸ್‌ನ ಆಸ್ಥಾನಕ್ಕೆ ಸೌಖ್ಯವಾಗಿ ಬಂದು ಸೇರಿದರು. ಮೃತಳಾದ ತನ್ನ ಹರ್ಮಿಯೋನ್, ಕಳೆದುಕೊಂಡ ತನ್ನ ಮಗು ಇಬ್ಬರಿಗಾಗಿಯೂ ಇನ್ನೂ ಶೋಕಿಸುತ್ತಿದ್ದ ಲಿಯೋಂಟಿಸ್ ಕೆಮಿಲ್ಲೋನನ್ನು ಎಷ್ಟೋ ನಲ್ಮೆಯಿಂದ ಸತ್ಕರಿಸಿ, ರಾಜಪುತ್ರ ಫ್ಲೋರೈಸಲ್ ನಿಗೆ ಹಾರ್ದಿಕಸ್ವಾಗತ ನೀಡಿದನು. ಆದರೆ ಫ್ಲೋರೈಸಲ್ ತನ್ನ ರಾಣಿ ಎಂಬು ದಾಗಿ ಹೇಳಿಕೊಂಡು ಪರಿಚಯಮಾಡಿಸಿದ ಪರ್ಡಿಟಾ ಲಿಯೋಂಟಿಸ್‌ನ ಮನ ಸ್ಸನ್ನು ಪೂರ್ಣವಾಗಿ ಸೆಳೆದಳು. ಅವಳಿಗೂ ಗತಿಸಿದ ತನ್ನ ರಾಣಿ ಹರ್ಮಿ ಯೋನಳಿಗೂ ಇದ್ದ ಹೋಲಿಕೆಯಿಂದ ಅವನ ಶೋಕ ನೂರ್ಮಡಿಯಾಗಿ ಹೊರಹೊಮ್ಮಿತು. ತಾನವಳನ್ನು ಅಷ್ಟು ಕ್ರೌರ್ಯದಿಂದ ನಾಶಗೊಳಿಸದಿದ್ದಲ್ಲಿ ತನ್ನ ಮಗಳೂ ಇಷ್ಟೇ ಚೆಲುವೆಯಾದ ಕನ್ಯೆಯಾಗಿರಬಹುದಿತ್ತೆಂದು ಅವನು ಯೋಚಿಸಿ ಹಲುಬಿದನು. ಫ್ಲೋರೈಸಲ್‌ನನ್ನೂ ಕುರಿತು ಅವನು—"ಇದಲ್ಲದೆ ನಾನು ವೀರನಾದ ನಿನ್ನ ತಂದೆಯ ಸಹವಾಸ, ಸ್ನೇಹಗಳನ್ನೂ ಕಳೆದು

ಕೊಂಡೆ. ಈಗವನನ್ನು ಪುನಃ ನೋಡಲು ನನ್ನ ಪ್ರಾಣಕ್ಕಿಂತ ಹೆಚ್ಚು ಅಪೇಕ್ಷಿಸುತ್ತಿದ್ದೇನೆ? ಎಂದು ನುಡಿದನು.

ರಾಜನು ಪೆರ್ಡಿಟಾಳನ್ನು ಅಷ್ಟೊಂದು ಆಸಕ್ತಿಯಿಂದ ಗಮನಿಸಿದ್ದನ್ನು ವೃದ್ಧ ಕುರುಬನು ನೋಡಿದನು. ಅಲ್ಲದೆ ಅವನು ಮಗಳೊಬ್ಬಳನ್ನು ಎಳೆತನದಲ್ಲಿಯೇ ತ್ಯಜಿಸಿ ಕಳೆದುಕೊಂಡಿದ್ದನೆಂಬುದನ್ನು ಕೇಳಿದನು. ಇದರಿಂದ ಕುರುಬನು, ತಾನು ಚಿಕ್ಕ ಪರ್ಡಿಟಾಳನ್ನು ಪಡೆದ ಸಮಯ, ಅವಳು ತ್ಯಜಿಸಲ್ಪಟ್ಟಿದ್ದ ಬಗೆ ಅಲ್ಲದೆ ಅವಳ ಮೇಲಿದ್ದ ಆಭರಣಗಳೇ ಮುಂತಾದ ಉತ್ತಮ ವಂಶದ ಚಿಹ್ನೆಗಳನ್ನು ನೆನಪುಮಾಡಿಕೊಂಡು ಮನದಲ್ಲೇ ಗುಣಾಕಾರಮಾಡ ತೊಡಗಿದನು. ಇವೆಲ್ಲದರಿಂದ ಅವನು ಕೊನೆಗೆ ಪರ್ಡಿಟಾ ರಾಜನ ಕಳೆದು ಹೋದ ಮಗಳೇ ಅಲ್ಲದೆ ಬೇರೆಯಲ್ಲವೆಂದು ನಿರ್ಧರಿಸಬೇಕಾಯಿತು.

ಕುರುಬನು ರಾಜನ ಬಳಿ, ತಾನು ಮಗುವನ್ನು ಪಡೆದ ಬಗೆಯನ್ನೂ, ಅಲ್ಲದೆ ತಾನೇ ನೋಡಿದಂತೆ ಕರಡಿಯಿಂದ ಸಂಭವಿಸಿದ ಆಂಟಿಗೊನಸ್‌ನ ಮರಣ ವೃತ್ತಾಂತವನ್ನೂ ವಿವರಿಸಿ ಹೇಳಿದಾಗ, ಫ್ಲೋರೈಸಲ್, ಪೆರ್ಡಿಟಾ, ಕೆಮಿಲ್ಲೋ ಮತ್ತು ಸ್ವಾಮಿನಿಷ್ಠೆ ಪಾಲಿನಾ ಸಮ್ಮುಖದಲ್ಲಿಯೇ ಇದ್ದರು. ಕುರುಬನು ತೋರಿಸಿದ ಅಮೂಲ್ಯವಸ್ತ್ರದಲ್ಲಿ ಹರ್ಮಿಯೋನ್ ಮಗುವನ್ನು ಸುತ್ತಿದ್ದಳೆಂದೂ, ಅವನು ತೋರಿಸಿದ ಆಭರಣಗಳನ್ನು ಪರ್ಡಿಟಾಳ ಕೊರಳಿಗೆ ಅವಳು ಕಟ್ಟಿದ್ದಳೆಂದೂ ಪಾಲಿನಾ ಗುರುತಿಸಿದಳು. ಅಲ್ಲದೆ, ಕುರುಬನು ಪಾಲಿನಾ ತನ್ನ ಪತಿಯದೆಂದು ಗುರುತಿಸಿದ ಬರವಣಿಗೆಯನ್ನುಳ್ಳ ಕಾಗದವನ್ನೂ ಕೊಟ್ಟನು. ಪರ್ಡಿಟಾ ಲಿಯೋನ್‌ಟೆಸ್‌ನ ಮಗಳೆಂಬುದು ನಿಸ್ಸಂದೇಹವಾಗಿ ದೃಢಪಟ್ಟಿತು. ಆದರೆ, ಪಾಪ! ಇತ್ತ ತನ್ನ ಪತಿಯ ಮೃತ್ಯುವಿನಿಂದಾದ ದುಃಖ, ಅತ್ತ ಆಕಾಶವಾಣಿಯ ಮಾತು ನಿಜವಾಗಿ ಕಳೆದುಹೋಗಿದ್ದ ರಾಜಪುತ್ರಿ ಪುನಃ ದೊರಕಿದಳೆಂಬ ಹರ್ಷ, ಇವುಗಳ ನಡುವೆ ಸಿಕ್ಕಿದ ಪಾಲಿನಾಳ ಅವಸ್ಥೆ ಏನಾಗಿರಬೇಕು? ಪರ್ಡಿಟಾ ತನ್ನ ಮಗಳೆಂಬುದನ್ನು ಲಿಯೋಂಟೆಸ್ ಕೇಳಿದಾಗ, ಅವನು ತನ್ನೀಮಗಳನ್ನು ನೋಡಲು ಹರ್ಮಿಯೋನ್ ಬದುಕಿಲ್ಲವಲ್ಲಾ ಎಂಬ ಮಹಾದುಃಖಕ್ಕೊಳಗಾದನು. ಬಹುಹೊತ್ತು ಅವನು “ಅಯ್ಯೋ, ನಿನ್ನ ತಾಯಿ! ನಿನ್ನ ತಾಯಿ!” ಎಂದು ಉದ್ಗರಿಸುವ ವಿನಃ ಬೇರೇನನ್ನೂ ಹೇಳಲಾರದಾದನು.

ಈ ಹರ್ಷ ದುಃಖಗಳ ಸಮ್ಮಿಶ್ರ ದೃಶ್ಯದ ಮಧ್ಯೆ ಪಾಲಿನಾ ಪ್ರವೇಶ ಮಾಡಿದಳು. ಅವಳು, ತನ್ನ ಮನೆಯಲ್ಲಿ, ಆದೇ ತಾನೇ ಇಟಲಿಯ ಮಹಾ

ಶಿಲ್ಪಿ ಜೂಲಿಯೋ ರೊಮಾನೋನಿಂದ ನಿರ್ಮಿತವಾಗಿದ್ದ ಹರ್ಮಿಯೋನ್‌ಳ ಪ್ರತಿಮೆಯೊಂದಿದ್ದು, ಅದನ್ನು ರಾಜನು ಅವಳ ಮನೆಗೆ ಬಂದು ನೋಡುವುದಾ ನಲ್ಲಿ ಸ್ವತಃ ಹರ್ಮಿಯೋನಳೇ ಎಂದವನು ಪ್ರಾಯಶಃ ಭ್ರಮಿಸಬಹು ದಾದಷ್ಟು ಮಟ್ಟಿಗೆ ರಾಣಿಯನ್ನು ಹೋಲುವುದೆಂದು ತಿಳಿಸಿದಳು. ಕೂಡಲೇ ಎಲ್ಲರೂ ಅಲ್ಲಿಗೆ ಹೊರಡಲುದ್ಯುಕ್ತರಾದರು. ರಾಜನು ತನ್ನ ಹರ್ಮಿಯೋ ನಳ ಸಾದೃಶ್ಯವನ್ನು ನೋಡಲೂ, ಪರ್ಡಿಟಾ, ತಾನೆಂದೂ ನೋಡಿಯೇ ಇರದ ತಾಯಿ ಹೇಗಿರುವಳೆಂಬುದನ್ನು ನೋಡಲು ಅತಿ ಕಾತುರರಾಗಿದ್ದರು.

ಪಾಲಿನಾ ಈ ಪ್ರಸಿದ್ಧ ವಿಗ್ರಹವನ್ನು ಮರೆಮಾಡಿದ್ದ ಪರದೆಯನ್ನು ಪಕ್ಕಕ್ಕೆ ಸರಿಸಿದಳು. ವಿಗ್ರಹ ಹರ್ಮಿಯೋನಳನ್ನು ಎಷ್ಟರ ಮಟ್ಟಿಗೆ ಹೋಲು ತ್ತಿದ್ದಿತೆಂದರೆ ಆ ದೃಶ್ಯದಿಂದ ರಾಜನ ದುಃಖವೆಲ್ಲಾ ಪುನರಾವಿರ್ಭವಿಸಿತು. ಬಹು ಹೊತ್ತಿನವರೆಗೂ ಆತ ಏನನ್ನೂ ಹೇಳಲಾರದೆ, ಚಲಿಸಲೂ ಆಗದೆ, ಹೋದನು.

ಪಾಲಿನಾ "ನಿಮ್ಮ ಮೌನವನ್ನು ನಾನು ಮೆಚ್ಚುತ್ತೇನೆ, ಪ್ರಭು, ನಿಮ್ಮ ಕೌತುಕವನ್ನದು ಚೆನ್ನಾಗಿ ವ್ಯಕ್ತಪಡಿಸುತ್ತದೆ. ಈ ಪ್ರತಿಮೆ ನಿಮ್ಮ ರಾಣಿ ಯಂತೆಯೇ ಇಲ್ಲವೇನು ?" ಎಂದಳು. ಬಹಳ ಹೊತ್ತು ತಡೆದು ರಾಜ "ಓ ! ಹೀಗೆಯೇ, ಇದೇ ಗಂಭೀರ ಭಾವದಲ್ಲಿಯೇ, ನಾನವಳನ್ನು ಮೊದಲ ಬಾರಿಗೆ ನೋಡಿ ಪ್ರೇಮಿಸಿದಾಗ ಅವಳು ನಿಂತಿದ್ದಳು. ಆದರೂ, ಪಾಲಿನಾ, ಹರ್ಮಿ ಯೋನಳಿಗೆ ಈ ವಿಗ್ರಹದಲ್ಲಿ ಕಾಣುವಷ್ಟು ವಯಸ್ಸಾಗಿರಲಿಲ್ಲ" ಎಂದನು. ಪಾಲಿನಾ ಉತ್ತರಿಸಿದಳು–"ಅದೇ ಈ ಶಿಲ್ಪಿಯ ಚಮತ್ಕಾರ. ಹರ್ಮಿಯೋನ್ ಈಗ ಬದುಕಿದ್ದಿದ್ದರೆ ಹೇಗಿರಬಹುದಾಗಿತ್ತೋ ಹಾಗೆಯೇ ಈ ವಿಗ್ರಹವನ್ನು ಮಾಡಿದ್ದಾನೆ. ಆದರೆ ನಾನೀಗ ಪರದೆಯನ್ನು ಸರಿಸುತ್ತೇನೆ, ಪ್ರಭು, ಇಲ್ಲ ದಿದ್ದರೆ ಸ್ವಲ್ಪ ಹೊತ್ತಿನಲ್ಲೇ, ಅದು ಚಲಿಸುತ್ತಿದೆಯೆಂದು ನೀವು ಭಾವಿಸ ಬಹುದು"

ರಾಜನು "ಬೇಡ, ಬೇಡ, ಪರದೆಯನ್ನು ಸರಿಸದಿರು : ಇದೇನಿದು ; ನೋಡು, ನೋಡು, ಕೆಮಿಲ್ಲೋ ! ಓ, ಅದು ಉಸಿರಾಡುತ್ತಿದೆಯೆಂದನಿಸು ವುದಿಲ್ಲವೆ ನಿನಗೆ ? ಅವಳ ಕಣ್ಣುಗಳೂ ಸಹ ಚಲಿಸುವಂತಿದೆ" ಎಂದನು– ನಾನು ಪರದೆಯನ್ನು ಸರಿಸಲೇ ಬೇಕು, ಪ್ರಭು, ನೀವೆಲ್ಲೋ ಪರವಶರಾಗಿ ದ್ದೀರಿ, ಇನ್ನೇನು, ಪ್ರತಿಮೆ ಬದುಕಿದೆಯೆಂದೇ ಭ್ರಮಿತರಾಗುವಿರಷ್ಟೆ" ಎಂದಳು ಪಾಲಿನಾ–"ಓ, ಪಾಲಿನಾ, ನಾನೀ ಇಪ್ಪತ್ತು ವರ್ಷಗಳೂ ಒಟ್ಟಿಗೆ

ಆ ರೀತಿ ಭಾವಿಸುವಂತಾಗಲಿ. ಆದರೂ, ಅವಳೆಡೆಯಿಂದ ಉಸಿರು ಹಾಯ್ದು ಬರುತ್ತಿದೆಯೆಂದೇ ನನಗೆನಿಸುತ್ತದೆ. ಯಾವ ಅದ್ಭುತ ಶಿಲ್ಪ ಸಾಧನವಾದರೂ ಉಸಿರಾಟವನ್ನು ನಿರ್ಮಿಸಬಲ್ಲದೇನು ? ನನ್ನನ್ನು ನೋಡಿ ಯಾರೂ ಅಣಕ ವಾಡದಿರಲಿ, ನಾನವಳ ಬಳಿ ಸಾರಿ ಹೋಗಿ ಸ್ಪರ್ಶಿಸಲೇ ಬೇಕು" ಎಂದನು. "ಬೇಡ ಬೇಡ, ಪ್ರಭು, ನಿಲ್ಲಿ; ಅವಳ ತುಟಿಗಳಲ್ಲಿನ ಕೆಂಪು ಇನ್ನೂ ತೇವ ವಾಗಿಯೇ ಇದೆ; ನೀವು ಬಣ್ಣವನ್ನು ಅಂಟಿಸಿಕೊಳ್ಳುವಿರಷ್ಟೆ. ಪರದೆಯನ್ನು ಸರಿಸಲೇ ?" ಎಂದಳು 'ಪಾಲಿನಾ. ಲಿಯಾಂಟಸ್-ಬೇಡ, ಈ ಇಪ್ಪತ್ತೂ ವರ್ಷಗಳೂ ಅದು ಸಾಧ್ಯವಿಲ್ಲ" ಎಂದನು.

ಇಷ್ಟುಹೊತ್ತು ಮೊಳಕಾಲೂರಿ ಕುಳಿತು, ಎಣೆಯಿಲ್ಲದ ತನ್ನ ತಾಯಿಯ ಪ್ರತಿಮೆಯನ್ನು ಮಾತಿಲ್ಲದ ಮೆಚ್ಚುಗೆಯೊಂದಿಗೆ ವೀಕ್ಷಿಸುತ್ತಿದ್ದಳು ಪರ್ಡಿಟಾ. ಈಗವಳು "ನಾನೂ ಸಹ ಅಲ್ಲಿಯವರೆಗೂ ನನ್ನ ಪ್ರೀತಿಯ ತಾಯಿಯನ್ನೇ ನೋಡುತ್ತಾ ಇದ್ದುಬಿಡುವೆ" ಎಂದಳು.

ಪಾಲಿನಾ " ಈ ಭ್ರಮೆಯನ್ನು ತೊರೆದು, ಪರದೆಯನ್ನು ಸರಿಸಲು ನನಗೆ ಅಪ್ಪಣೆಕೊಡಿ ! ಇಲ್ಲವೇ ಇನ್ನೂ ಮಿಗಿಲಾದ ಕೌತುಕವನ್ನು ನೋಡಲು ಸಿದ್ಧರಾಗಿ ನಾನು ನಿಜವಾಗಿಯೂ ಈ ವಿಗ್ರಹ ಚಲಿಸುವಂತೆ ಮಾಡಬಲ್ಲೆ- ಅಷ್ಟೇ ಅಲ್ಲ, ಅದು ಆ ವೇದಿಕೆಯಿಂದ ಇಳಿದುಬಂದು ನಿಮ್ಮ ಕೈ ಹಿಡಿದು ಕೊಳ್ಳುವಂತೆ ಮಾಡಬಲ್ಲೆ. ಆದರೆ ಆಗ ನೀವು, ನಾನಾವುದೋ ದುಷ್ಟ ಮಂತ್ರಶಕ್ತಿಯ ಪ್ರಯೋಗ ಮಾಡುತ್ತಿರುವೆಂಬುದಾಗಿ ನಾನೆಂದಿಗೂ ಒಪ್ಪ ಲಾರದಂತಹ ಆಪಾದನೆ ಮಾಡುವಿರಿ " ಎಂದಳು.

ರಾಜನು ಬಹು ಚಕಿತನಾಗಿ " ನೀನವಳಿಂದ ಏನನ್ನು ಮಾಡಿಸಿದರೂ ನೋಡಿ ತೃಪ್ತಿಪಡಿಸಲು ಸಿದ್ಧನಿದ್ದೇನೆ. ನೀನೇನನ್ನು ಅವಳಿಂದ ಹೇಳಿಸುವೆಯೋ ಅಷ್ಟನ್ನೇ ಕೇಳಿ ತೃಪ್ತನಾಗುತ್ತೇನೆ. ಏಕೆಂದರೆ, ಚಲಿಸುವಂತೆ ಮಾಡಿದ ಮೇಲೆ ಮಾತನಾಡಿಸುವುದಿನ್ನೂ ಸುಲಭ" ಎಂದನು.

ನಂತರ ಪಾಲಿನಾ, ತಾನು ಈ ಉದ್ದೇಶ್ಯಕ್ಕಾಗಿಯೇ ಏರ್ಪಡಿಸಿದ್ದ ಮಂದಗತಿಯ ಗಂಭೀರ ಗೀತವೊಂದನ್ನು ನುಡಿಸಲು ಆಜ್ಞೆಯಿತ್ತಳು. ಆಗ, ಅಲ್ಲಿದ್ದವರೆಲ್ಲರಿಗೂ ವಿಸ್ಮಯವಾಗುವ ರೀತಿಯಲ್ಲಿ, ಆ ವಿಗ್ರಹವು ವೇದಿಕೆಯ ಮೇಲಿನಿಂದ ಇಳಿದುಬಂದಿತು ; ಬಾಹುಗಳಿಂದ ಲಿಯೋಂಟೆಸ್‌ನ ಕೊರಳನ್ನು ಆಲಂಗಿಸಿತು. ಅಲ್ಲದೆ ಅದು ಮಾತನಾಡಲೂ ಪ್ರಾರಂಭಿಸಿ, ಪತಿಯಮೇಲೂ

ಹೊಸದಾಗಿ ಪಡೆದ ಮಗಳು ಪರ್ಡಿಟಾಮೇಲೂ ಶುಭಾನುಗ್ರಹದ ಸುರಿಮಳೆಯನ್ನೇ ವರ್ಷಿಸಿತು !

ಆ ವಿಗ್ರಹ, ಲಿಯೋರ್ಟಿಸ್‌ನನ್ನು ಆಲಂಗಿಸಿ, ಗಂಡನನ್ನೂ, ಮಗಳನ್ನೂ ಕುರಿತು ಆಶೀರ್ವಚನಗಳನ್ನು ನುಡಿದುದು ಆಶ್ಚರ್ಯವೇನಲ್ಲ. ಏಕೆಂದರೆ, ಆ ಪ್ರತಿಮೆ, ನಿಜವಾದ, ಜೀವಂತ ರಾಣಿಯಾದ ಹರ್ಮಿಯೋನಳೇ ಆಗಿದ್ದಿತು !

ಪಾಲಿನಾ ರಾಜನಿಗೆ ಹರ್ಮಿಯೋನಳ ಮರಣದ ಬಗ್ಗೆ ಸುಳ್ಳುಸುದ್ದಿಯನ್ನು ಕೊಟ್ಟಿದ್ದಳು. ಆ ಸಂದರ್ಭದಲ್ಲಿ ತನ್ನ ಒಡತಿಯ ಪ್ರಾಣವನ್ನು ಉಳಿಸಲು ಅವಳಿಗೆ ಬೇರೆ ಮಾರ್ಗ ಉಳಿದಿರಲಿಲ್ಲ. ಆಗಿನಿಂದಲೂ ಈ ಸ್ವಾಮಿನಿಷ್ಠೆ ಪಾಲಿನಾಳೊಡನೆಯೆ ಹರ್ಮಿಯೋನ್ ಬಾಳಿದ್ದಳು. ಲಿಯೋರ್ಟಿಸ್ ತನಗೆಸಗಿದ್ದ ಎಲ್ಲ ಹಾನಿಯನ್ನೂ ಅವಳು ಹಿಂದೆಯೇ ಕ್ಷಮಿಸಿದ್ದರೂ ತನ್ನ ಪುಟ್ಟ ಮಗಳಮೇಲೆ ಅವನು ತೋರಿಸಿದ್ದ ಕ್ರೌರ್ಯವನ್ನು ಮಾತ್ರ ಮನ್ನಿಸಲಾರದಾಗಿದ್ದಳು. ಆದ್ದರಿಂದಲೇ ಪರ್ಡಿಟಾ ದೊರೆತಳೆಂದು ತಿಳಿಯುವವರೆಗೂ ರಾಣಿ ತನ್ನ ವಿಷಯವನ್ನು ಅವನು ತಿಳಿಯಕೂಡದೆಂದೇ ಅಪೇಕ್ಷಿಸಿದ್ದಳು.

ಗತಿಸಿದ ತನ್ನ ರಾಣಿಯೂ ಜೀವಂತಳಾಗಿ, ಕಳೆದುಹೋಗಿದ್ದ ಮಗಳನ್ನೂ ಪುನಃ ಪಡೆದ ಚಿರದುಃಖಿ ಲಿಯೋರ್ಟಿಸನಿಗೆ ಈಗ ತನಗುಂಟಾದ ಆನಂದವನ್ನು ಸೈರಿಸುವುದೇ ಕಷ್ಟವಾಯಿತು.

ಎಲ್ಲೆಡೆಯಿಂದಲೂ ಅಭಿನಂದನೆಗಳೂ,ಪ್ರೀತಿಯ, ನುಡಿಗಳೂ ಉಕ್ಕಿಹರಿದವು. ಹರ್ಷಭರಿತರಾದ ಆ ದಂಪತಿಗಳು, ಈಗ, ಹೀನವಂಶದವಳೆಂದು ಪ್ರತೀತಳಾಗಿದ್ದ ತಮ್ಮ ಮಗಳನ್ನು ಪ್ರೇಮಿಸಿದ್ದಕ್ಕಾಗಿ ರಾಜಕುವರ ಫ್ಲೋರೈಸಲ್‌ನನ್ನೂ, ತಮ್ಮ ಮಗುವನ್ನು ರಕ್ಷಿಸಿದ್ದಕ್ಕಾಗಿ ವೃದ್ಧ ಕುರುಬನನ್ನೂ ವಂದಿಸಿ ಹರಸಿದರು. ಕೆಮಿಲ್ಲೋ ಮತ್ತು ಪಾಲಿನಾ ತಮ್ಮೆಲ್ಲ ನಿಷ್ಠೆಯ ಸೇವೆಗಳೂ ಈ ಉತ್ತಮ ರೀತಿಯಲ್ಲಿ ಸಫಲವಾದುದಕ್ಕೆ ಆನಂದಹೊಂದಿ ನಲಿದಾಡಿದರು.

ಇವೆಲ್ಲ ಅದ್ಭುತ ಅನಿರೀಕ್ಷಿತ ಆನಂದವನ್ನು ಪೂರ್ಣಗೊಳಿಸಲೋ ಎಂಬಂತೆ, ಈ ಸಮಯಕ್ಕೆ ಸರಿಯಾಗಿ, ರಾಜ ಪಾಲಿಕ್ಸಿನಸ್ ಅರಮನೆಗೆ ಬಂದು ಸೇರಿದನು.

ತನ್ನ ಮಗ ಮತ್ತು ಕೆಮಿಲ್ಲೋ ಕಾಣದಾದ ಕೂಡಲೇ, ಪಾಲಿಕ್ಸಿನಸ್ ಸಿಸಿಲಿಗೆ ಹಿಂತಿರುಗಲು ಕೆಮಿಲ್ಲೋ ಬಹಳ ಹಿಂದಿನಿಂದಲೂ ಇಷ್ಟಪಡುತ್ತಿದ್ದು

ದನ್ನು ಅರಿತು ಪಲಾಯನಗಾರರು ಅಲ್ಲಿಯೇ ಇರಬೇಕೆಂದು ಊಹಿಸಿದನು. ಆ ಕೂಡಲೇ ಆದಷ್ಟು ತ್ವರೆಯಿಂದ ಅವರನ್ನು ಹಿಂಬಾಲಿಸಿ ಬಂದು, ಲಿಯೋಂಟಿಸನ ಜೀವನದಲ್ಲಿ ಅತ್ಯಂತ ಹರ್ಷಭರಿತವಾದೀ ಕ್ಷಣದಲ್ಲಿ ಅಲ್ಲಿಗೆ ಆಗಮಿಸಿದನು.

ಪಾಲಿಕ್ಸಿನಸ್ ಸಹ ಈ ಎಲ್ಲ ಸಂತೋಷದಲ್ಲಿ ಭಾಗಿಯಾದನು. ಮಿತ್ರ ಲಿಯೋಂಟಿಸ್ ತನ್ನ ಬಗ್ಗೆ ತಳೆದಿದ್ದ ಅನುಚಿತ ಅಸೂಯಾ ಭಾವವನ್ನು ಅವನು ಕ್ಷಮಿಸಿಬಿಟ್ಟನು. ಅನಂತರ ಅವರಿಬ್ಬರೂ ಹಿಂದಿನ ಬಾಲ್ಯಸ್ನೇಹದ ಆತ್ಮೀಯತೆಯಿಂದಲೇ ಪುನಃ ಪರಸ್ಪರ ಪ್ರೀತಿಸತೊಡಗಿದರು. ಪಾಲಿಕ್ಸಿನಸ್ ಈಗ ಪರ್ಡಿಟಾಳೊಡನೆ ತನ್ನ ಮಗನ ವಿವಾಹವಾಗುವುದನ್ನು ವಿರೋಧಿಸುವ ಭೀತಿಯೇ ಇರಲಿಲ್ಲ—ಈಗವಳು 'ಕುರುಬನ ಚಿಳ್ಳೆ' ಯಾಗಿರದೆ ಸಿಸಿಲಿಯ ಸಿಂಹಾಸನದ ಉತ್ತರಾಧಿಕಾರಿಣಿಯಾಗಿದ್ದಳು.

ಹೀಗೆ, ಚಿರ ದುಃಖತಪ್ತಳಾಗಿದ್ದ ಹರ್ಮಿಯೋನ್‌ಳ ಸಹನೆ ಸೌಶೀಲ್ಯಗಳು ಕೊನೆಯಲ್ಲಿ ಹೇಗೆ ಪ್ರತಿಫಲ ಪಡೆದವೆಂಬುದನ್ನು ನಾವು ನೋಡಿಯಾಯಿತು. ಶ್ರೇಷ್ಠಳಾದ ಈ ರಾಣಿ ಹಲವಾರು ವರ್ಷ ಅತ್ಯಂತ ಸುಖಿಯಾದ ರಾಣಿಯೂ, ಮಾತೆಯೂ ಆಗಿ ತನ್ನ ಲಿಯೋಂಟಿಸ್ ಮತ್ತು ಪರ್ಡಿಟಾರೊಡನೆ ಬಾಳಿದಳು.

# ಮ್ಯಾಕ್‌ಬೆತ್

ಸಾಧು ಡಂಕನ್ ಸ್ಕಾಟ್ಲೆಂಡಿನ ರಾಜನಾಗಿ ಆಡಳಿತ ನಡೆಸುತ್ತಿದ್ದಾಗ, ಅಲ್ಲಿ ಮ್ಯಾಕ್‌ಬೆತ್ ಎಂಬ ಮಹಾ ಶ್ರೀಮಂತನಿದ್ದನು. ಈ ಮ್ಯಾಕ್‌ಬೆತ್ ರಾಜನಿಗೆ ಸಮೀಪದ ಸಂಬಂಧಿಯಾಗಿದ್ದನು. ಅಲ್ಲದೇ ತನ್ನ ಶೌರ್ಯ, ಯುದ್ಧದಲ್ಲಿನ ಪರಾಕ್ರಮದಿಂದಾಗಿ, ರಾಜಾಸ್ಥಾನದಲ್ಲೆಲ್ಲಾ ಬಹು ಗೌರವಕ್ಕೆ ಪಾತ್ರನಾಗಿದ್ದನು. ಈಚೆಗೆ, ನಾರ್ವೆಯ ಅಸಂಖ್ಯಾತ ದಂಡಿನೊಂದಿಗೆ ಸೇರಿ ದಂಗೆಯೆದ್ದಿದ್ದ ಗುಂಪೊಂದನ್ನು ಸೋಲಿಸಿ ಆ ಮೂಲಕ ತನ್ನ ಪರಾಕ್ರಮದ ನಿದರ್ಶನ ಕೊಟ್ಟಿದ್ದನು.

ಈ ಮಹಾ ಸಮರದಲ್ಲಿ ವಿಜಯಿಗಳಾಗಿ ಮ್ಯಾಕ್‌ಬೆತ್ ಮತ್ತು ಬ್ಯಾಂಕೋ ಈ ಇಬ್ಬರು ಸೇನಾನಿಗಳೂ ಹಿಂತಿರುಗುತ್ತಿದ್ದರು. ಮಾರ್ಗದಲ್ಲಿ ಅವರು ಪಾಳುಬಿದ್ದಿದ್ದ ವನಭೂಮಿಯೊಂದರ ಮೇಲೆ ಹಾಯ್ದು ಹೋಗಬೇಕಾಗಿತ್ತು. ಅಲ್ಲಿ ಹಠಾತ್ತನೆ ಅವರೆದುರು ಮೂವರು ಸ್ತ್ರೀ ಆಕೃತಿಯ ವ್ಯಕ್ತಿಗಳು ವಿಲಕ್ಷಣ ರೀತಿಯಲ್ಲಿ ಕಾಣಿಸಿಕೊಂಡರು. ಇದರಿಂದ ಅವರಿಬ್ಬರೂ ಸ್ತಂಭೀಭೂತರಾಗಿ ನಿಲ್ಲಬೇಕಾಯಿತು. ಆ ಮೂರು ಆಕೃತಿಗಳಿಗೂ ಗಡ್ಡಗಳಿದ್ದವು; ಅವರ ಶುಷ್ಕ ಚರ್ಮವೂ, ವಿಕೃತ ವೇಷವೂ ಅವರು ಅಮಾನುಷವ್ಯಕ್ತಿಗಳೆಂದು ಸೂಚಿಸುವಂತಿದ್ದವು. ಮೊದಲು ಮ್ಯಾಕ್‌ಬೆತ್‌ನೇ ಅವರನ್ನು ಮಾತನಾಡಿಸಿದನು. ಕೂಡಲೇ ಅವನಿಂದ ಏನೋ ಅಪಚಾರ ನಡೆದಿತೆಂಬಂತೆ, ಆ ಮೂವರೂ ಮೌನ ಸೂಚಕಾರ್ಥವಾಗಿ ತಮ್ಮ ಶುಷ್ಕ ತುಟಿಗಳ ಮೇಲೆ ಬರಿಯ ಎಲುಬುಗೂಡಿನಂತಿದ್ದ ಕೈಬೆರಳನ್ನಿಟ್ಟುಕೊಂಡರು. ನಂತರ ಅವರಲ್ಲಿ ಮೊದಲನೆಯವಳು ಮ್ಯಾಕ್‌ಬೆತ್‌ನನ್ನು "ಗ್ಲಾಮಿಸ್‌ನ ಶ್ರೀಮಂತ ಒಡೆಯ" ಎಂದು ಸಂಬೋಧಿಸಿ ನಮಿಸಿದಳು. ಈ ಜೀವಿಗಳು ತನ್ನನ್ನು ಬಲ್ಲರೆಂದು ತಿಳಿದು ಮ್ಯಾಕ್‌ಬೆತ್ ಆಶ್ಚರ್ಯಚಕಿತನಾದನು. ಆದರೆ ಆನಂತರ ಅವರಲ್ಲಿ ಎರಡನೆಯವಳು ಅವನನ್ನು "ಕೇಡ್ವಾರ್‌ನ ಒಡೆಯ"ನೆಂಬ

ಸಂಬೋಧನೆಯೊಡನೆ ಸ್ವಾಗತಿಸಿದಾಗ ಮ್ಯಾಕ್‌ಬೆತ್‌ನ ಆಶ್ಚರ್ಯ ಮುಗಿಲು ಮುಟ್ಟಿತು. ಏಕೆಂದರೆ ಆ ಹೆಸರಿನ ಗೌರವಕ್ಕೆ ಅವನೆಂದೂ ಬಾಧ್ಯನಾಗಿರಲಿಲ್ಲ. ಆಗ ಪುನಃ ಮೂರನೆಯವಳು "ಜಯವಾಗಲಿ, ಭಾವೀ ರಾಜನಿಗೆ ಜಯವಾಗಲಿ" ಎಂದಳು. ರಾಜನ ಪುತ್ರರಿಬ್ಬರೂ ಜೀವಿಸಿರುವಾಗ ತಾನು ಸಿಂಹಾಸನಾರೋಹಣ ಮಾಡುವುದೆಂದೂ ಸಾಧ್ಯವಿಲ್ಲವೆಂದು ಅರಿತಿದ್ದ ಮ್ಯಾಕ್‌ಬೆತ್‌ನಿಗೆ, ಈಗ ಈ ಭವಿಷ್ಯವಾಣಿಯಿಂದ ದಿಗ್ಭ್ರಮೆಯೇ ಉಂಟಾಯಿತು. ನಂತರ ಅವರೆಲ್ಲರೂ ಬ್ಯಾಂಕೋನೆಡೆಗೆ ತಿರುಗಿದರು. ಒಗಟಿನ ಮಾತುಗಳಲ್ಲಿ "ಅವನು ಮ್ಯಾಕ್‌ಬೆತ್‌ಗಿಂತ ಕೀಳು, ಆದರೂ ಅವನಿಗಿಂತ ಮಿಗಿಲು; ಅವನಷ್ಟು ಸುಖಿಯಲ್ಲ, ಆದರೆ ಅವನಿಗಿಂತ ಸುಖಿ"ಯಾಗುವದೆಂದು ನುಡಿದರು. ಬ್ಯಾಂಕೋ ಸ್ವತಃ ರಾಜನಾಗದಿದ್ದರೂ ಸಹ ಅವನ ಪುತ್ರರು ಸ್ಕಾಟ್ಲೆಂಡಿನ ರಾಜರಾಗುವರೆಂದು ಭವಿಷ್ಯ ನುಡಿದರು. ಆ ಬಳಿಕ ಅವರು ಗಾಳಿಯಲ್ಲೇ ಕರಗಿ ಅದೃಶ್ಯರಾದರು. ಆಗ ಸೇನಾನಿಗಳಿಬ್ಬರಿಗೂ ಅವರೆಲ್ಲ ಮಂತ್ರವಾದಿನಿಯರೆಂದು ತಿಳಿಯಿತು.

ಈ ವಿಲಕ್ಷಣ ಘಟನೆಯನ್ನು ಕುರಿತು ಅವರು ಚಿಂತನೆಮಾಡುತ್ತಾ ಅಲ್ಲೇ ನಿಂತರು. ಆ ಹೊತ್ತಿಗೆ ರಾಜನೆಡೆಯಿಂದ ಹಲವು ದೂತರು ಬಂದು, ಮ್ಯಾಕ್‌ಬೆತ್‌ನಿಗೆ ರಾಜ, ಕೇಡ್ವಾರಿನ ಒಡೆಯನಾಗುವ ಗೌರವವನ್ನು ಸಲ್ಲಿಸಿರುವನೆಂದು ತಿಳಿಸಿದರು. ಮಂತ್ರವಾದಿನಿಯರು ನುಡಿದ ಶಕುನದಂತೆಯೇ ನಡೆದ ಈ ಅದ್ಭುತ ಘಟನೆ ಮ್ಯಾಕ್‌ಬೆತ್‌ನನ್ನು ಬೆರಗುಗೊಳಿಸಿತು.

ಅವನ ಬಾಯಲ್ಲಿ ಮಾತೇ ಹೊರಡದಾಯಿತು. ಆ ಕ್ಷಣದಲ್ಲೇ ಅವನ ಮನದಲ್ಲಿ ಇನ್ನೊಂದು ಆಸೆ ಮೊಳೆತು ಬಲಿಯಿತು : ಆ ಮೂರನೆಯ ಮಂತ್ರವಾದಿನಿ ನುಡಿದ ಶಕುನವೂ ಹೀಗೆಯೇ ನಿಜವಾಗಿ, ಒಂದುದಿನ ತಾನು ಸ್ಕಾಟ್ಲೆಂಡಿನ ರಾಜನಾಗಬಾರದೇಕೆ ? ಎನ್ನಿಸಿತು.

ಅವನು ಬ್ಯಾಂಕೋನೆಡೆಗೆ ತಿರುಗಿ" ಆ ಮಂತ್ರವಾದಿನಿಯರ ವಾಗ್ದಾನದಂತೆಯೆ ನನ್ನ ವಿಷಯದಲ್ಲಿ ಈ ಕೌತುಕ ನಡೆದಿದೆ ; ಇದರಿಂದ ನಿನ್ನ ಮಕ್ಕಳೂ ರಾಜರಾಗಬಹುದೆಂದು ನಿನಗೆನಿಸುವುದಿಲ್ಲವೋ?" ಎಂದನು. ಅದಕ್ಕೆ ಆ ಸೇನಾನಿ "ಅಂತಹ ಆಸೆ ನಿನ್ನನ್ನು ಸಿಂಹಾಸನದ ಮೇಲೆ ಕಣ್ಣಿಡುವಂತೆ ಮಾಡಬಹುದಷ್ಟೆ. ಆದರೆ, ಸಾಮಾನ್ಯವಾಗಿ, ಈ ಕರಾಳಮಂತ್ರವಾದಿನಿಯರು ಕ್ಷುಲ್ಲಕ ವಿಷಯಗಳ ಬಗ್ಗೆ ಮಾತ್ರ ನಿಜ ನುಡಿಯುತ್ತಾರೆ. ಆ ಮೂಲಕ

ಮುಂದೆ ಅತಿ ಮಹತ್ವದ ಪರಿಣಾಮವನ್ನುಂಟುಮಾಡುವಂತಹ ಕೃತ್ಯಗಳಿಗೆ ನಮ್ಮನ್ನು ಪ್ರೇರಿಸಿ ದ್ರೋಹವೆಸಗುತ್ತಾರೆ" ಎಂದನು.

ಆದರೆ ಮಂತ್ರವಾದಿನಿಯರಿತ್ತಿದ್ದ ದುರುಳ ಸೂಚನೆಗಳು ಮ್ಯಾಕ್‌ಬೆತ್‌ನ ಮನದಲ್ಲಿ ಆಗಲೇ ದೃಢವಾಗಿ ಬೇರೂರಿಬಿಟ್ಟಿದ್ದವು' ಆದ್ದರಿಂದವನು ಶ್ರೇಷ್ಠನಾದ ಬ್ಯಾಂಕೋನ ಎಚ್ಚರಿಕೆಯ ನುಡಿಗಳಿಗೆ ಕಿವಿಗೊಡಲೇ ಇಲ್ಲ. ಆ ಹೊತ್ತಿನಿಂದಲೂ ಅವನ ಯೋಚನೆಗಳೆಲ್ಲವೂ ಸ್ಕಾಟ್ಲೆಂಡಿನ ಸಿಂಹಾಸನವನ್ನು ವಶಪಡಿಸಿಕೊಳ್ಳುವುದಲ್ಲೇ ನಿರತವಾಗಿಹೋದವು.

ಮ್ಯಾಕ್‌ಬೆತ್, ಮಂತ್ರವಾದಿನಿಯರ ಭವಿಷ್ಯವಾಣಿಯನ್ನೂ, ಅದರಲ್ಲಿ ಅಲ್ಪಾಂಶ ಸಫಲವಾದುದನ್ನೂ ತನ್ನ ಹೆಂಡತಿಗೆ ತಿಳಿಸಿದನು. ಅವಳಾದರೋ ದುಷ್ಟೆ. ಅವಳ ದುರಾಶೆಗೆ ಕೊನೆ ಮೊದಲಿರಲಿಲ್ಲ. ತಾನೂ ತನ್ನ ಗಂಡನೂ ಉಚ್ಚಪದವಿಗೇರುವುದಕ್ಕಾಗಿ ಎಂತಹ ಮಾರ್ಗವನ್ನಾದರೂ ಅವಲಂಬಿಸಲು ಅವಳು ಹಿಂಜರಿಯುತ್ತಿರಲಿಲ್ಲ. ರಕ್ತಪಾತದ ಚಿಂತನೆಯಿಂದ ಮ್ಯಾಕ್‌ಬೆತ್‌ನ ಮನ ಕಲಕಿಹೋಗುತ್ತಿತ್ತು. ಆದರೆ ಅವಳು ಅವನಲ್ಲಿ ಮೊಳೆಯುತ್ತಿದ್ದ ದುರ್ಬಲ ಉದ್ದಿಶ್ಯವನ್ನು ತಿವಿದು, ಚುಚ್ಚಿ, ಉದ್ರೇಕಿಸಿದಳು. ಭವಿಷ್ಯವಾಣಿಯ ಪ್ರಲೋಭನೆ ಸಫಲಗೊಳ್ಳಬೇಕಾದಲ್ಲಿ ರಾಜನನ್ನು ಕೊಲೆಮಾಡುವುದು ಹೇಗೆ ಅತ್ಯಾವಶ್ಯಕವೆಂಬುದನ್ನು ಅವನೆದುರು ಪರಿಪರಿಯಲ್ಲಿ ವರ್ಣಿಸಿದಳು.

ಈ ಸಮಯಕ್ಕೆ ಸರಿಯಾಗಿ ರಾಜನೇ ತನ್ನ ಪುತ್ರರಾದ ಮಾಲ್ಕೋಮ್ ಮತ್ತು ಡೊನಾಲ್ಬೇನ್‌ರೊಂದಿಗೆ ಮ್ಯಾಕ್‌ಬೆತ್‌ನ ಮನೆಗೆ ಬಂದಿಳಿದನು. ಯುದ್ಧದಲ್ಲಿ ವಿಜಯಿಯಾಗಿದ್ದ ಮ್ಯಾಕ್‌ಬೆತ್‌ನನ್ನು ಮತ್ತಷ್ಟು ಗೌರವಿಸುವ ಸಲುವಾಗಿ ಅವನೊಂದಿಗೆ ಅಸಂಖ್ಯಾತ ಶ್ರೀಮಂತರೂ ಪರಿಜನರೂ ಬಂದಿದ್ದರು. ಆಗಾಗ ಈ ಬಗೆಯಲ್ಲಿ ಉಚ್ಚದರ್ಜೆಯ ಪ್ರಜೆಗಳಿಗೆ ಸಂದರ್ಶನವನ್ನಿತ್ತು ಅನುಗ್ರಹಿಸುವುದು ಈ ರಾಜನ ಕೃಪಾವೈಶಿಷ್ಟ್ಯವಾಗಿತ್ತು.

ಮ್ಯಾಕ್‌ಬೆತ್‌ನ ಭವ್ಯನಿವಾಸ ಬಹು ಸುಂದರವಾದ ಪ್ರದೇಶದಲ್ಲಿ ನಿರ್ಮಿತವಾಗಿದ್ದಿತು. ಅದರ ಸುತ್ತಲಿನ ವಾತಾವರಣ ಬಹು ಮಧುರ, ಹಿತಕರವೆಂಬುದನ್ನು ಆ ಭವನದಲ್ಲಿ ಅವಕಾಶ ಸಿಕ್ಕಿದೆಡೆಯಲ್ಲೆಲ್ಲಾ ಗೂಡು ಕಟ್ಟಿಕೊಂಡಿದ್ದ ಮಾರ್ಟ್ಲೆಟ್ ಮತ್ತು ಸ್ವಾಲೋ ಹಕ್ಕಿಗಳೇ ಸಾರಿ ಹೇಳುತ್ತಿದ್ದವು. (ಈ ಪಕ್ಷಿಗಳು ತುಂಬು ಸಂಖ್ಯೆಯಲ್ಲಿದ್ದು ವಾಸಿಸುವೆಡೆಯಲ್ಲೆಲ್ಲಾ ಹವಾಗುಣ ಅತ್ಯುತ್ತಮವಾಗಿರುವುದೆಂದು ಜನಜನಿತವಾಗಿದೆ) ರಾಜನು

ಆ ಸ್ಥಳವನ್ನು ಬಹುವಾಗಿ ಮೆಚ್ಚಿಕೊಳ್ಳುತ್ತಲೇ ಒಳಗೆ ಪ್ರವೇಶಮಾಡಿದನು. ಮಾನ್ಯ ಅತಿಥೇಯಳಾದ ಮ್ಯಾಕ್‌ಬೆತ್‌ನ ಹೆಂಡತಿಯ ಗೌರವಯುತ ಆದರ ಸತ್ಕಾರಗಳಿಂದಲೂ ಅವನು ಅಷ್ಟೇ ಸಂತೃಪ್ತನಾದನು. ಆಕೆ ದ್ರೋಹದ ದುರುದ್ದೇಶಗಳನ್ನು, ಮುಗುಳ್ನಗೆಯಡಿಯಲ್ಲಿ ಮರೆಸುವ ಕಲೆಯಲ್ಲಿ ನಿಷ್ಣಾತಳಾಗಿದ್ದವಳು ; ಮುಗ್ಧ ಪುಷ್ಪವೊಂದರ ಮರೆಯಲ್ಲಿನ ಹೆಡೆಯಾಡಿಸುವ ಸರ್ಪ ತಾನಾಗಿದ್ದರೂ, ಆ ಪುಷ್ಪವೇ ತಾನೆಂಬ ಭ್ರಮೆಯನ್ನು ಹುಟ್ಟಿಸಬಲ್ಲವಳಾಗಿದ್ದಳು.

ಪ್ರಯಾಣದಿಂದ ಬಳಲಿದ್ದ ರಾಜನು ಬೇಗನೆ ಮಲಗಲು ತೆರಳಿದನು. ರಾಜೋಚಿತವಾಗಿ ಏರ್ಪಡಿಸಲಾಗಿದ್ದ ಅವನ ಕೋಣೆಯಲ್ಲಿ (ಪದ್ಧತಿಯಂತೆ) ಅವನ ಮೈಗಾವಲಿನ ಸೇವಕರಿಬ್ಬರು ಅವನೊಂದಿಗೇ ನಿದ್ರಿಸಿದರು. ತನಗೆ ದೊರೆತ ಸ್ವಾಗತದಿಂದ ರಾಜನಿಗೆ ಅಪೂರ್ವ ಆನಂದ ಉಂಟಾಗಿತ್ತು. ವಿಶ್ರಾಂತಿಗೆ ತೆರಳುವ ಮುನ್ನ ಅವನು ತನ್ನ ಪ್ರಮುಖಾಧಿಕಾರಿಗಳಿಗೆಲ್ಲ ಪಾರಿತೋಷಕವನ್ನಿತ್ತು ಗೌರವಿಸಿದ್ದನು. ಮ್ಯಾಕ್‌ಬೆತ್‌ನ ಪತ್ನಿಯನ್ನು "ಅತ್ಯುತ್ತಮ ಅತಿಥೇಯು"ಳೆಂದು ಸಂಬೋಧಿಸಿ, ಅಮೂಲ್ಯವಾದ ವಜ್ರವೊಂದನ್ನು ಅವಳಿಗೆ ಕಳುಹಿಸಿಕೊಟ್ಟಿದ್ದನು.

ನಡುರಾತ್ರಿ ; ವಿಶ್ವದ ಅರ್ಧಕ್ಕೂ ಹೆಚ್ಚು ಭಾಗದಲ್ಲಿ ಪ್ರಕೃತಿ ನಿಶ್ಚೇಷ್ಟಿತವಾಗಿರುವಂತೆ ತೋರುವ ಹೊತ್ತು ; ಮಲಗಿ ನಿದ್ರಿಸಿದ್ದ ಮನುಷ್ಯರ ಮನಸ್ಸನ್ನು ದುಷ್ಟಸ್ವಪ್ನಗಳು ಕಾಡುವ ಹೊತ್ತು ; ಕೇವಲ ತೋಳಗಳೂ ಕೊಲೆಗಾರರೂ ಓಡಾಡುವ ಸಮಯ. ಈ ಸಮಯದಲ್ಲೇ ಮ್ಯಾಕ್‌ಬೆತ್‌ನ ಹೆಂಡತಿ ರಾಜನ ಕೊಲೆಯ ಯೋಜನೆಯನ್ನು ಪೂರೈಸಲು ಎದ್ದಳು. ಸ್ತ್ರೀ ಪ್ರಕೃತಿಗೆ ಬಹು ಅಸಹಜವೂ ಅಸಹ್ಯಕರವೂ ಆದ ಈ ಕೃತ್ಯವನ್ನೆಸಗಲು ಅವಳನ್ನು ಪ್ರೇರಿಸಿದ ಅಂಶ ಯಾವುದು ? ಅವಳಿಗೆ ತನ್ನ ಗಂಡನ ಸ್ವಭಾವದಲ್ಲಿದ್ದ ಅಪನಂಬಿಕೆ; ಮಾನವಸಹಜ ಕರುಣೆಯಿಂದ ಕೂಡಿದ್ದ ಅವನ ಪ್ರಕೃತಿಗೆ ಈ ಕೊಲೆಯ ಯೋಜನೆಯನ್ನು ಈಡೇರಿಸಲು ಅಶಕ್ಯವಾಗುವುದೆಂಬ ಭೀತಿ. ಪತಿ ಮಹದಾಕಾಂಕ್ಷೆ ಉಳ್ಳವನೆಂಬುದು ಅವಳಿಗೆ ತಿಳಿದಿದ್ದಿತು. ಆದರೆ ಅಷ್ಟೇಮಟ್ಟಿಗೆ ಅವನಲ್ಲಿ ಯುಕ್ತಾಯುಕ್ತ ಪರಿಜ್ಞಾನವಿದ್ದಿತೆಂಬುದೂ, ಅವಳರಿವಿನಲ್ಲಿದ್ದಿತು. ಮಿತಿಗೆಟ್ಟ ಆಸೆ ಆಕಾಂಕ್ಷೆಗಳು ಸಾಧಾರಣವಾಗಿ ಎಂತಹ ಪಾತಕಗಳಲ್ಲಿ ಕೊನೆಗಾಣುವುವೋ ಅಂತಹ ಅಪಚಾರವೆಸಗಲು ಅವನಿನ್ನೂ ಸಿದ್ಧನಿರಲಿಲ್ಲವೆಂಬುದನ್ನು ಅವಳು ಅರಿತಿದ್ದಳು. ಕೊಲೆಯನ್ನು

ನಡೆಸುವುದಕ್ಕೇನೋ ಅವಳು ಅವನನ್ನು ಒಪ್ಪಿಸಿದ್ದಳು. ಆದರೆ ಅವನಾ ನಿರ್ಧಾರದ ದಾರ್ಢ್ಯ-ಸ್ಥೈರ್ಯಗಳಲ್ಲಿ ಅವಳಿಗೆ ಸಂದೇಹವಿದ್ದೇ ಇದ್ದಿತು. ಆವಳದಕ್ಕಿಂತ ಹೆಚ್ಚು ಮಾನವೀಯವಾಗಿತ್ತು ಅವನ ಪ್ರಕೃತಿ; ಅಂತಹ ಪ್ರಕೃತಿಗತವಾಗಿದ್ದ ಸಹಜ ಸಾಧುಗುಣ ಅಡ್ಡಬಂದು ಆ ಉದ್ದಿಶ್ಯವನ್ನು ಕೆಡಿಸಬಹುದೆಂದು ಅವಳು ಶಂಕಿಸಿದಳು. ಆದ್ದರಿಂದಲೇ, ತಾನೇ ಸ್ವತಃ ಕೈಯಲ್ಲಿ ಕತ್ತಿ ಹಿಡಿದು ರಾಜನ ಶಯ್ಯೆಯನ್ನು ಸಮೀಪಿಸಿದಳು. ಮುನ್ನವೇ ಅವನ ಮೈಗಾವಲಿನ ಪರಿಚಾರಕರಿಗೆ ಅಮಿತ ಮದ್ಯಪಾನ ಮಾಡಿಸಿ, ಅವರು ಮತ್ತರಾಗಿ ತಮ್ಮ ಕಾವಲುಗೆಲಸದ ಅರಿವೇ ಇಲ್ಲದೆ ಮೈಮರೆತು ನಿದ್ರಿಸುವಂತೆ ಮಾಡಿದ್ದಳು. ಪ್ರಯಾಣದ ಶ್ರಮದಿಂದ ಬಳಲಿಹೋಗಿದ್ದ ಡಂಕನ್ ಸುಖನಿದ್ರೆಯಲ್ಲಿ ಮುಳುಗಿದ್ದನು. ಮ್ಯಾಕ್‌ಬೆತ್‌ನ ಹೆಂಡತಿ ಅವನನ್ನೇ ದೃಷ್ಟಿಸಿ ನೋಡಿದಳು. ನೋಡಿದಂತೆಲ್ಲಾ, ನಿದ್ರಿಸುತ್ತಿದ್ದ ಅವನ ಮುಖದಲ್ಲಿ ತನ್ನ ಸ್ವಂತ ತಂದೆಯದೇ ಏನೋ ಒಂದು ಹೋಲಿಕೆ ಅವಳಿಗೆ ತೋರಿ ಬಂದಿತು! ಮುಂದುವರಿಯಲು ಅವಳಿಗೆ ಧೈರ್ಯ ಸಾಲದಾಯಿತು. ಕೈ ನಡುಗಿ ಕತ್ತಿ ಹಿಂಜರಿಯಿತು.

ಗಂಡನನ್ನು ಸಂಧಿಸಿ ಮುಂದಿನ ವಿಷಯ ಚರ್ಚಿಸಲು ಅವಳು ಹಿಂತಿರುಗಿದಳು. ಆತನ ನಿರ್ಧಾರವಾದರೋ ಆಂದೋಳನಕ್ಕೆ ಒಳಗಾಗತೊಡಗಿತ್ತು. ಕೃತ್ಯವನ್ನೆಸಗದಿರಲು ಪ್ರಬಲ ಕಾರಣಗಳಿರುವುವೆಂದು ಆವನು ವಿಚಾರ ಮಾಡುತ್ತಿದ್ದನು. ಮೊದಲನೆಯದಾಗಿ ತಾನು ಕೇವಲ ಪ್ರಜೆಯೇ ಅಲ್ಲದೆ ರಾಜನಿಗೆ ಸಮೀಪದ ಬಂಧು; ಆದಿನ ತಾನೇ ಅವನ ಅತಿಥೇಯನಾಗಿದ್ದನು. ಆತಿಥ್ಯದ ಧರ್ಮಾನುಸಾರವಾಗಿ ಅತಿಥಿಯ ಕೊಲೆಗಾರರನ್ನು ಹಿಮ್ಮೆಟ್ಟಿಸುವುದು ತನ್ನ ಕರ್ತವ್ಯವಾಗಿದ್ದಿತೇ ವಿನಃ ಅವನ ಮೇಲೆ ತಾನೇ ಕತ್ತಿ ಹಿರಿಯುವುದಾಗಿರಲಿಲ್ಲ. ಅಲ್ಲದೆ ಡಂಕನ್ ಬಹು ನ್ಯಾಯಪರನಾದ ದಯಾಳುವಾದ ದೊರೆ; ಪ್ರಜೆಗಳಿಗೆ ಯಾವ ವಿಧದಲ್ಲೂ ಅಪಚಾರ ಮಾಡದವನು. ಪ್ರಜರೆಲ್ಲರ ಬಗೆಗೆ ಅದರಲ್ಲೂ ತನ್ನ ಬಗೆಗೆ ಬಹು ವಾತ್ಸಲ್ಯಪರನಾಗಿದ್ದವನು. ಅಂತಹ ರಾಜರು ವಿಧಿಯ ಕೃಪಾಕಟಾಕ್ಷಕ್ಕೆ ಪಾತ್ರರು; ಅಂತಹವರ ಮೃತ್ಯುವನ್ನು ಸರ್ವವಿಧದಲ್ಲೂ, ಮಿಗಿಲಾಗಿ ಎದುರಿಸುವುದು ಪ್ರಜರ ಕರ್ತವ್ಯವೆಂದವನು ಚಿಂತಿಸಿದನು. ಅದಲ್ಲದೆ, ರಾಜನ ಆದರಣೆಯಿಂದಲೇ ಮ್ಯಾಕ್‌ಬೆತ್ ಜನಸ್ತೋಮದಿಂದ ಗೌರವ ಗಳಿಸಿದ್ದುದು. ಇಂತಹ ಅಧಮ ಪಾತಕದ ಪ್ರಚಾರದಿಂದ ಈ ಗೌರವಕ್ಕೆ ಯಾವ ಕಳಂಕ ತಾಗಬಹುದು!

ಈ ಬಗೆಯ ದ್ವಂದ್ವ ಭಾವನೆಗಳ ನಡುವೆ ಕ್ಷುಬ್ಧನಾಗಿ ತನ್ನಲ್ಲಿನ ಉತ್ತಮ ಪ್ರಕೃತಿಯೆಡೆಗೆ ಒಲೆಯುತ್ತಾ, ಹೆಜ್ಜೆ ಮುಂದಿಡೆನೆಂಬ ನಿರ್ಧಾರಕ್ಕೆ ಬರುತ್ತಿದ್ದ ಮ್ಯಾಕ್‌ಬೆತ್ ; ಈ ಸ್ಥಿತಿಯಲ್ಲೇ ಅವನ ಹೆಂಡತಿ ಹಿಂತಿರುಗಿ ಬಂದು ಅವನನ್ನು ಕಂಡಳು. ಆದರೆ, ತನ್ನ ದುರುದ್ದೇಶದಿಂದ ಸುಲಭವಾಗಿ ಹಿಮ್ಮೆಟ್ಟುವ ಸ್ವಭಾವದವಳಾಗಿರಲಿಲ್ಲ ಆಕೆ. ಅವನ ಕಿವಿಗಳಲ್ಲಿ ಆಕೆ ವಾಕ್ಪ್ರವಾಹವನ್ನೇ ಸುರಿಸಿದಳು. ತನ್ನ ಮನೋದಾರ್ಢ್ಯ ತೀಕ್ಷ್ಣಚೈತನ್ಯಗಳ ಸ್ವಲ್ಪ ಭಾಗ ಅವನ ಮನವನ್ನು ಪ್ರವೇಶಿಸುವಂತೆ ಮಾಡಿದಳು. ಅವನು ಕೈಗೊಳ್ಳಲು ನಿರ್ಧರಿಸಿದ್ದ ಕಾರ್ಯದಿಂದ ಹಿಂಜರಿಯಕೂಡದೆಂಬುದಕ್ಕೆ ಕಾರಣಗಳ ಮೇಲೆ ಕಾರಣಗಳನ್ನು ನಿದರ್ಶಿಸಿದಳು. ಕೃತ್ಯ ಎಷ್ಟು ಸುಲಭವೆಂಬುದನ್ನು, ಎಷ್ಟು ಬೇಗ ಮುಗಿದುಹೋಗುವುದೆಂಬುದನ್ನು, ಆ ಒಂದು ರಾತ್ರಿಯ ಕ್ಷಣಾರ್ಧದ ಕೃತ್ಯ ಮುಂಬರಲಿದ್ದ ಎಲ್ಲ ರಾತ್ರಿಗಳಲ್ಲಿ–ದಿನಗಳಲ್ಲಿ ರಾಜತ್ವವನ್ನು, ಸಾರ್ವಭೌಮಾಧಿಕಾರವನ್ನು ತಂದುಕೊಡುವುದೆಂಬುದನ್ನು ಬಣ್ಣಿಸಿದಳು. ಆ ಬಳಿಕ, ಅವನ ಮೇಲೆ ಉದ್ದಿಶ್ಯ ಬದಲಾದುದಕ್ಕೆ ತಾತ್ಸಾರವನ್ನು ವ್ಯಕ್ತಪಡಿಸಿದಳು ; ಅವನ ಮೇಲೆ ಚಿತ್ತಚಾಂಚಲ್ಯದ, ಹೇಡಿತನದ ಆರೋಪವನ್ನು ಹೊರಿಸಿ ಅವನನ್ನು ಹಳಿದಳು. ತಾನು ಒಂದು ಮಗುವಿನ ತಾಯಾಗಿ ಪೋಷಿಸಿದವಳು ; ತಾನೇ ಹಾಲೂಡಿದ ಮಗುವನ್ನು ಪ್ರೇಮಿಸಿ, ಆ ವಾತ್ಸಲ್ಯದ ಸವಿಯೆಷ್ಟೆಂಬುದನ್ನು ಅರಿತವಳು. ಆದರೆ, ಅವನಂತೆ ತಾನು ಪ್ರತಿಜ್ಞೆ ಮಾಡಿದ್ದಲ್ಲಿ, ಆ ಮಗುವಿನ್ನೂ ತನ್ನ ಮುಖ ನೋಡುತ್ತಾ ನಕ್ಕು ನಲಿಯುತ್ತಿರುವಾಗಲೇ ಎದೆಯಿಂದದನ್ನು ಹೊರಗೆಳೆದು ಗುಂಡಿನಿಂದ ಅದರ ತಲೆಯೊಡೆಯಲು ಹಿಂಜರಿಯುತ್ತಿರಲಿಲ್ಲವೆಂದಳು. ಇದಾದ ಮೇಲೆ, ಕೃತ್ಯದ ಹೊಣೆಯನ್ನು, ಪಾನಮತ್ತರಾಗಿ ಮಲಗಿದ್ದ ಸೇವಕರ ಮೇಲೆ ಆರೋಪಿಸುವುದು ಎಷ್ಟು ಸುಲಭಸಾಧ್ಯವೆಂಬುದನ್ನೂ ಸೂಚಿಸಿದಳು. ಹೀಗೆ ತನ್ನ ನಾಲಿಗೆಯ ಪರಾಕ್ರಮದಿಂದ ಅವನ ಜಡನಿರ್ಧಾರಗಳನ್ನು ಜಾಗೃತಗೊಳಿಸಿದಳು. ಕೊನೆಗೆ ಅವನು ಆ ರಕ್ತಕೃತ್ಯವನ್ನೆಸಗಲು ಮತ್ತೊಮ್ಮೆ ಧೈರ್ಯವನ್ನು ಒಟ್ಟುಗೂಡಿಸಿಕೊಂಡನು.

ಅಂತೆಯೇ ಕೈಯಲ್ಲಿ ಕತ್ತಿಯನ್ನು ಹಿಡಿದು ಅವನು ಆ ಕತ್ತಲೆಯಲ್ಲಿ ಡಂಕನ್ ಮಲಗಿದ್ದ ಕೋಣೆಗೆ ಮೆಲ್ಲನೆ ನುಸುಳಿದನು. ಆದರೆ ಹೋಗುತ್ತಿದ್ದಂತೆಯೇ ಅವನಿಗೆ, ಹಿಡಿ ತನಗೆದುರಾಗಿರುವಂತೆ ಇನ್ನೊಂದು ಖಡ್ಗ ಗಾಳಿಯಲ್ಲಿ ಕಾಣಿಸಿದಂತೆ, ಅದರ ತುದಿಯಲ್ಲೂ ಅಲಗಿನಲ್ಲೂ ರಕ್ತದ ಹನಿ

ಗಳಿರುವಂತೆ ಭಾಸವಾಯಿತು. ಅದನ್ನು ಹಿಡಿದುಕೊಳ್ಳಲು ಅವನು ಕೈ ಚಾಚಿದಾಗ ಅಲ್ಲಿ ಕೇವಲ ಗಾಳಿಯಲ್ಲದೆ ಬೇರೇನೂ ಇರಲಿಲ್ಲ. ಕ್ಷುಬ್ಧವಾದ, ತಪ್ತವಾದ ಅವನ ಮನದಲ್ಲಿ ಅವನು ಕೈಗೊಂಡಿದ್ದ ಕೃತ್ಯದ ದೆಸೆಯಿಂದ ಉದ್ಭವಿಸಿದ ಭೂತಸೃಷ್ಟಿಯೇ ಅದಾಗಿತ್ತು !

ಈ ಭೀತಿ ಪರಿಹಾರ ಮಾಡಿಕೊಂಡು ಅವನು ರಾಜನ ಕೋಣೆಯನ್ನು ಪ್ರವೇಶಿಸಿದನು ; ಖಡ್ಗದ ಒಂದೇ ಏಟಿಗೆ ರಾಜನನ್ನು ಪರಲೋಕಕ್ಕೆ ಅಟ್ಟಿದನು. ಕೊಲೆಯನ್ನವನು ಮುಗಿಸಿದ ಕ್ಷಣದಲ್ಲಿಯೇ ಅಲ್ಲಿ ಮಲಗಿದ್ದ ಸೇವಕರಲ್ಲಿ ಒಬ್ಬನು ನಿದ್ರೆಯಲ್ಲೇ ನಕ್ಕನು ; ಮತ್ತೊಬ್ಬನು 'ಕೊಲೆ' ಎಂದು ಅರಚಿಕೊಂಡನು. ಇಬ್ಬರೂ ಅದರಿಂದ ಎಚ್ಚರಗೊಂಡರು. ಸ್ವಲ್ಪಹೊತ್ತು ಅವರಿಬ್ಬರೂ ಪ್ರಾರ್ಥನೆ ಮಾಡಿದರು. ಒಬ್ಬನು "ದೇವನು ನಮ್ಮನ್ನು ಕಾಪಾಡಲಿ" ಎನ್ನಲು ಮತ್ತೊಬ್ಬನು "ಆಮೆನ್" (ತಥಾಸ್ತು) ಎಂದು ಉತ್ತರಿಸಿದನು. ಇಬ್ಬರೂ ಪುನಃ ಮಲಗಿ ನಿದ್ರಿಸಿಬಿಟ್ಟರು. ಅವರ ಮಾತನ್ನೇ ಆಲಿಸುತ್ತಾ ನಿಂತಿದ್ದ ಮ್ಯಾಕ್‌ಬೆತ್, ಆ ಸೇವಕ "ದೇವನು ಕಾಪಾಡಲಿ" ಎಂದಾಗ "ಆಮೆನ್" ಎಂದೆನ್ನಲು ಪ್ರಯತ್ನಪಟ್ಟನು. ಆದರೆ ದೇವನ ಕೃಪೆ ಅವನಿಗಾಗ ಅತ್ಯವಶ್ಯವಾಗಿದ್ದರೂ ಸಹ ಆ ಮಾತು ಅವನ ಗಂಟಲಿನಲ್ಲೇ ಉಳಿದುಕೊಂಡಿತು, ವಿಶ್ವಪ್ರಯತ್ನ ಮಾಡಿದರೂ ಉಚ್ಚರಿಸಲು ಅವನಿಗಾಗಲೇ ಇಲ್ಲ.

ಆಗ ಯಾವುದೋ ಧ್ವನಿಯೊಂದು "ನಿದ್ರಿಸದಿರಿ, ಇನ್ನು ನಿದ್ರಿಸದಿರಿ ! ಮ್ಯಾಕ್‌ಬೆತ್ ನಿದ್ರೆಯನ್ನು, ಜೀವನಾಧಾರವಾದ ಮುಗ್ಧಮಧುರ ನಿದ್ರೆಯನ್ನು ಕೊಲೆ ಮಾಡಿದ್ದಾನೆ" ಎಂದು ಕೂಗುವಂತೆ ಅವನಿಗೆ ತೋರಿತು. ಪುನಃ ಪುನಃ ಆ ಧ್ವನಿ "ನಿದ್ರಿಸಬೇಡಿರಿ ಇನ್ನು" ಎಂದು ಇಡೀ ಮನೆಯನ್ನೇ ಕುರಿತು ಕೂಗಿದಂತಾಯಿತು—"ಗ್ಲಾಮಿಸ್‌ನಿಂದ ನಿದ್ರೆಯ ಕೊಲೆಯಾಗಿ ಹೋಗಿದೆ. ಆದ್ದರಿಂದ ಕೇಡ್ಡಾರ್ ಇನ್ನು ನಿದ್ರಿಸುವಂತಿಲ್ಲ, ಮ್ಯಾಕ್‌ಬೆತ್ ಇನ್ನು ನಿದ್ರಿಸುವಂತಿಲ್ಲ" ಎಂದಿತು ಆ ಧ್ವನಿ !

ಈ ಬಗೆಯ ಭೀಕರವಾದ ಕಲ್ಪಿತ ಭ್ರಾಂತಿಗಳೊಡನೆ ಮ್ಯಾಕ್‌ಬೆತ್, ಆಲಿಸುತ್ತಾ ನಿಂತಿದ್ದ ಹೆಂಡತಿಯೆಡೆಗೆ ಹಿಂತಿರುಗಿ ಬಂದನು. ಅವನ ಅವಸ್ಥೆಯನ್ನು ನೋಡಿ ಆಕೆ ಅವನು ಉದ್ದಿಶ್ಯವನ್ನು ಸಾಧಿಸಲ್ಲವೆಂದೇ ಬಗೆದಳು ; ಕೃತ್ಯ ಹೇಗೋ ನಡೆಯದಾಗಿರುವುದೆಂದು ಭಾವಿಸಿದಳು. ಅವನ ಸ್ಥಿತಿ ಅಷ್ಟು ಅಸ್ತವ್ಯಸ್ತವಾಗಿದ್ದಿತು. ಮನೋದಾರ್ಢ್ಯವಿಲ್ಲದಿರುವುದಕ್ಕಾಗಿ

ಅವಳು ಜಿಗುಪ್ಸೆಯಿಂದ ಅವನನ್ನು ಜರೆದಳು. ರಕ್ತದ ಕಲೆಗಳಿಂದ ತುಂಬಿ ಹೋಗಿದ್ದ ಕೈಗಳನ್ನು ತೊಳೆದು ಬರಲು ಅವನನ್ನು ಕಳುಹಿಸಿದಳು. ಇತ್ತ ತಾನು ಸೇವಕರ ಮೇಲೆ ಅಪರಾಧ ಹೊರಿಸುವ ಸಲುವಾಗಿ ಅವರ ಕೆನ್ನೆಗಳಿಗೆ ರಕ್ತ ಹೆಚ್ಚಲು ಕತ್ತಿಯನ್ನು ತೆಗೆದುಕೊಂಡು ಹೊರಟಳು.

ಬೆಳಗಾಯಿತು; ಅದರೊಂದಿಗೇ ಗುಪ್ತವಾಗಿಡಲಾಗದ ಕೊಲೆಯೂ ಹೊರಬಿದ್ದಿತು. ಮ್ಯಾಕ್‌ಬೆತ್‌ನೂ ಅವನ ಹೆಂಡತಿಯೂ ಸಾಕಷ್ಟು ದುಃಖ ಪ್ರದರ್ಶನ ಮಾಡಿದರು. ಸೇವಕರ ಮುಖವೆಲ್ಲ ರಕ್ತಸಿಕ್ತವಾಗಿದ್ದುದೂ, ಕತ್ತಿಯೂ ಅವರ ಬಳಿಯಲ್ಲೇ ಬಿದ್ದಿದ್ದುದೂ ಅವರ ಮೇಲೆ ಆರೋಪ ಹೊರಿಸಲು ಸಾಕಷ್ಟು ನಿದರ್ಶನಗಳಾಗಿದ್ದವು. ಇಷ್ಟೆಲ್ಲ ಇದ್ದರೂ ಸಹ ಎಲ್ಲರ ಸಂಶಯವೂ ಮ್ಯಾಕ್‌ಬೆತ್ ಮೇಲೆಯೇ ನೆಲಸಿತು. ಬಡಪಾಯಿಗಳಾದ ಆ ಮೂಢಸೇವಕರಿಗೆ ಇರಬಹುದಾದ್ದಕ್ಕಿಂತ, ಈ ಕೃತ್ಯವನ್ನೆಸಗಲು ಮ್ಯಾಕ್‌ಬೆತ್‌ಗೇ ಹೆಚ್ಚು ಪ್ರಲೋಭನೆಗಳ ಒತ್ತಾಸೆಯಿದ್ದಿತೆಂಬುದು ಎಲ್ಲರ ಗಮನಕ್ಕೂ ಬಂದಿತ್ತು. ಡಂಕನನ ಪುತ್ರರಿಬ್ಬರೂ ಪಲಾಯನ ಮಾಡಿದರು. ಹಿರಿಯನಾದ ಮಾಲ್‌ಕೋಮ್ ಇಂಗ್ಲಿಷ್ ರಾಜಾಸ್ಥಾನದಲ್ಲಿ ಆಶ್ರಯ ಹೊಂದಿದನು. ಕಿರಿಯ ಡೊನಾಲ್ಬೇನ್ ಐರ್ಲೆಂಡಿಗೆ ತಪ್ಪಿಸಿಕೊಂಡು ಓಡಿಹೋದನು.

ರಾಜನ ನಂತರ ಪದವಿಗೇರಬೇಕಾಗಿದ್ದ ರಾಜಪುತ್ರರಿಬ್ಬರೂ ಹೀಗೆ ಸಿಂಹಾಸನವನ್ನು ತೆರವು ಮಾಡಿ ಓಡಿಹೋದರು; ಆ ಮುಂದಿನ ಉತ್ತರಾಧಿಕಾರಿಯಾದ ಮ್ಯಾಕ್‌ಬೆತ್ ಸಿಂಹಾಸನವನ್ನೇರಿದನು. ಹೀಗೆ, ಮಂತ್ರವಾದಿನಿಯರ ಭವಿಷ್ಯ ಅಕ್ಷರಶಃ ನಿಜವಾಯಿತು.

ಇಷ್ಟು ಉಚ್ಚಸ್ಥಿತಿಗೇರಿದ್ದರೂ ಸಹ, ಮ್ಯಾಕ್‌ಬೆತ್ ಮತ್ತು ಅವನ ರಾಣಿಗೆ ಮಂತ್ರವಾದಿನಿಯರ ಇನ್ನೊಂದು ಭವಿಷ್ಯದ ನುಡಿಯನ್ನು ಮರೆಯುವುದು ಅಸಾಧ್ಯವಾಯಿತು. ಮ್ಯಾಕ್‌ಬೆತ್ ರಾಜನಾದರೂ ಸಹ, ಅವನಾನಂತರ ರಾಜರಾಗುವವರು ಅವನ ಮಕ್ಕಳಲ್ಲ, ಬ್ಯಾಂಕೋನ ಮಕ್ಕಳು ಎಂಬುದು ಅವರ ನೆನಪಿನಲ್ಲಿದ್ದಿತು. ಈ ಚಿಂತನೆಯಿಂದ, ಕೇವಲ ಬ್ಯಾಂಕೋನ ಸಂತಾನಕ್ಕೆ ಸಿಂಹಾಸನವನ್ನು ಬಿಟ್ಟುಕೊಡುವ ಸಲುವಾಗಿ ಈ ಬಗೆಯಲ್ಲಿ ತಮ್ಮ ಕೈಗಳನ್ನು ರಕ್ತಕಲುಷಿತ ಮಾಡಿಕೊಂಡು ಆ ಮಹಾ ಪಾತಕವನ್ನೆಸಗಿದೆವೇ ಎಂಬ ಚಿಂತನೆಯಿಂದ ಅವರ ಅಂತರಾಳದಲ್ಲಿ ಹೊಯ್ದಾಟವಾರಂಭವಾಗಿತ್ತು. ಕೊನೆಗೆ ಅವರು ಬ್ಯಾಂಕೋನನ್ನೂ ಅವನ

ಮಗನನ್ನೂ ಕೊಲ್ಲಲು ನಿರ್ಧರಿಸಿದರು. ಆ ಮೂಲಕವಾಗಿ ತಮ್ಮ ವಿಷಯ ದಲ್ಲಿ ನಿಜವಾಗಿ ಪರಿಣಮಿಸಿದ ಮಂತ್ರವಾದಿನಿಯರ ಭವಿಷ್ಯವನ್ನು, ಬ್ಯಾಂಕೋನ ವಿಷಯದಲ್ಲಿ ಹುಸಿಯಾಗುವಂತೆ ಮಾಡಲು ನಿರ್ಧರಿಸಿದರು!

ಈ ಉದ್ದಿಶ್ಯ ಸಾಧನೆಗಾಗಿಯೇ ಅವರು ದೊಡ್ಡ ಭೋಜನಕೂಟ ವನ್ನು ಏರ್ಪಡಿಸಿ, ಪ್ರಮುಖರಾದ ಶ್ರೀಮಂತರನ್ನೆಲ್ಲಾ ಆಹ್ವಾನಿಸಿದರು. ಉಳಿದವರೊಂದಿಗೆ, ಅಧಿಕ ಗೌರವ ಪ್ರದರ್ಶನದೊಡನೆ ಬ್ಯಾಂಕೋ ಮತ್ತು ಅವನ ಮಗ ಫ್ಲಿಯಾನ್ಸ್‌ರನ್ನೂ ಆಮಂತ್ರಿಸಿದ್ದರು. ಆ ಕಾಳರಾತ್ರಿ, ಬ್ಯಾಂಕೋ ಅರಮನೆಗೆ ಹೋಗುವ ಹಾದಿಯಲ್ಲಿ ಮ್ಯಾಕ್‌ಬೆತ್ ಕೊಲೆ ಗಡುಕರನ್ನು ನಿಯೋಜಿಸಿದ್ದನು. ಅವರು ಬ್ಯಾಂಕೋನನ್ನು ತಿವಿದು ಕೊಂದರು. ಆದರೆ ಗಲಭೆಯಲ್ಲಿ ಫ್ಲಿಯಾನ್ಸ್ ತಪ್ಪಿಸಿಕೊಂಡು ಓಡಿ ಹೋದನು. ಈ ಫ್ಲಿಯಾನ್ಸ್‌ನಿಂದಲೇ ಮುಂದೆ ಸ್ಕಾಟ್ಲೆಂಡಿನ ಸಿಂಹಾಸನವ ನ್ನೇರಲಿದ್ದ ರಾಜವಂಶವೊಂದು ಜನ್ಮ ತಾಳಿತು. ಅವರಲ್ಲಿ ಕೊನೆಯವನೇ ಸ್ಕಾಟ್ಲೆಂಡಿನ ಆರನೆಯ ಜೇಮ್ಸ್ ಅಥವಾ ಇಂಗ್ಲೆಂಡಿನ ಮೊದಲನೆಯ ಜೇಮ್ಸ್. ಇವನ ಕಾಲದಲ್ಲಿ ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡ್ ರಾಜ್ಯಗಳು ಒಂದಾಗಿ ಸೇರಿಹೋದವು.

ಅಂದಿನ ಭೋಜನಕೂಟದಲ್ಲಿ ರಾಣಿ ಅತಿ ಮಧುರವಾದ, ರಾಜ ಯೋಗ್ಯವಾದ ಶಿಷ್ಟಾಚಾರಗಳನ್ನು ಪ್ರದರ್ಶಿಸಿದಳು. ಅಲ್ಲಿದ್ದವರೆಲ್ಲರನ್ನು ಒಲಿಸಿಕೊಳ್ಳುವಂತಹ ಆದರದಿಂದ, ಲಾವಣ್ಯದಿಂದ ತನ್ನ ಆತಿಥ್ಯವನ್ನು ಮೆರೆದಳು. ಮ್ಯಾಕ್‌ಬೆತ್ ತನ್ನ ಶ್ರೀಮಂತರೊಂದಿಗೂ, ಉಚ್ಚಶ್ರೇಣಿಯ ಪ್ರಜೆಗಳೊಂದಿಗೂ ಸ್ವೇಚ್ಛೆಯಾಗಿ ಸಂಭಾಷಿಸಿದನು. ಅವನು ತನ್ನ 'ಪ್ರಿಯ ಮಿತ್ರ' ಬ್ಯಾಂಕೋ ಮಾತ್ರ ಅಲ್ಲಿದ್ದುದಾದರೆ, ದೇಶದ ಪರಮಯೋಗ್ಯ ವಸ್ತುಗಳೆಲ್ಲ ಆಗ ತನ್ನ ಬಳಿ ಇರುವುದೆಂದು ಭಾವಿಸಬಹುದಿತ್ತು ಎಂದು ನುಡಿದನು. ಬ್ಯಾಂಕೋ ಬರದಿರುವುದಕ್ಕೆ ಕಾರಣ ಉದಾಸೀನತೆಯೇ ಇರಬಹುದೆಂದನು. ಅವನಿಗೇನಾದರೂ ವಿಪತ್ತು ಉಂಟಾಗಿರಬಹುದೆಂದು ಭಯಪಡುವುದಕ್ಕಿಂತ ಅವನಾ ಅಲಕ್ಷ್ಯಕ್ಕಾಗಿ ನಿಂದಿಸುವುದೇ ಸಮಂಜಸ ವಾಗಬಹುದೆಂದನು. ಆದರೆ, ಅವನು ಈ ಮಾತುಗಳನ್ನು ಉಚ್ಚರಿಸುತ್ತಿದ್ದ ಕ್ಷಣದಲ್ಲಿಯೇ ಕೌತುಕವೊಂದು ನಡೆಯಿತು: ಮ್ಯಾಕ್‌ಬೆತ್ ಕೊಲೆ ಮಾಡಿಸಿದ್ದ ಬ್ಯಾಂಕೋನ ಪ್ರೇತ ಕೋಣೆಯನ್ನು ಪ್ರವೇಶಿಸಿತು; ಮ್ಯಾಕ್‌ಬೆತ್ ಇನ್ನೇನು ಕೂಡುವುದರಲ್ಲಿದ್ದ ಪೀಠದಮೇಲೆಯೇ ಕುಳಿತುಕೊಂಡಿತು!

ಮ್ಯಾಕ್‌ಬೆತ್ ಬಹು ಧೀರನಾದವನು. ಸೈತಾನನನ್ನೂ ಸಹ ನಡುಕವಿಲ್ಲದೆ ಎದುರಿಸಬಲ್ಲವನು. ಆದರೆ ಈ ಭೀಕರ ಸನ್ನಿವೇಶದಲ್ಲಿ ಅವನ ಕೆನ್ನೆಗಳು ಭಯದ ದೆಸೆಯಿಂದ ಬಿಳುಪೇರಿದವು, ಕಣ್ಣುಗಳು ಆ ಪ್ರೇತದಲ್ಲಿಯೇ ನೆಟ್ಟು ಹೋದವು. ನಿರ್ವೀರ್ಯನಾಗಿ ಅವನು ನಿಂತುಬಿಟ್ಟನು. ಅವನ ರಾಣಿಗೂ ಅಲ್ಲಿ ನೆರೆದಿದ್ದ ಇತರರಿಗೂ ಅಲ್ಲಿ ಏನೂ ಕಾಣಿಸಲಿಲ್ಲ. ಅವನು ಕೇವಲ ಶೂನ್ಯ ವಾಗಿದ್ದ ಪೀಠವನ್ನು ದೃಷ್ಟಿಸಿ ನೋಡುತ್ತಿರುವನೆಂದು ಅವರಿಗೆ ತೋರಿತು. ಆದರೂ ಅವನಿಗೆ ಚಿತ್ತಭ್ರಾಂತಿಯ ಉದ್ರೇಕಾವಸ್ಥೆಯೊಂದು ಉಂಟಾಗಿರಬಹು ದೆಂದು ಬಗೆದರು. ರಾಣಿ ಅವನನ್ನು ಪಿಸುದನಿಯಲ್ಲಿ ನಿಂದಿಸಿದಳು. ಹಿಂದೆ ಡಂಕನ್‌ನನ್ನು ಕೊಲ್ಲಲಿದ್ದಾಗ ಖಡ್ಗ ತನ್ನಿದಿರು ಕಾಣಿಸಿಕೊಂಡಂತೆ ಭ್ರಮೆ ಯುಂಟು ಮಾಡಿದ ಕಲ್ಪನೆಯೇ ಈಗಲೂ ಅವನನ್ನು ಕಾಡುತ್ತಿರುವುದೆಂದು ಅವನ ಕಿವಿಯಲ್ಲಿ ಉಸುರಿದಳು. ಆದರೆ ಮ್ಯಾಕ್‌ಬೆತ್‌ನಿಗೆ ಮಾತ್ರ ಪ್ರೇತ ಇನ್ನೂ ಕಾಣಿಸುತ್ತಲೇ ಇತ್ತು. ಅವರೆಲ್ಲ ಏನೇ ಹೇಳಿದರೂ ಅವನತ್ತ ಲಕ್ಷ್ಯ ಕೊಡದೆ, ಪ್ರೇತವನ್ನು ಸಂಬೋಧಿಸಿ ಮಾತನಾಡತೊಡಗಿದನು. ಬುದ್ಧಿ ವಿಕಲ್ಪದ ಪರಿಣಾಮವೆಂಬಂತೆ ತೋರುತ್ತಿದ್ದ ಅವನ ಮಾತುಗಳು ಅಷ್ಟೇ ಅರ್ಥಗರ್ಭಿತವಾಗಿಯೂ ಇದ್ದವು. ಇದರಿಂದ ರಾಣಿ ತಮ್ಮ ಭೀಕರ ರಹಸ್ಯ ಬಯಲಾಗಬಹುದೆಂದು ಭಯಪಟ್ಟಳು. ಆತುರದಿಂದ, ಮ್ಯಾಕ್‌ಬೆತ್ ಆಗಾಗ ಇಂತಹ ಅಸ್ವಸ್ಥತೆಗೊಳಗಾಗುತ್ತಿದ್ದನೆಂಬ ನೆಪ ಹೇಳಿ, ಆ ಕೂಡಲೇ ಅತಿಥಿಗಳನ್ನೆಲ್ಲ ಕಳುಹಿಸಿಬಿಟ್ಟಳು.

ಇಂತಹುದೇ ಎಷ್ಟೋ ಭಯಾನಕ ಭ್ರಾಂತಿಗಳಿಗೆ ಮ್ಯಾಕ್‌ಬೆತ್ ಒಳ ಗಾಗುತ್ತಿದ್ದನು. ನಿದ್ರೆಯಲ್ಲಿ ಭಯಂಕರ ದುಃಸ್ವಪ್ನಗಳು ಅವನನ್ನೂ ಅವನ ರಾಣಿಯನ್ನೂ ಕಾಡುತ್ತಿದ್ದವು. ಬ್ಯಾಂಕೋನ ರಕ್ತಪಾತಕ್ಕಿಂತ ಹೆಚ್ಚಾಗಿ ಫ್ಲಿಯಾನ್ಸ್‌ನ ಪಲಾಯನವೇ ಅವರಿಗೆ ಚಿಂತೆಗೆ ಕಾರಣವಾಗಿದ್ದಿತು. ಫ್ಲಿಯಾನ್ಸ್‌ನನ್ನು ಮುಂದೆ ತಮ್ಮ ಸಂತಾನಕ್ಕೆ ರಾಜ್ಯ ದೊರೆಯದಂತೆ ಮಾಡ ಬಲ್ಲುದಾಗಿದ್ದ ರಾಜಪರಂಪರೆಯ ಜನಕನೆಂದು ಅವರು ಪರಿಗಣಿಸಿದ್ದರಷ್ಟೆ. ಈ ಬಗೆಯ ವ್ಯಗ್ರಾಲೋಚನೆಗಳ ನಡುವೆ ಅವರಿಗೆ ಮನಃಶಾಂತಿ ದೊರೆಯದಾ ಯಿತು. ಕೊನೆಗೆ ಮ್ಯಾಕ್‌ಬೆತ್ ಪುನಃ ಆ ಮಂತ್ರವಾದಿನಿಯರನ್ನು ಹುಡುಕಿ ನೋಡಲು ನಿರ್ಧರಿಸಿದನು. ಅವರಿಂದ ಮುಂದೆ ಸಂಭವಿಸಬಹುದಾದ ಎಲ್ಲ ಕೆಡಕುಗಳನ್ನು ತಿಳಿಯಲು ಬಯಸಿದನು.

ಪಾಳುಭೂಮಿಯಲ್ಲಿದ್ದ ಗುಹೆಯೊಂದರಲ್ಲಿ ಮ್ಯಾಕ್‌ಬೆತ್ ಅವರನ್ನು

ಕಂಡನು. ಅವರಿಗೆ ಅವನು ಬರುವನೆಂಬುದು ಪೂರ್ವಭಾವಿಯಾಗಿಯೇ ತಿಳಿದಿದ್ದಿತು. ಅದರಿಂದಲೇ ಅವರು ತಮ್ಮ ಅಧಮ ದೈವಗಳನ್ನೆಲ್ಲ ಕರೆದು ಭವಿಷ್ಯ ನುಡಿಯುವಂತೆ ಬೇಡುವ ಸಲುವಾಗಿ ಘೋರವಾದ ಮಾಟ, ಮಂತ್ರಗಳ ಪ್ರಯೋಗದಲ್ಲಿ ತೊಡಗಿದ್ದರು. ಅವರು ಉಪಯೋಗಿಸುತ್ತಿದ್ದ ಭೀಭತ್ಸಕ ವಸ್ತುಗಳೋ!—ಕಪ್ಪೆಗಳು, ಬಾವಲಿಗಳು, ಸರ್ಪಗಳು; ದ್ವಿಚರಪ್ರಾಣಿಯೊಂದರ ಕಣ್ಣು, ನಾಯಿಯ ನಾಲಿಗೆ, ಹಲ್ಲಿಯ ಕಾಲು, ರಾತ್ರಿಗೂಬೆಯ ರೆಕ್ಕೆ, ರೆಕ್ಕೆ-ಸರ್ಪದ ಹುರುಪು, ತೋಳದ ಹಲ್ಲು, ಹೊಟ್ಟೆಬಾಕ ಹುಲಿಮೀನಿನ ಜಠರ. ಮಂತ್ರಗಾತಿಯೊಬ್ಬಳ ಹೆಣ! ವಿಷಪೂರಿತ ಮೂಲಿಕೆಯ ಬೇರು (ಇದು ಪ್ರಭಾವಶಾಲಿಯಾಗಬೇಕಾದರೆ ಕತ್ತಲಿನಲ್ಲಿ ಅಗೆಯಬೇಕು), ಇಷ್ಟೇ ಅಲ್ಲ–ಮೇಕೆಯ ಪಿತ್ತರಸ, ಜ್ಯೂನ ಪಿತ್ತಕೋಶ, ಜೊತೆಗೆ ಸ್ಮಶಾನದಲ್ಲಿ ಬೆಳೆಯುವ "ಯೂ" ಮರದ ಚೂರುಗಳು, ಸತ್ತ ಮಗುವಿನ ಕೈಬೆರಳು–ಇವಿಷ್ಟೂ ಅವರ ಮಂತ್ರ ಸಾಧನಗಳು! ಇವೆಲ್ಲವನ್ನು ದೊಡ್ಡ ಕಡಾಯಿಯೊಂದರಲ್ಲಿ ಕುದಿಸಲು ಇಟ್ಟಿದ್ದರು. ಅದು ಬಿಸಿಯೇರಿದಂತೆಲ್ಲಾ, ಕಪಿಯರಕ್ತವನ್ನು ಅದಕ್ಕೆ ಬೆರಸಿ ತಣ್ಣಗೆ ಮಾಡುತ್ತಿದ್ದರು. ಇವೆಲ್ಲದಕ್ಕೆ ತನ್ನ ಮರಿಯನ್ನೇ ತಿಂದುಹಾಕಿದ್ದ ಹೆಣ್ಣುಹಂದಿಯ ರಕ್ತವನ್ನು ಸುರಿಯುತ್ತಿದ್ದರು. ಉರಿಯುತ್ತಿದ್ದ ಬೆಂಕಿಗೆ ಕೊಲೆಗಡುಕನ ಗಲ್ಲುಮರದಿಂದ ತೆಗೆದ ಕೊಬ್ಬನ್ನು ಸುರಿಯುತ್ತಿದ್ದರು. ಈ ಎಲ್ಲ ಮಂತ್ರಮಾಟಗಳಿಂದ ಅವರು ಅಧಮ ಚೇತನಗಳಾದ ಭೂತಗಳನ್ನು ತಮ್ಮ ಪ್ರಶ್ನೆಗೆ ಉತ್ತರ ಕೊಡುವಂತೆ ವಶಪಡಿಸಿಕೊಳ್ಳುತ್ತಿದ್ದರು.

ಮ್ಯಾಕ್‌ಬೆತ್‌ನ ಪ್ರಶ್ನೆಗಳಿಗೆ ತಾವೇ ಪರಿಹಾರ ಹೇಳುವುದೋ ಇಲ್ಲವೇ ತಮಗೂ ಮಿಗಿಲಾದ ಭೂತಗಳಿಂದಲೇ ಉತ್ತರ ಕೇಳಲು ಅವನು ಬಯಸುವನೋ ಎಂದವರು ಕೇಳಿದರು. ಮ್ಯಾಕ್‌ಬೆತ್, ತಾನು ಕಂಡ ಈ ಎಲ್ಲ ಭಯಂಕರ ಸಂಸ್ಕಾರಗಳಿಂದ ಸ್ವಲ್ಪವೂ ಎದೆಗುಂದದೆ, ಧೈರ್ಯವಾಗಿ "ಎಲ್ಲಿವೆ ಅವು? ನಾನು ಅವನ್ನೇ ನೋಡಲು ಬಯಸುತ್ತೇನೆ" ಎಂದನು. ಆಗ ಅವರು ಭೂತಗಳನ್ನು ಕರೆದರು. ಮೂರು ಭೂತಗಳು ಒಂದಾದ ಮೇಲೊಂದು ಬಂದವು. ಅವುಗಳಲ್ಲಿ ಮೊದಲನೆಯದು ಆಯುಧ ಧರಿಸಿದ ತಲೆಯ ಆಕಾರದಲ್ಲಿ ಉದ್ಭವಿಸಿತು. ಅದು ಮ್ಯಾಕ್‌ಬೆತ್‌ನನ್ನು ಅವನ ಹೆಸರಿನಿಂದ ಸಂಬೋಧಿಸಿತು, ಅವನು ಫೈಫ್‌ನ ಒಡೆಯನ ವಿಷಯದಲ್ಲಿ ಎಚ್ಚರಿಕೆ ವಹಿಸಬೇಕೆಂದು ಹೇಳಿತು. ಮ್ಯಾಕ್‌ಬೆತ್ ಆ ಭೂತಕ್ಕೆ ವಂದನೆಗಳನ್ನರ್ಪಿಸಿದನು. ಅವನಿಗೆ ಫೈಫ್‌ನ ಒಡೆಯನಾದ ಮ್ಯಾಕ್‌ಡಫ್‌ನಲ್ಲಿ ಮೊದಲಿನಿಂದ ಮತ್ಸರವಿದ್ದಿತು.

ಎರಡನೆಯ ಭೂತ ರಕ್ತಸಿಕ್ತವಾದ ಮಗುವಿನ ಆಕಾರದಲ್ಲಿ ಮೇಲಕ್ಕೆದ್ದಿತು. ಅದೂ ಮ್ಯಾಕ್‌ಬೆತ್‌ನನ್ನು ಹೆಸರಿನಿಂದ ಸಂಬೋಧಿಸಿತು. ಮ್ಯಾಕ್‌ಬೆತ್ ಎಲ್ಲ ಭೀತಿಗಳನ್ನೂ ತ್ಯಜಿಸಿ ಮಾನವಶಕ್ತಿಯನ್ನು ತಿರಸ್ಕರಿಸಬೇಕೆಂದೂ, ಹೆಂಗಸಿನಿಂದ ಜನಿಸಿದ ಯಾವ ಮನುಷ್ಯನೂ ಅವನ ಕೂದಲನ್ನು ಸಹ ಕೊಂಕಿಸಲಾರನೆಂದೂ ಅದು ಹೇಳಿತು. ಅಲ್ಲದೆ ಅವನು ಸದಾ ರಕ್ತಪಿಪಾಸುವೂ, ಧೈರ್ಯಶಾಲಿಯೂ, ದೃಢಮನಸ್ಕನೂ ಆಗಿರಬೇಕೆಂದು ತಿಳಿಸಿತು. ಆಗ ರಾಜ "ಹಾಗಿದ್ದರೆ ನೀನು ಬದುಕಿಕೋ ಮ್ಯಾಕ್‌ಡಫ್ ! ನಿನ್ನಿಂದ ನನಗೇನು ಭಯ ? ಆದರೂ ಸಹ ಭವಿಷ್ಯವನ್ನು ಮತ್ತೂ ಭದ್ರಗೊಳಿಸುವ ಸಲುವಾಗಿ ನಿನ್ನನ್ನು ಕೊಲ್ಲಲೇ ಬೇಕು. ಅನಂತರವೇ ನಾನು ಹೇಡಿಯಾದ ನನ್ನೀ 'ಭೀತಿ'ಯನ್ನು ಹುಸಿಗೊಳಿಸಬಹುದು. ಗುಡುಗು ಸಿಡಿಲುಗಳೆದುರಿನಲ್ಲಿ ಸಹ ಅದು ನಿದ್ರಿಸಬಹುದೆಂದು ಧೈರ್ಯ ಹೇಳಬಹುದು" ಎಂದನು.

ಆ ಭೂತದ ನಂತರ, ಮೂರನೆಯ ಭೂತವು ತಲೆಯಮೇಲೆ ಕಿರೀಟವಿಟ್ಟ ಮಗುವಿನ ಆಕೃತಿಯಲ್ಲಿ ಮೇಲೆದ್ದಿತು. ಮ್ಯಾಕ್‌ಬೆತ್‌ನನ್ನು ಸಂಬೋಧಿಸುತ್ತಾ ಅದು ಒಳಸಂಚಿಗೆ ಅವನೆಂದೂ ಹೆದರಬೇಕಿಲ್ಲವೆಂದು ಆಶ್ವಾಸನೆ ಕೊಟ್ಟಿತು. ಏಕೆಂದರೆ, ಬರ್ನ್ನಾಮ್ ಮತ್ತು ಡನ್ಸಿನೇನ್ ಗುಡ್ಡಗಳ ನಡುವಿನ ಕಾಡು ಅವನೆದುರಾಗಿ ನಡೆದು ಬರುವವರೆಗೂ ಅವನು ಯಾರಿಗೂ ಸೋಲುವುದಿಲ್ಲವೆಂದೂ ಹೇಳಿತು. ಆಗ ಮ್ಯಾಕ್‌ಬೆತ್ "ಇದೆಂತಹ ಶುಭ ನುಡಿಗಳು. ಸವಿಯಾದ ನುಡಿಗಳು ! ಒಳ್ಳೆಯದು, ಯಾರುತಾನೇ ಕಾಡಿನಲ್ಲಿ ನೆಲದೊಳಗೆ ಹುದುಗಿಹೋಗಿರುವ ಬೇರುಗಳಿಂದ ಮರಗಳನ್ನು ಕದಲಿಸಬಲ್ಲರು ? ಇಡೀ ಕಾಡನ್ನೇ ಚಲಿಸುವಂತೆ ಯಾರು ಮಾಡಬಲ್ಲರು ? ನಾನು ಮಾನವ ಜೀವಿಸಬಹುದಾದಷ್ಟು ಕಾಲವೂ ಬದುಕುವೆನೆಂದು ಈಗ ಅರಿತೆ. ನನಗೆ ಯಾವ ಅಕಾಲಮೃತ್ಯುವಿನ ಭಯವೂ ಇಲ್ಲವೆಂದು ತಿಳಿಯಿತು. ಆದರೆ ನಿಮ್ಮಿಂದ ಇನ್ನೊಂದು ವಿಷಯನ್ನು ಅರಿಯಲು ನಾನು ಕಾತರಪಡುತ್ತಿದ್ದೇನೆ. ನಿಮ್ಮ ಶಕ್ತಿಗೆ ಸಾಧ್ಯವಿದ್ದಲ್ಲಿ ಹೇಳಿ, ದಯವಿಟ್ಟು ಹೇಳಿ. ಈ ರಾಜ್ಯದಲ್ಲಿ ಬ್ಯಾಂಕೋನ ವಂಶಪರಂಪರೆ ಆಡಳಿತ ವಹಿಸಿ ಆಳುವುದೇ ತಿಳಿಸಿ" ಎಂದನು. ಕಡಾಯಿ ಆಗ ನೆಲಕ್ಕೆ ಕುಸಿದುಬಿದ್ದಿತು. ಗಾನವೊಂದರ ಶಬ್ದ ತೇಲಿಬಂದಿತು. ರಾಜಾಕೃತಿಯ ಎಂಟು ಛಾಯೆಗಳು ಮ್ಯಾಕ್‌ಬೆತ್‌ನನ್ನು ಹಾಯ್ದುಹೋದವು. ಅವುಗಳಲ್ಲಿ ಕಡೆಯವನು ಬ್ಯಾಂಕೋ. ಅವನ ಕೈಯಲ್ಲಿ ಒಂದು ಕನ್ನಡಿ ಇದ್ದಿತು. ಅದರಲ್ಲಿ ಇನ್ನೂ ಎಷ್ಟೋ ಆಕೃತಿಗಳು, ಕಾಣಬಂದವು

ಮೈಯೆಲ್ಲಾ ರಕ್ತಮಯವಾಗಿ ನಿಂತಿದ್ದ ಬ್ಯಾಂಕೋ ಮ್ಯಾಕ್‌ಬೆತ್‌ನನ್ನು ನೋಡಿ ಮುಗುಳ್ನಗುತ್ತಾ ಆಕೃತಿಗಳೆಡೆಗೆ ಬೆರಳು ತೋರಿದನು. ಇದರಿಂದ ಮ್ಯಾಕ್‌ಬೆತ್ ಅವರೆಲ್ಲ ತನ್ನ ನಂತರ ಸ್ಕಾಟ್ಲೆಂಡಿನಲ್ಲಿ ಆಡಳಿತ ನಡೆಸಲಿದ್ದ ಬ್ಯಾಂಕೋನ ವಂಶಪರಂಪರೆಯೆಂಬುದನ್ನು ಗ್ರಹಿಸಿದನು. ನಂತರ ಮಂತ್ರವಾದಿನಿಯರು ಮ್ಯಾಕ್‌ಬೆತ್‌ನೆದುರು ಮೃದುಮಧುರ ಸಂಗೀತವನ್ನು ಹಾಡುತ್ತಾ, ಕುಣಿಯುತ್ತಾ ಅವನಿಗೆ ಗೌರವ, ಸ್ವಾಗತಗಳನ್ನು ಸಂಜ್ಞೆಯಿಂದ ಸೂಚಿಸಿ, ನಂತರ ಮಾಯವಾಗಿ ಹೋದರು. ಆ ಗಳಿಗೆಯಿಂದ ಮ್ಯಾಕ್‌ಬೆತ್ ರಕ್ತಪಿಪಾಸುವಾದನು. ಅವನ ಆಲೋಚನೆಗಳೆಲ್ಲಾ ಘೋರ ಭೀಕರವಾಗಿ ಹೋದವು.

ಮಂತ್ರವಾದಿನಿಯರ ಗುಹೆಯಿಂದ ಹೊರಬಿದ್ದು ಹಿಂತಿರುಗಿದ ಕೂಡಲೇ ಮ್ಯಾಕ್‌ಬೆತ್‌ನ ಕಿವಿಗೆ ಬಿದ್ದ ಮೊದಲನೆಯ ಸುದ್ದಿ ಫೈಫ್‌ನ ಶ್ರೀಮಂತ ಮ್ಯಾಕ್‌ಡಫ್‌ನ ಪಲಾಯನವಾರ್ತೆಯಾಗಿತ್ತು. ಮ್ಯಾಕ್‌ಡಫ್ ಗತಿಸಿದ ರಾಜನ ಹಿರಿಯ ಮಗ ಮಾಲ್ಕೋಮ್‌ನ ಕೈಕೆಳಗೆ ಸಿದ್ಧವಾಗಿದ್ದ ಸೈನ್ಯವನ್ನು ಸೇರಿದನೆಂದು ಅವಳಿಗೆ ತಿಳಿಯಿತು. ಮ್ಯಾಕ್‌ಬೆತ್‌ನನ್ನು ಸಿಂಹಾಸನದಿಂದುರುಳಿಸಿ, ನೈಜ ಉತ್ತರಾಧಿಕಾರಿಯಾದ ಮಾಲ್ಕೋಮನಿಗೆ ಪಟ್ಟಕಟ್ಟುವುದೇ ಅವನ ಉದ್ದಿಶ್ಯವಾಗಿದ್ದಿತು. ಈ ಸುದ್ದಿ ಕೇಳಿದ ಮ್ಯಾಕ್‌ಬೆತ್ ಕ್ರೋಧನಿಂದ ಸಿಡಿದೆದ್ದನು. ಮ್ಯಾಕ್‌ಡಫ್‌ನ ಅರಮನೆಯನ್ನು ಮುತ್ತಿ, ಅಲ್ಲಿ ಉಳಿದುಕೊಂಡಿದ್ದ ಮ್ಯಾಕ್‌ಡಫ್‌ನ ಹೆಂಡತಿ ಮಕ್ಕಳನ್ನು ತನ್ನ ಖಡ್ಗಕ್ಕೆ ಬಲಿಕೊಟ್ಟನು. ಮ್ಯಾಕ್‌ಡಫ್‌ನಿಗೆ ಯಾರು ಯಾರು ಬಂಧುಗಳೆಂದು ತಿಳಿದರೂ ಅವರನ್ನೆಲ್ಲಾ ಇದೇ ಬಗೆಯಲ್ಲಿಯೇ ಕೊಲೆಗೀಡುಮಾಡಿದನು.

ಈ ಕೃತ್ಯವೂ, ಇಂತಹ ಇನ್ನೂ ಅನೇಕವೂ ಅವನ ಪ್ರಮುಖ ಪ್ರಜೆಗಳ ಮನಸ್ಸನ್ನು ಕೆಡಿಸಿದವು. ಅವರೆಲ್ಲ ಅವನಿಂದ ದೂರವಾದರು. ಸಾಧ್ಯವಿದ್ದಷ್ಟು ಮಂದಿ ಪಲಾಯನ ಮಾಡಿದರು. ಇಂಗ್ಲೆಂಡಿನಲ್ಲಿ ಪ್ರಬಲವಾದ ಸೈನ್ಯವನ್ನು ಸಜ್ಜುಗೊಳಿಸಿ ತ್ವರೆಯಿಂದ ಮುಂದುವರಿಯುತ್ತಿದ್ದ ಮಾಲ್ಕೋಮ್ ಮತ್ತು ಮ್ಯಾಕ್‌ಡಫ್‌ರನ್ನು ಸೇರಿ ಕೊಂಡರು. ಉಳಿದವರು ಮ್ಯಾಕ್‌ಬೆತ್‌ನ ಭಯದಿಂದಾಗಿ ನೇರವಾಗಿ ಯಾವ ವಿಧದಲ್ಲೂ ಭಾಗವಹಿಸದಿದ್ದರೂ ಸಹ, ರಹಸ್ಯವಾಗಿ ಅವರಿಗೆ ವಿಜಯವಾಗಲೆಂದು ಹಾರೈಸುತ್ತಿದ್ದರು. ಅವನ ಸೈನ್ಯ ಪುನರುಜ್ಜೀವಗೊಳ್ಳುವುದೇ ಅಸಾಧ್ಯವಾಯಿತು. ಹಿಂಸಕನೆಂದು ಎಲ್ಲರೂ ಅವನನ್ನು ದ್ವೇಷಿಸುತ್ತಿದ್ದರು. ಯಾರೂ ಅವನನ್ನು ಪ್ರೀತಿಸುತ್ತಿರಲಿಲ್ಲ, ಗೌರವಿಸುತ್ತಿರಲಿಲ್ಲ; ಎಲ್ಲರೂ ಅವನಲ್ಲಿ ಸಂಶಯ ತಳೆದಿದ್ದರು. ಆಗ ಅವನಿಗೆ,

ತಾನೇ ಕೊಲೆಮಾಡಿದ್ದು, ಈಗ ಸುಖವಾಗಿ ಗೋರಿಯಲ್ಲಿ ನಿದ್ರಿಸುತ್ತಿದ್ದ ಡಂಕನನ ದೆಶೆಯನ್ನು ನೋಡಿ ಕರುಬುವಂತಾಯಿತು. ಡಂಕನ್ ಭೀಕರ ದ್ರೋಹಕ್ಕೊಳಗಾಗಿ ಈ ಲೋಕವನ್ನು ತ್ಯಜಿಸಿದ್ದನು. ಆದರೆ ಈಗ ಆಯುಧ ವಾಗಲೀ, ವಿಷವಾಗಲೀ, ಗೃಹಕಲಹಗಳಾಗಲೀ ಹೊರ ದೇಶದ ವಿಪತ್ತುಗಳಾ ಗಲೀ ಅವನನ್ನು ಯಾವ ಬಗೆಯಲ್ಲೂ ಬಾಧಿಸಲಾರದಾಗಿದ್ದವು.

ಹೀಗಿರುವಾಗ, ಇತ್ತ ಅವನ ದುರುಳತೆಯಲ್ಲಿ ಏಕಮಾತ್ರ ಭಾಗಿಯಾಗಿದ್ದ ರಾಣಿ ಮೃತಳಾದಳು. ಇಬ್ಬರನ್ನೂ ರಾತ್ರಿಯಲ್ಲಿ ಕಾಡುತ್ತಿದ್ದ ಘೋರ ಸ್ವಪ್ನ ಗಳಿಂದ ಒಂದೇ ಒಂದು ಕ್ಷಣಮಾತ್ರವಾದರೂ ಮ್ಯಾಕ್‌ಬೆತ್ ಶಾಂತಿ ಪಡೆಯು ತ್ತಿದ್ದುದೆಂದರೆ ಅವಳೆದೆಯಲ್ಲೇ. ಅವಳು ಕಳಂಕನ ಬೇಗುದಿಯನ್ನೂ, ಜನರ ದ್ವೇಷವನ್ನೂ ತಾಳಲಾರದೆ ಆತ್ಮಹತ್ಯ ಮಾಡಿಕೊಂಡಳೆಂದು ಪ್ರತೀತಿ ಇದೆ. ಈ ಘಟನೆಯಿಂದ ಮ್ಯಾಕ್‌ಬೆತ್ ಏಕಾಂಗಿಯಾಗಿಹೋದನು. ಅವನನ್ನು ಪ್ರೀತಿಸಲಾಗಲೀ, ಅವನಲ್ಲಿ ಆದರ ವಹಿಸಲಾಗಲೀ ಒಂದೇ ಒಂದು ಜೀವಿಯೂ ಇರಲಿಲ್ಲ. ಅವನು ತನ್ನ ದುರುದ್ದೇಶಗಳನ್ನು ಹೇಳಿಕೊಳ್ಳಲೂ ಸಹ ಒಬ್ಬ ಮಿತ್ರನಿಲ್ಲದಂತಾಯಿತು.

ಜೀವನದಲ್ಲಿ ಜಿಗುಪ್ಸೆ ಹುಟ್ಟಿ ಅವನು ಸಾವನ್ನು ಬಯಸಿದನು. ಆದರೆ ತ್ವರೆಯಿಂದ ಸಮೀಪಿಸುತ್ತಿದ್ದ ಮಾಲ್ಕೋಮನ ಸೈನ್ಯ ಅವನಲ್ಲಿ ಉಳಿದು ಕೊಂಡಿದ್ದ ಹಳೆಯ ವೀರ್ಯವನ್ನು ಹೊಡೆದೆಬ್ಬಿಸಿತು. ಅವನು ಸತ್ತರೂ ಬೆನ್ನಿಗೆ ಆಯುಧ ಕಟ್ಟಿಕೊಂಡೇ ಸಾಯುವೆನೆಂದು ನಿರ್ಧರಿಸಿದನು. ಆದರೆ ಮಂತ್ರವಾದಿನಿಯರ ಜಳ್ಳು ವಾಗ್ದಾನಗಳು ಅವನಲ್ಲಿ ಹುಟ್ಟಿಸಿದ್ದ ಹುಸಿನಂಬಿಕೆ ಇನ್ನು ಅಳಿದಿರಲಿಲ್ಲ. ಸ್ತ್ರೀಯಿಂದ ಜನಿಸಿದ ಯಾವನೂ ತನ್ನನ್ನು ಬಾಧೆಪಡಿ ಸಲಾರನೆಂದೂ, ಬರ್ನ್ನಾಮ್ ಕಾಡು ಡನ್ಸಿನೇನ್‌ಗೆ ನಡೆದು ಬರುವವರೆಗೆ ತನಗೆಂದೂ ಸೋಲಿಲ್ಲವೆಂದೂ ಆ ಭೂತಗಳು ಹೇಳಿದ್ದುದು ಅವನ ನೆನಪಿನಲ್ಲಿ ದ್ದಿತು. ಕಾಡು ನಡೆದು ಬರುವುದಂತೂ ಎಂದೆಂದೂ ಅಸಾಧ್ಯವೆಂದವನು ಪರಿಗಣಿಸಿದ್ದನು. ಆದ್ದರಿಂದ, ಯಾವ ಮುತ್ತಿಗೆಗೂ ಮಣಿಯದಷ್ಟು ದುರ್ಗಮ ವಾಗಿದ್ದ ತನ್ನ ಅರಮನೆಯಲ್ಲಿಯೇ ಅವನು ಭದ್ರವಾಗಿ ಕುಳಿತು. ಮಾಲ್ಕೋಮನ ಸೈನ್ಯ ಬಳಿಗೆ ಬರುವುದನ್ನೇ ಕಾಯತೊಡಗಿದನು. ಆಗ, ಒಂದುದಿನ, ದೂತನೊಬ್ಬನು ಧಾವಿಸುತ್ತಾ ಅವನ ಬಳಿಬಂದನು. ಆತನ ಮುಖ ಬೀಳುಪೇರಿ ಹೋಗಿತ್ತು. ಭಯದಿಂದ ನಡುಗುತ್ತಿದ್ದ ಅವನಿಗೆ ತಾನು ನೋಡಿದ್ದೇನೆಂಬುದನ್ನು ತಿಳಿಸುವುದೂ ಅಶಕ್ಯವೆಂದೇ ತೋರಿತು. ಬೆಟ್ಟದ

ಮೇಲೆ ತನ್ನ ಕಾವಲುಗೆಲಸದಲ್ಲಿ ನಿರತನಾಗಿ ಅವನು ನಿಂತಿದ್ದಾಗ ಬರ್ನ್ನಾಮ್ ನೆಡೆಗೆ ನೋಡಿದನೆಂದೂ, ಆಗ ಅವನಿಗೆ ಅನುಮಾನವೇ ಇಲ್ಲದೆ ಕಾಡು ಚಲಿಸುತ್ತಿರುವಂತೆ ತೋರಿದಾಗಿಯೂ ಅವನು ತಿಳಿಸಿದನು! ಮ್ಯಾಕ್‌ಬೆತ್ "ಸುಳ್ಳುಗಾರ! ಗುಲಾಮ!" ಎಂದರಚಿದನು–"ನೀನೇನಾದರೂ ಹುಸಿ ನುಡಿದಿದ್ದಲ್ಲಿ ಈ ಮುಂದಿನ ಮರಕ್ಕೆ ನಿನ್ನನ್ನು ನೇತುಹಾಕಿ ಬರಗೆಟ್ಟು ಸಾಯುವಂತೆ ಮಾಡುತ್ತೇನೆ. ಇಲ್ಲವೇ ನಿನ್ನ ಕತೆಯೇ ನಿಜವಾದಲ್ಲಿ, ಅದೇ ಕೆಲಸವನ್ನು ನೀನು ನನ್ನ ವಿಷಯದಲ್ಲಿ ಮಾಡುವುದೇ ಸರಿ" ಎಂದನು. ಈಗ ಮ್ಯಾಕ್‌ಬೆತ್ ನಿರ್ಧಾರವನ್ನು ಸಡಲಿಸಬೇಕಾಯಿತು. ಭೂತಗಳ ದ್ವಂದ್ವಾರ್ಥಸಚಕವಾದ ನುಡಿಗಳಲ್ಲಿ ಅವನು ಸಂಶಯಪಡತೊಡಗಿದನು. ಬರ್ನ್ನಾಮ್ ಕಾಡು ಡನ್ಸಿನೇನ್‌ಗೆ ಬರುವವರೆಗೂ ತಾನು ಭಯಪಡಬೇಕಿರಲಿಲ್ಲ. ಈಗ ಯಾವುದೋ ಒಂದು ಕಾಡಂತೂ ಚಲಿಸುತ್ತಿತ್ತು! ಮ್ಯಾಕ್‌ಬೆತ್ "ಹೇಗಾದರಾಗಲಿ, ಇವನು ಹೇಳುವುದು ನಿಜವಾದರೆ, ಈಗಲೇ ಆಯುಧ ಧರಿಸಿ ಹೊರಡೋಣ. ನಾವೀಗ ತಪ್ಪಿಸಿಕೊಂಡು ಓಡಿಹೋಗುವಂತಿಲ್ಲ, ಇಲ್ಲಿಯೇ ಇರುವಂತೆಯೂ ಇಲ್ಲ. ಈ ಜಗತ್ತಿನಲ್ಲಿ ನನಗೆ ಬೇಸರ ಹುಟ್ಟಿಹೋಗಿದೆ, ಜೀವನ ಮುಗಿಯಲೆಂದು ನಾನು ಬಯಸುತ್ತಿದ್ದೇನೆ" ಎಂದನು. ಈ ಹತಾಶೆಯ ನುಡಿಗಳೊಡನೆ, ಈಗ ಅರಮನೆಯ ಬಳಿಗೇರಿ ಬಂದಿದ್ದ ಶತ್ರುಗಳನ್ನೆದುರಿಸಲು ಅವನು ಮುಂದಾದನು.

ಕಾಡು ಚಲಿಸುತ್ತಿರುವುದೆಂಬ ಭಾವನೆಯನ್ನು ದೂತನಲ್ಲಿ ಉಂಟುಮಾಡಿದ ಸಂದರ್ಭ ಹೀಗಿತು; ಮುತ್ತಿಗೆ ಹಾಕಲಿದ್ದ ಸೈನ್ಯ ಬರ್ನ್ನಾಮ್ ಕಾಡಿನ ಮೂಲಕ ಹಾಯ್ದು ಬರಬೇಕಾದಾಗ ವಿಚಕ್ಷಣ ಸೇನಾಪತಿಯೇ ಆಗಿದ್ದ ಮಾಲ್ಕೋಮನಿಗೆ ಒಂದು ಯೋಜನೆ ಹೊಳೆಯಿತು. ಸೈನಿಕರೆಲ್ಲರೂ ತಮ್ಮ ನಿಜವಾದ ಸಂಖ್ಯೆಯನ್ನು ಮರೆಮಾಚುವ ಸಲುವಾಗಿ, ಪ್ರತಿಯೊಬ್ಬರೂ ಒಂದೊಂದು ಮರದ ಕೊಂಬೆಯನ್ನು ಕಡಿದು ತಮ್ಮ ಮುಂದೆ ಹಿಡಿದುಕೊಂಡು ಮುಂದುವರಿಯಬೇಕೆಂದು ಅವನು ಆಜ್ಞೆ ಮಾಡಿದನು. ಈ ರೀತಿಯಲ್ಲಿ ಕೊಂಬೆಗಳೊಂದಿಗೆ ಮುನ್ನಡೆಯುತ್ತಿದ್ದ ಸೈನ್ಯ, ದೂರದಿಂದ, ಸೈನಿಕನಲ್ಲಿ ಭೀತಿಯನ್ನು ಹುಟ್ಟಿಸುವ ನೋಟವಾಗಿ ಪರಿಣಮಿಸಿತು. ಹೀಗೆ, ಭೂತಗಳ ನುಡಿ ಮ್ಯಾಕ್‌ಬೆತ್ ಅರಿತಿದ್ದಕ್ಕಿಂತ ಭಿನ್ನವಾದ ರೀತಿಯಲ್ಲಿ ನಿಜವಾಯಿತು. ಅವನ ನಂಬಿಕೆಯಲ್ಲಿನ ಹಿರಿಯ ಕೊಂಡಿಯೊಂದು ಈಗ ಕಳಚಿಕೊಂಡಿತು.

ತೀವ್ರ ಯುದ್ಧ ಉಭಯ ಪಕ್ಷದವರಲ್ಲೂ ಮೊದಲಾಯಿತು. ಮ್ಯಾಕ್‌ಬೆತ್‌ನಿಗೀಗ, ಮಿತ್ರರೆಂದು ಕರೆದುಕೊಂಡೂ ಸಹ, ಹಿಂಸಕನ ಮೇಲಿನ ದ್ವೇಷದಿಂದ, ಮಾಲ್ಕೋಮ್ ಮತ್ತು ಮ್ಯಾಕ್‌ಡಫ್‌ರನ್ನು ಸೇರಲು ಇಚ್ಛಿಸುತ್ತಿದ್ದವರ ಕ್ಷೀಣ ಒತ್ತಾಸೆಯಿದ್ದಿತಷ್ಟೆ. ಆದರೂ ಸಹ ಅವನು ಅತಿಶಯ ಕ್ರೋಧ, ಕಾರ್ಯಗಳೊಡನೆ ಕಾದಾಡಿ ತನಗಿದಿರಾದವರನ್ನೆಲ್ಲಾ ಛಿನ್ನಛಿನ್ನವಾಗಿ ಕಡಿದುಹಾಕುತ್ತಾ, ಮ್ಯಾಕ್‌ಡಫ್ ಹೋರಾಡುತ್ತಿದ್ದೆಡೆಗೆ ಬಂದನು. ಮ್ಯಾಕ್‌ಡಫ್‌ನನ್ನು ಕಂಡಾಗ, ಅವನಿಂದ ಆದಷ್ಟುಮಟ್ಟಿಗೆ ತಲೆಮರೆಸಿಕೊಳ್ಳುವಂತೆ ಸಲಹೆ ಕೊಟ್ಟಿದ್ದ ಭೂತದ ಎಚ್ಚರಿಕೆಯ ಮಾತು ಅವನಿಗೆ ನೆನಪಾಯಿತು. ಆಗ ಅವನು ಹಿಂತಿರುಗುವುದರಲ್ಲಿದ್ದನು. ಆದರೆ ಯುದ್ಧ ಮೊದಲಾದಾಗಿನಿಂದ ಮ್ಯಾಕ್‌ಡಫ್ ಅವನನ್ನೇ ಹುಡುಕುತ್ತಿದ್ದುದರಿಂದ ಈಗವನು ಮ್ಯಾಕ್‌ಬೆತ್‌ನಿಗೆ ಹಿಂತಿರುಗಲು ಆಸ್ಪದ ಕೊಡದಂತೆ ಪ್ರತಿಭಟಿಸಿದನು. ಆಗ ಇಬ್ಬರಲ್ಲೂ ಭೀಕರ ಕಾಳಗ ನಡೆಯಿತು. ಮ್ಯಾಕ್‌ಡಫ್ ತನ್ನ ಹೆಂಡತಿ ಮಕ್ಕಳನ್ನು ಕೊಲೆ ಮಾಡಿದ್ದಕ್ಕಾಗಿ ಮ್ಯಾಕ್‌ಬೆತ್‌ನನ್ನು ನೀಚ ವಾಕ್ಯಗಳಿಂದ ನಿಂದಿಸಿದನು. ಆ ವಂಶದ ರಕ್ತಪಾತದಿಂದ ಸಾಕಷ್ಟು ಕಲುಷಿತಾತ್ಮನಾಗಿದ್ದ ಮ್ಯಾಕ್‌ಬೆತ್ ಆಗಲೂ ಸಹ ಕಾಳಗವನ್ನು ತಡೆದು ನಿಲ್ಲಿಸಿಬಿಡಲು ಸಿದ್ಧನಿದ್ದನು. ಆದರೆ ಮ್ಯಾಕ್‌ಡಫ್ ಅವನನ್ನು ಎಡಬಿಡದೆ ಕೆಣಕಿದನು. ಹಿಂಸಕ, ಕೊಲೆಗಡುಕ, ನರಕದ ನಾಯಿ, ಅಧಮ ಮುಂತಾದ ಹೆಸರುಗಳನ್ನು ಕರೆದು ಅವನನ್ನು ಕೆರಳಿಸಿದನು.

ಆಗ ಮ್ಯಾಕ್‌ಬೆತ್, ಸ್ತ್ರೀಯಿಂದ ಜನಿಸಿದ ಯಾವ ಪುರುಷನೂ ತನ್ನನ್ನು ನೋಯಿಸಲಾರರೆಂದು ಭೂತ ಹೇಳಿದ್ದ ಮಾತನ್ನು ಸ್ಮರಿಸಿಕೊಂಡನು. ಆತ್ಮವಿಶ್ವಾಸದಿಂದ ನಗುತ್ತಾ ಅವನು ಮ್ಯಾಕ್‌ಡಫ್‌ನನ್ನು ಕುರಿತು "ನಿನ್ನ ಕೆಲಸ ವ್ಯರ್ಥ ಮ್ಯಾಕ್‌ಡಫ್ ! ನನ್ನನ್ನು ಗಾಯಗೊಳಿಸುವುದು, ಕತ್ತಿಯನ್ನು ಹಿರಿದು ಗಾಳಿಯೊಂದಿಗೆ ಹೋರಾಡಿದಷ್ಟೇ ಸುಲಭ. ನನ್ನ ಜೀವನ ಮಂತ್ರಪೋಷಿತವಾಗಿದೆ. ಸ್ತ್ರೀಯಿಂದ ಜನಿಸಿದ ಯಾವನಿಗು ಅದು ಮಣಿಯುವುದಿಲ್ಲ" ಎಂದನು.

ಮ್ಯಾಕ್‌ಡಫ್ "ನಿನ್ನ ಮಂತ್ರದ ಆಶೆಯನ್ನು ತೊರೆ ನಿನ್ನ ಕುದೈವವಾದ ಆ ನಿನ್ನ ಹುಸಿಭೂತವೇ, ಮ್ಯಾಕ್‌ಡಫ್ ಯಾವ ಸ್ತ್ರೀಗೂ ಸಾಮಾನ್ಯ ಜನರು ಜನಿಸುವ ಬಗೆಯಲ್ಲಿ ಹುಟ್ಟಲಿಲ್ಲವೆಂದು ನಿನಗೆ ತಿಳಿಸಲಿ. ನಾನು ಅಕಾಲದಲ್ಲಿ ತಾಯಿಯ ಗರ್ಭದಿಂದ ತೆಗೆಯಲ್ಪಟ್ಟವನು !" ಎಂದನು.

ಮ್ಯಾಕ್‌ಬೆತ್ ನಡುಗುತ್ತಾ "ಇದನ್ನು ನನಗೆ ಹೇಳುತ್ತಿರುವ ನಾಲಿಗೆ ಹಾಳಾಗಲಿ" ಎಂದನು. ತನ್ನ ನಂಬಿಕೆಯ ಕೊನೆಯ ಕೊಂಡಿಯೂ ಕಳಚಿ ಕೊಂಡಿತೆಂಬುದನ್ನು ಅವನು ಗ್ರಹಿಸಿ, "ಮುಂದೆಂದೂ ಯಾವ ಮನುಷ್ಯನೂ ಹುಸಿಗಾತಿಯರಾದ ಮಂತ್ರವಾದಿನಿಯರ ದ್ವಂದ್ವಾರ್ಥಸೂಚಕ ನುಡಿಗಳನ್ನು ನಂಬದಿರಲಿ. ಗಾರುಡಿ ಮಾಡುವ ಭೂತಗಳನ್ನು ನಂಬದಿರಲಿ. ಅವರೆಲ್ಲ ದ್ವಂದ್ವಾರ್ಥವಿರುವ ಪದಗಳಿಂದ ನಮ್ಮನ್ನು ಮೋಸಗೊಳಿಸುವವರು. ತಮ್ಮ ವಚನವನ್ನು ಅರ್ಥಶಃ ಉಳಿಸಿಕೊಂಡು, ಇತ್ತ ಬೇರೊಂದು ಅರ್ಥದಲ್ಲಿ ನಮ್ಮ ಆಶಯುಗಳನ್ನೆಲ್ಲ ಹಾಳುಮಾಡುವವರು. ನಾನು ನಿನ್ನೊಂದಿಗೆ ಕಾದುವು ದಿಲ್ಲ" ಎಂದನು.

ಮ್ಯಾಕ್‌ಡಫ್ ತಾತ್ಸಾರದಿಂದ—"ಬದುಕು, ಹಾಗಿದ್ದರೆ ; ಮನುಷ್ಯರು ಪಿಶಾಚಿಗಳಿಗೆ ಮೆರವಣಿಗೆಯ ಪ್ರದರ್ಶನ ನಡೆಸುವಂತೆ ನಿನಗೂ ನಾವು ಪ್ರದರ್ಶನವೇರ್ಪಡಿಸಿ 'ಎಲ್ಲರೂ ಹಿಂಸಕನನ್ನು ಇಲ್ಲಿ ನೋಡಬಹುದು' ಎಂದು ಹಲಗೆಯಲ್ಲಿ ಬರೆಸಿ ಹಿಡಿಯುತ್ತೇವೆ " ಎಂದನು.

"ಎಂದಿಗೂ ಸಾಧ್ಯವಿಲ್ಲ" ಎಂದು ಚೀತ್ಕರಿಸಿದನು ಮ್ಯಾಕ್‌ಬೆತ್ ; ಹತಾಶೆಯೊಂದಿಗೆ ಅವನ ವೀರ್ಯವೂ ಮರಳಿತು. "ಕಿರಿಯನಾದ ಮಾಲ್ಕೋಮನ ಪಾದದಡಿಯ ಭೂಮಿಯನ್ನೂ ಚುಂಬಿಸಲು, ಮೂಢ ಜನತೆಯ ಶಾಸನಗಳಿಂದ ಹಳಿಸಿಕೊಳ್ಳಲು ನಾನೆಂದೂ ಬದುಕುವುದಿಲ್ಲ. ಒರ್ನಾಮ್ ಕಾಡು ಡನ್ಸಿನೇನ್‌ಗೆ ಬಂದರೂ ಸಹ, ಸ್ತ್ರೀಯಿಂದ ಜನಿಸಿಲ್ಲದ ನೀನು ನನಗಿದುರಾದರೂ ಸಹ, ಕೊನೆಯುವರೆಗೂ ಹೋರಾಡುತ್ತೇನೆ" ಎಂದು ಉದ್ರೇಕದಿಂದ ಮಾತನಾಡುತ್ತಾ ಅವನು ಮ್ಯಾಕ್‌ಡಫ್‌ನ ಮೇಲೆ ಬಿದ್ದನು. ತೀವ್ರವಾದ ಹೋರಾಟ ನಡೆಯಿತು. ಕೊನೆಗೆ ಮ್ಯಾಕ್‌ಡಫ್ ಅವನನ್ನು ಸೋಲಿಸಿ ತಲೆ ಕತ್ತರಿಸಿದನು. ಆ ತಲೆಯನ್ನು ಕಿರಿಯನಾದ ರಾಜನಿಗೆ ಕಾಣಿಕೆಯಾಗಿ ತಂದೊಪ್ಪಿಸಿದನು. ಕಪಟಿಯಾದ ರಾಜ್ಯಾಪ ಹಾರಿಯ ಸಂಚಿನಿಂದ ಈವರೆಗೂ ಕಳೆದುಕೊಂಡಿದ್ದ ರಾಜ್ಯದ ಆಡಳಿತವನ್ನು ಮಾಲ್ಕೋಮ್ ಈಗ ವಹಿಸಿಕೊಂಡು ಶ್ರೀಮಂತರೆಲ್ಲರ, ಪ್ರಜರೆಲ್ಲರ ಜಯಕಾರಗಳ ಮಧ್ಯೆ ಸಾಧು ಡಂಕನನ ಸಿಂಹಾಸನವನ್ನು ಏರಿದನು.

---